# ಪ್ರಸ್ತಾವನೆ.

ಯೋಗರಹಸ್ಯವು ಶ್ರೀಮದನಾದಿಪರಮೇಶ್ವರನಿಂದ ಕಾಮಿಕಾದಿ ದಿವ್ಯಾಗಮಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದು. ವೇದವೇದಾಂತಪುರಾಣಗಳಲ್ಲೂ ವರ್ಣಿತವಾಗಿರುವುದು. ಮತ್ತೂ ಶ್ವೇತಭುಶುಂಡವಾಮದೇವಾದಿ ಮುನೀಶ್ವರರಿಗೆ ಪರಶಿವನಿಂದುಪದಿಷ್ಟವಾಗಿರುವುದು.

“ ಚಿತ್ತೇಚಲತಿಸಂಸಾರೋನಿಶ್ಚಲೇಮೋಕ್ಷಏವಚ ” ಎಂಬ ಆಗಮಪ್ರಮಾಣದಪ್ರಕಾರ ಗಾಳಿಬೀಸಿದರೆ ಎಲೆಯಲ್ಲಾಡುವಂತೆ ಪ್ರಾಣಾಪಾನವಾಯುಚಲನೆಯಿಂದ ಮನಸ್ಸು ಚಪಲವಾಗುವುದು. ಅದರಿಂದ ಬಂಧಕ್ಕೆ ಕಾರಣವಾಗುವುದು. ಆ ವಾಯುಗಳನ್ನು ಬಂಧಿಸುವುದರಿಂದ ಮನಸ್ಸ್ಥಿರತೆಯುಂಟಾಗುವುದು. ಅದರಿಂದ ನಿಶ್ಚಲಸಮಾಧಿಯು ಪ್ರಾಪ್ತವಾಗಿ ಮುಕ್ತಿದೊರಕೊಳ್ಳುವುದು. ಎಂಬುದೇ ಯೋಗಶಾಸ್ತ್ರದ ಮುಖ್ಯತತ್ವವು. ನೈಷ್ಠಿಕನಾಗಿ ನಿರ್ವಿಘ್ನತೆಯಿಂದ ಕ್ರಮಯೋಗಾಭ್ಯಾಸವನ್ನು ಮಾಡುವವನಿಗೆ ಲೋಕಾಶ್ಚರ್ಯಗಳಾದ ಸರ್ವಸಿದ್ಧಿಗಳೂ ಉಂಟಾಗುವುವಲ್ಲದೆ, ಭೋಗಮೋಕ್ಷಗಳೂ ಅವನಧೀನವಾಗುವುವು. ಅಂಥ ಯೋಗಸಿದ್ಧನು ಜರಾಮರಣರಹಿತನಾಗಿ ಭೂಲೋಕದಲ್ಲಿ ತನ್ನಿಚ್ಛೆಯಿರುವವರೆಗೂ ಬದುಕಿದ್ದು ಅಂತ್ಯದಲ್ಲಿ ಮುಕ್ತಿಯನ್ನು ಪಡೆಯಬಹುದು. ಶ್ರೀಮದ್ರೇಣುಕಾಚಾರ್ಯರು ೧೪೦೦ ವರ್ಷಗಳವರೆಗೆ ಭೂಮಿಯಲ್ಲಿ ಜೀವಿಸಿದ್ದರೆಂದು ಪ್ರಖ್ಯಾತರಾಗಿರುವುದಕ್ಕೆ ಅವರು ಅಂತಹ ಮಹಾಯೋಗಸಿದ್ಧರಾಗಿದ್ದುದೇ ಕಾರಣವು.

ಮುಮುಕ್ಷುಗಳಿಗೆ ಪ್ರಿಯವಾದ ಈ ಶಾಸ್ತ್ರದ ಸಾರವನ್ನು ಲೋಕಹಿತಾರ್ಥವಾಗಿ ಸಂಕ್ಷೇಪಿಸಿ ಹೇಳಬೇಕೆಂಬ ಸದ್ಧೇತುವಿನಿಂದ ಶ್ರೀಚೆನ್ನಸದಾಶಿವಸ್ವಾಮಿಗಳವರು ಕಾಮಿಕಾದ್ಯಾಗಮಪ್ರೋಕ್ತ ಪ್ರಮಾಣವಚನಾಧಾರಗಳಿಂದ ಈಪ್ರಕರಣ ಗ್ರಂಥವನ್ನು ವಿರಚಿಸಿದರು.

ಇದರಲ್ಲಿ ಉತ್ತರೋತ್ತರಶ್ರೇಷ್ಠತೆಯುಳ್ಳ ಮಂತ್ರ-ಲಯ-ಹಠ-ರಾಜ ವೆಂಬ ಚತುರ್ವಿಧಯೋಗಗಳ ಲಕ್ಷಣವು ನಿರೂಪಿತವಾಗಿರುವುದಲ್ಲದೆ, ರಾಜಯೋಗಕ್ಕಿಂತಲೂ ಶ್ರೇಷ್ಠವೆನಿಸಿದ ಶಿವಯೋಗದ ಲಕ್ಷಣವೂ ಹೇಳಲ್ಪಟ್ಟಿರುವುದು.

ಕ್ರಿಯಾಜ್ಞಾನಸಂಮೇಳನದಿಂದ ಅಭ್ಯಾಸಮಾಡುವವರಿಗೇ ಯೋಗವು ಮುಕ್ತಿಸಿದ್ಧಿಯನ್ನುಂಟುಮಾಡುವುದು. “ ಯೋಗೋಪಿಜ್ಞಾನಹೀನಸ್ತು ನಕ್ಷಮೋಮೋಕ್ಷಕರ್ಮಣಿ। ತಸ್ಮಾದ್ಜ್ಞಾನಂಚಯೋಗಂಚ ಮುಮುಕ್ಷುರ್ದೃಢಮಭ್ಯಸೇತ್ ,, ಎಂಬ ಉಪ

ನಿಷವ್ಯಚನವು ಅದೇಅರ್ಥವನ್ನು ಹೇಳುರುವುದು. ಅದುಕಾರಣವೇ ಇದರಲ್ಲಿ ಸಾಲಂಬ ನಿರಾಲಂಬಪೂಜಾಧ್ಯಾನಗಳೆರಡೂ ವಿಹಿತವಾಗಿರುವುವು. ಶಿವತತ್ವದ ವ್ಯಕ್ತಾವ್ಯಕ್ತ ರೂಪಾನುಸಂಧಾನಧ್ಯಾನದಿಂದಲೇ ಮೋಕ್ಷಸಿದ್ಧಿಯಾಗುವುದಾದಕಾರಣ ಶಿವಪೂಜಾವಶ್ಯಕತೆಯು ಶಿವಯೋಗಕ್ಕೆ ಹೇಳಲ್ಪಟ್ಟಿರುವುದು. ಆ ಶಿವಪೂಜೆಯು ಶಿವಜ್ಞಾನ-ಶಿವಭಕ್ತಿ-ಶಿವಧ್ಯಾನ-ಶಿವವ್ರತವೆಂಬೀನಾಲ್ಕನ್ನೂ ಗರ್ಭೀಕರಿಸಿಕೊಂಡಿರುವುದು. ಈ ಶಿವಯೋಗಕ್ಕೇ ಹಠಯೋಗಾದಿಗಳು ಸಾಧನವು.

ವೀರಶೈವಮತವು ಜ್ಞಾನಕ್ರಿಯೋಭಯಾಂಗವಾಗಿರುವುದು. ಜ್ಞಾನಕ್ರಿಯಾಸಂಮೇಳನಸಾಧನದಿಂದ ಮುಕ್ತಿಸಿದ್ಧಿಯನ್ನು ಕೊಡುವ ಯೋಗಾಭ್ಯಾಸದಲ್ಲಿ ವೀರಶೈವಾಚರಣೆಯು ಸಮರಸಗೊಂಡಿರುವುದು. ಆದುದರಿಂದಲೇ ಅಷ್ಟಾಂಗಯೋಗಾಚರಣೆಯೇ ಭಕ್ತಾದಿಐಕ್ಯಾಂತವಾದ ಷಟ್ಸ್ಥಲಾಚರಣೆಯೆಂದೂ, ಈ ಅಷ್ಟಾಂಗಯೋಗವೇ ಶಿವಪೂಜಾಂಗವೆಂದೂ, ಶಿವಯೋಗವೇ ಷಟ್ಸ್ಥಲವೆಂದೂ, ಸಮಂಜಸಗೊಳಿಸಿ, ಈ ಗ್ರಂಥದಲ್ಲಿ ನಿರೂಪಿಸಲ್ಪಟ್ಟಿರುವುದು. ಈ ತತ್ವವನ್ನನುಸರಿಸಿ ಬಾಹ್ಯಾಂತರಂಗ ಶಿವಪೂಜಾನಿಷ್ಠನಾದವನು ಶಿವಯೋಗಿಯೆನಿಸಿಕೊಂಡು ಮೋಕ್ಷಲಾಭವನ್ನೈದುವನೆಂಬುದು ಈ ಗ್ರಂಥಪಠನದಿಂದ ವಾಚಕರಿಗೆ ಕರತಲಾಮಲಕವಾಗಿ ಸ್ಫುರಿಸುವುದು.

ಕನ್ನಡನಾಡಿನಲ್ಲಿ ತಾವು ಜನಿಸಿದುದಕ್ಕೆ ಕನ್ನಡಿಗರಿಗೆ ಹಿತವನ್ನುಂಟುಮಾಡಬೇಕೆಂಬ ಸದುದ್ದೇಶದಿಂದ ವೇದವೇದಾಂತಪುರಾಣಾಗಮ ಗರ್ಭಿತವಾದರ್ಥಗಳನ್ನು ಸಂಗ್ರಹಿಸಿ ಕನ್ನಡದಲ್ಲಿ ವಿವೇಕಚಿಂತಾಮಣ್ಯಾದಿ ಷಟ್ಶಾಸ್ತ್ರಗಳನ್ನು ಬರೆದು ವಿಖ್ಯಾತರಾದ ಶ್ರೀಮನ್ನಿಜಗುಣಶಿವಯೋಗಿಗಳು ರಚಿಸಿರುವ " ಪರಮಾರ್ಥಪ್ರಕಾಶಿಕೆ ,, ಎಂಬ ಗ್ರಂಥಕ್ಕೆ ಈ ಶಿವಯೋಗಪ್ರದೀಪಿಕೆಯೇ ಆಧಾರವು. ನಿಜಗುಣಶಿವಯೋಗಿಗಳಿಗೆ ಈ ಗ್ರಂಥಕರ್ತೃವಾದ ಶ್ರೀಚೆನ್ನಸದಾಶಿವಯೋಗೀಶ್ವರರು ಗುರುಗಳು. ಉಪಯುಕ್ತವಾದ ಈ ಶಿವಯೋಗಪ್ರದೀಪಿಕೆಯು ಗೀರ್ವಾಣಭಾಷೆಯಲ್ಲಿದ್ದುದರಿಂದ ಈ ತಮ್ಮ ಗುರುಕೃತಗ್ರಂಥವನ್ನು ಕನ್ನಡದಲ್ಲಿ ಪರಿವರ್ತಿಸಿ ನಿಜಗುಣರು ಲೋಕಹಿತವನ್ನು ಮಾಡಿದರು. ಈಚೆಗೆ ಶ್ರೀಬಸವಾರಾಧ್ಯರೆಂಬಾಚಾರ್ಯರು ಇದೇಗ್ರಂಥಕ್ಕೆ ಪ್ರತಿಪದಾರ್ಥಟೀಕೆಯನ್ನು ಬರೆದು ಪುಷ್ಟಿಗೊಳಿಸಿದರು. ಈ ಟೀಕೆಯಲ್ಲವೂ ಪರಮಾರ್ಥಪ್ರಕಾಶಿಕೆಯಲ್ಲಿ ಕಂಡ ಅಭಿಪ್ರಾಯವನ್ನೇ ಆದ್ಯಂತವಾಗಿ ಅನುಸರಿಸಿದೆ. ಪರಮಾರ್ಥಪ್ರಕಾಶಿಕೆಯು ಅನೇಕರಿಂದ ಮುದ್ರಿತವಾಗಿದೆ, ಅದಕ್ಕೆ ಮೂಲವಾದ ಈಗ್ರಂಥವುಮಾತ್ರ ಅಚ್ಚಾಗಿರಲಿಲ್ಲ. ಕರ್ನಾಟಕಟೀಕಾಸಮೇತವಾಗಿ ಇದನ್ನು ಅಚ್ಚುಮಾಡುವುದರಿಂದ ಮುಮುಕ್ಷುಗಳಿಗೆ ಅತ್ಯಂತಹಿತವಾಗುವುದೆಂದು ತೋರಿದುದರಿಂದಲೂ, ಶ್ರೀನಿರಂಜನಚರವರ್ಯ ಹಾನಗಲ್ಲು ಶ್ರೀಕುಮಾರಮಹಾಸ್ವಾಮಿಯವರ ಸತ್ಪ್ರಯತ್ನವಿಶೇಷದಿಂದ ಕನ್ನಡನಾಡಿನಲ್ಲಿ ಶಿವಯೋಗಮಂದಿರದಂತಹ ಉತ್ತಮಾಶ್ರಮವು ಸ್ಥಾಪಿತವಾಗಿ ಮೆರೆಸುತ್ತಿದ್ದು ಶಿವಯೋಗಸಾಧನಾದಿಕಾರ್ಯಗಳಿಗೆ ಉತ್ತೇಜನವು ದೊರೆದಿರುವ ಈಸಮ

ಯುದಲ್ಲಿ ಈತೆರದ ಗ್ರಂಥದ ಪ್ರಕಟನವು ಮತ್ತಷ್ಟು ಸಾಹಾಯ್ಯಕವಾಗುವುದೆಂಬ ಸದುದ್ದೇಶದಿಂದಲೂ ಈ ಗ್ರಂಥವು ಗ್ರಂಥಪ್ರಕಾಶಿಕೆಯಲ್ಲಿ ಮುದ್ರಿಸಲ್ಪಟ್ಟಿತು.

ಲೇಖಕರ ದೋಷಗಳಿಂದ ಈಗ್ರಂಥದ ತಾಳೆಪ್ರತಿಗಳು ಎಲ್ಲೆಲ್ಲೂ ಅಶುದ್ಧವಾಗಿರುವುವು. ನಮಗೆದೊರೆತ ಮೂರುಪ್ರತಿಗಳನ್ನಿಟ್ಟುಕೊಂಡು ಮೂಲವನ್ನೂ ಟೀಕೆಯನ್ನೂ ಅತ್ಯಂತಶ್ರಮದಿಂದ ಸಾಧ್ಯವಾದಮಟ್ಟಿಗೂ ಚೆನ್ನಾಗಿ ಪರಿಶೋಧಿಸಿ ಮುದ್ರಿಸಿರುವೆವು. ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯಿಂದ ದೊರೆದಿದ್ದ ಒಂದುಪ್ರತಿಯೂ ಎಳಂದೂರಿನ ಮ॥ ಶಾಸ್ತ್ರಿ ಸುಬ್ಬಣ್ಣನವರಿಂದ ದೊರೆದಿದ್ದ ಒಂದು ಪ್ರತಿಯೂ ಇದರ ಪರಿಶೋಧನಕಾರ್ಯದಲ್ಲಿ ತುಂಬಾ ಸಹಾಯಿೀಕರಿಸಿದುದಕ್ಕಾಗಿ ಅವರುಗಳಿಗೆ ನಾವು ಕೃತಜ್ಞರಾಗಿರುವೆವು.

೨೪-೬-೧೯೧೪ }
ಮೈಸೂರು. }

ಎಚ್. ಆರ್. ಕರಿಬಸವಶಾಸ್ತ್ರಿ.

---

## ವಿಷಯಸೂಚಿಕೆ.

# ಶುದ್ಧಾಶುದ್ಧ ಪತ್ರಿಕೆ.

| ಅಶುದ್ಧ | ಶುದ್ಧ | ಪುಟ | ಪಜ್ತಿ |
|---|---|---|---|
| "ಹಾಂ" ಎಂಬ | "ಹ್ರಾಂ" ಎಂಬ | ೫ | ೯ |
| ಪತ್ಯೇಕವಾಗಿ | ಪ್ರತ್ಯೇಕವಾಗಿ | ೬ | ೨೧ |
| ವಕಾರಾಂತವಾದ | ಮಕಾರಾಂತವಾದ | ,, | ೨೯ |
| ವೆನಿಸುಪುದು | ವೆನಿಸುವುದು | ೭ | ೧೦ |
| ಸ್ತೋ್ರಟಕಂ | ಸ್ತ್ರೋಟಕಂ | ೧೧ | ೫ |
| ದುತ್ತರಯಾದ | ದುತ್ತರವಾದ | ೧೩ | ೧೬ |
| ಮಃತಾಂತರ | ಮತಾಂತರ | ೧೫ | ೧೪ |
| ದ್ರುತಿ | ಪ್ರತಿ | ,, | ೧೬ |
| ಶ್ಯಾಂತ್ಯತೀತಾ | ಶಾಂತ್ಯತೀತಾ | ೧೭ | ೧೫ |
| ವೇದಮಂತ್ರ | ವೇಧಾಮಂತ್ರ | ೨೨ | ೩೦ |
| ಸುಖ ಸೀನಂ | ಸುಖಾಸೀನಂ | ೨೬ | ೧೮ |
| ಸ್ವಾತ್ಮನ್ಯೈವ | ಸ್ವಾತ್ಮನ್ಯೈವ | ೩೦ | ೨೬ |
| ಸಿರದೃಷ್ಟಿ | ಸ್ಥಿರದೃಷ್ಟಿ | ೩೪ | ೨೫ |
| ದಾಕ್ಷೆ | ದ್ರಾಕ್ಷೆ | ೩೭ | ೧೭ |
| ಸಮುವೃದ್ಧಿ | ಸವೃದ್ಧಿ | ,, | ೧೮ |
| ಸಮುಸ್ತೋಷಧಿ | ಸಮುಸ್ತೋಷಧ | ,, | ೧೯ |
| ವಿಧಾದೇನ | ವಿಧಾನೇನ | ೩೯ | ೨೧ |
| ಸೂಸುಪುದೇ | ಸೂಸುವುದೇ | ,, | ೨೫ |
| ವಿಷ್ಣುಪದೇತಿ | ವಿಷ್ಣುಪದೀತಿ | ೪೪ | ೨೩ |
| ಯುಥಾ-ಹೇಂ | ಯುಥಾ-ಹೇಗೆ | ೪೮ | ೪ |
| ಪೇಳ್ದಗಂ | ಪೇಳ್ದಪಂ | ,, | ೨೫ |
| ಪೂರಾಣ | ಪುರಾಣ | ೫೪ | ೪ |
| ವರ್ಣೋತ್ಪಿತ್ತಗೆ | ವರ್ಣೋತ್ಪತ್ತಿಗೆ | ೬೦ | ೨೯ |
| ಧರಣಿಯೆಂದು | ಧಾರಣಿಯೆಂದು | ೬೭ | ೩೦ |
| ಜೀವನ್ಮುಕ | ಜೀವನ್ಮುಕ್ತ | ೭೫ | ೨೦ |
| ದ್ವಾಗಶಕೇ | ದ್ವಾದಶಕೇ | ೭೭ | ೧೪ |

| | | | |
|---|---|---|---|
| ಚೆನ್ನಾಗಿಸಿದವು | ಚೆನ್ನಾಗಿಸಿದ್ಧವು | ೩೮ | ೩ |
| ಕ್ಯೋದ್ವೃತ | ಕ್ಯೋಽದ್ವೃತ | ೩೯ | ೨೩ |
| ಲಯಯೋಗಂಗಳ | ಲಯಯೋಗಹಠಯೋಗಂಗಳ | ೮೧ | ೩ |
| ಬಹ್ಮ | ಬ್ರಹ್ಮ | ೮೩ | ೧೮ |
| ಪೂರವಮಾಡುತ್ತಾ | ಪೂರವಮಾಡುತ್ತ | ೯೦ | ೧೯ |
| ನ್ಮುಖ್ಯತ್ವವೇ | ನ್ಮುಖತ್ವವೇ | ೯೧ | ೩ |
| ಅಹನ | ಅಹಂನ | ೯೪ | ೯ |
| ಶತಿಯಿಂದವೂ | ಶೃತಿಯಿಂದವೂ | ೯೯ | ೩೦ |
| ದ್ಬಭ್ರುವ್ | ದ್ಬಭ್ರುವೌ | ೧೦೦ | ೧೫ |
| ತತ | ತತ್ರ | ೧೦೪ | ೨೯ |
| ದೂಮ್ರಾದಿ | ಧೂಮ್ರಾದಿ | ೧೦೫ | ೨೨ |
| ಂಗಳಂ | ಶಂಗಳಂ | ೧೦೬ | ೩೦ |
| ವಿಶುದಿ | ವಿಶುದ್ಧಿ | ೧೧೧ | ೨೬ |
| ತಸಿನ್ನಯುಂ | ತಸ್ಮಿನ್ನಯುಂ | ,, | ೨೯ |
| ವ್ಯಾವಾತ | ವ್ಯಾಘಾತ | ೧೧೩ | ೫ |
| ರಸ ನ್ನಿಭಂ | ರಸಸನ್ನಿಭಂ | ೧೨೧ | ೧೫ |
| ಬಂದಿಳಿವುದಾಗಿ | ಬಂಧವಳಿವುದಾಗಿ | ೧೩೬ | ೬ |
| ಭಿನ್ನಕಾಂವಸ್ತು | ಭಿನ್ನಕಾಂಸ್ಯಂ | ೧೩೯ | ೨೪ |
| ಸವಾರ್ಥನಾದಂಥ | ಸಮರ್ಥನಾದಂಥ | ೧`೪ | ೧೬ |




ಓಂ.

ಶ್ರೀಗುರುಬಸವಲಿಂಗಾಯನಮಃ.

# ಸಟೀಕಾ ಶಿವಯೋಗಪ್ರದೀಪಿಕಾ.



ಶ್ಲೋ॥ ಪರಮಯೋಗಿಮನೋಂಬುಜಷಟ್ಪದಂ ತ್ರಿವಿಧ
ಕಾರಣಕಾರಣಮವ್ಯಯಂ। ಸಗುಣನಿರ್ಗುಣತತ್ವಮ
ನಾಮಯಂ ಗುರುಸದಾಶಿವಲಿಂಗಮಹಂ ಭಜೇ॥೧॥



(ಟೀಕಾ)

ವಂದೇ ಶಿವಂ ಶಿವಾನನ್ಯಾಂ ಶಕ್ತಿಂ ವಾಗೀಶ್ವರೀಂ ತಥಾ। ತತ್ವ
ಸ್ಯೋದ್ಬೋಧನೇ ಶಕ್ತಾ ಮಾಚಾರ್ಯೋತ್ತಮ ಮಪ್ಯಹಂ ॥೧॥

ವಿದ್ಯಾದಾನನಿಧಿಂ ವಿವೇಕಲತಿಕಾಧಾತ್ರೈಕಕಲ್ಪದ್ರುಮಂ
ವೀತಾಶೇಷವಿಶೇಷದೋಷವಿಬುಧೈಸ್ಸಂಸೇವ್ಯಮಾನಂ ಸದಾ।
ವಿಶ್ವೇಶಾನನಜಾತತಾಂತ್ರಿಕಕಲಾದೀಕ್ಷೈಕದಕ್ಷಂ ಶಿವ
ಜ್ಞಾನೋನ್ಮೀಲನಕಾರಿಚೆನ್ನಬಸವೇಶಾಖ್ಯಂಗುರುಂಸಂಶ್ರಯೇ॥೨॥

ಯೋಗೀಶ್ವರಪ್ರಾರ್ಥಿತೇನ ಬಸವಾರಾಧ್ಯಧೀಮತಾ।
ಸಟೀಕಾಕ್ರಿಯತೇಸೇಯಂಶಿವಯೋಗಪ್ರದೀಪಿಕಾ ॥೩॥

ಆನಿಮೂಪನಿಷದ್ಭಸಂಮತ್ಯಾ ರಹಸ್ಯಾರ್ಥಪ್ರಕಾಶಿಕಾ।
ಶ್ರುತಿಸೂತ್ರಾದಿಯಂ ಬ್ರಹ್ಮಸಾಕ್ಷಾತ್ಕಾರವಿಧಾಯಿನೀ ॥೪॥

ಭೂಮಿಯಾದ ಪರಿಪೂರ್ಣನಿಷ್ಕಲಸ್ವರೂಪವಾದ ಶಿವತತ್ವವನ್ನು, ವಿದಾಂ-ಬಲ್ಲವರ್ಗಳಿಗೆ, ಶ್ರೇಷ್ಠ-ಮುಖ್ಯನಾದ ಎಲೆಯೋಗೀಶ್ವರನೆ, ಶಿವಯೋಗಂ-ಶಿವಯೋಗವನ್ನು, ಪರಂ-ಮುಖ್ಯವಾಗಿ, ಗುಹ್ಯಮಪಿ-ಗೋಪ್ಯವಾದ್ದಾದರೂ, (ಶಿವನಾನೊರ್ವನು ಬಲ್ಲತನಮಂ ಮೆರೆಯಲೆಂದೂ ಲೌಕಿಕಪ್ರಯೋಜನಮಂ ಪಡೆಯಲೆಂದೂ, ಅಯೋಗ್ಯನಂ ಮೋಸದಿಂ ಯೋಗ್ಯನೆಂದು ತಿಳಿದೂ ಶಿವಜ್ಞಾನಮಂಬೋಧಿಸುತ್ತಿರ್ದಪನಾತಂಗೆ ಡಾಕಿನೀದೇವಿಯೆಂಬ ಮಂತ್ರಶಕ್ತಿಯು ಶಾಪಂ ಬಹುದು. "ಪಾಂಡಿತ್ಯಾದರ್ಥಲೋಭಾದ್ವಾ ಪ್ರಮಾದಾದ್ಯಃಪ್ರಯುಚ್ಛತಿ। ತಸ್ಯಾವಶ್ಯಂಮಹಾಘೋರೋ ಡಾಕಿನೀಶಾಪಶ್ಚಪತೇತ್॥" ಎಂದುಂಟಾಗಿ, ಇದುನಿಮಿತ್ತಂ ಗೋಪ್ಯವೆಂಬುದರ್ಥಂ) ತ್ವದ್ಭಕ್ತಿಗೌರವಾತ್-ತ್ವತ್-ನಿನ್ನ, ಭಕ್ತಿಗೌರವಾತ್-ಭಕ್ತ್ಯತಿಶಯದ ದೆಸೆಯಿಂದ, ತೇ-ನಿನಗೆ, ಅಧುನಾ-ಈಗ, ವಕ್ಷ್ಯಾಮಿ-ಹೇಳುತ್ತಿಹೆನು, ಶೃಣು-ಕೇಳು. ॥೩॥

ಸೂ—ಶಿವಸಮಾನತೆಯಿಂದಪ್ಪ ಶಿವಯೋಗಕ್ಕೆ ಸಾಧನವಪ್ಪುದರಿಂ ಯೋಗವೆಂಬ ಪೆಸರಂ ತಾಳ್ದ ಮಂತ್ರಾದಿ ಯೋಗಂಗಳು ನಾಲ್ಕೆಂದು ಪೇಳ್ದಪಂ:—

ಶ್ಲೋ॥ ಮಂತ್ರೋಲಯೋಹಠೋರಾಜಯೋಗಶ್ಚೇತಿಚತುರ್ವಿಧಃ ।
ತಮಾಹುಃಪೂರ್ವಮುನಯಸ್ಸಿದ್ಧಾಶ್ಶಂಭುಪ್ರಬೋಧಿತಾಃ ॥೪॥

ಟೀ॥ ಮಂತ್ರಃ-ಮಂತ್ರಯೋಗವೆಂದೂ, ಲಯಃ-ಲಯಯೋಗವೆಂದೂ, ಹಠಃ-ಹಠಯೋಗವೆಂದೂ, ರಾಜಯೋಗಶ್ಚ-ರಾಜಯೋಗವೆಂದೂ, ಈ ಭೇದದಿಂದೆ, ತಂ-ಆ ಯೋಗವನು, ಚತುರ್ವಿಧಂ-ನಾಲ್ಕುಪ್ರಕಾರವೆಂದು, ಶಂಭುಪ್ರಬೋಧಿತಾಃ ಶಂಭು-ಶ್ರೀಕಂಠೇಶ್ವರನಿಂದೆ, ಪ್ರಬೋಧಿತಾಃ-ಉಪದೇಶಿಸಲ್ಪಟ್ಟಂಥ, ಸಿದ್ಧಾಃ-ಶಿವಯೋಗಸಿದ್ಧರಾಗಿದ್ದಂಥ, ಪೂರ್ವಮುನಯಃ-ಪ್ರಾಚೀನರಾದ ಶ್ವೇತಾದಿಮುನೀಶ್ವರರು, ಆಹುಃ-ಹೇಳುವರು. (ಆಮುನಿಗಳಾರಾರೆಂದೊಡೆ:-ಶ್ವೇತ, ದಮನ,(ಮದನ)ಸುವಾಲೋಕ, ಸುಹೋತ್ರ, ಕಂಕ, (ಕಂಕಣ)ಲೋಕಾಕ್ಷಿ, ಜೈಗೀಷವ್ಯ, ದಧಿವಾಹ, ವೃಷಭ, ಉಗ್ರ, ಅತ್ರಿ ಸುಬಾಲಕ,(ಸ-ಧಾರಕ) ಗೌತಮ, ವೇದಶಿರ,(ವೇದಶಿಖಿ)ಗೋಕರ್ಣ, ಗುಹಾವಾಸಿ, ಶಿಖಂಡಿ, ಜಟಾಮಾಲಿ, ಅಟ್ಟಹಾಸ, (ಚಾರುಹಾಸ) ದಾರುಕ, ಲಾಂಗುಲಿ, ಮಹಾಕಾಯ, ಶೂಲಿ, ದಂಡಿ,(ಡಿಂಡಿ)ಮುಂಡಿ, ಸಹಿಷ್ಣು, ಸೋಮಶರ್ಮ,(ಸರ್ವೇಶ್ವರ)ಲಕುಲೀಶರೆಂಬ ಇಪ್ಪತ್ತೆಣ್ಬರೂ ಶಿವಾನುಗ್ರಹೀತರು. ಈ ಮುನಿಗಳ್ಗೆ ಪ್ರತ್ಯೇಕಪ್ರತ್ಯೇಕವಾಗಿ ನಾಲ್ವರು ನಾಲ್ವರುಶಿಷ್ಯರಾಗಲಾಗಿ, ಶ್ವೇತ ಶ್ವೇತಶಿಖಾದಿಯಾಗಿ ಮಿತ್ರಕೌರುಷ್ಯರೇ ಅಂತ್ಯವಾಗಿ ನೂರಹನ್ನೆರಡು ಶಿಷ್ಯರ ವರ್ಗಂಗೂಡಿ ಇವರ್ಮುನೀಶ್ವರರೆನಿಸಿಕೊಂಬರು. ಈಯರ್ಥವಲ್ಲಿ ವಾಯುವೀಯಸಂಹಿತೆಯೊಳಗೆ-"ಅಷ್ಟಾವಿಂಶತಿಸಂಖ್ಯಾಕಾ ಯೋಗಾಚಾರ್ಯಾ ಯುಗಕ್ರಮಾತ್ । ಶಿಷ್ಯಾಃಪ್ರತ್ಯೇಕಮೇತೇಷಾಂ ಚತ್ವಾರಶ್ಶಾಂತತೇಜಸಃ ॥ ರುದ್ರಾಕ್ಷಮಾಲಾಭರಣಾಸ್ತ್ರಿಪುಂಡ್ರಾಂಕಿತಮಸ್ತಕಾಃ । ಶಿಖಾಜಟಾಸ್ಸರ್ವಜಟಾಶ್ಯಜಟಾಮ್ಮುಂಡಶೀರ್ಷಕಾಃ" ಇತಿ.)

ಸೂ॥ ಈ ಕ್ರಮದಿಂ ಮೊದಲ್ಪೇಳ್ದ ಮಂತ್ರಯೋಗದ ಲಕ್ಷಣಮಂ ಪೇಳ್ದಪಂ-

ಶ್ಲೋ॥ ಏಕಾಕ್ಷರಂ ದ್ವ್ಯಕ್ಷರಂವಾ॥ಷಡಕ್ಷರಮಥಾಪಿವಾ।
ಅಷ್ಟಾಕ್ಷರಂವಾಮೋಕ್ಷಾಯಮಂತ್ರಯೋಗೀಜಪೇತ್ಸದಾ॥೫॥

ಟೀ॥ ಏಕಾಕ್ಷರಂ-ಅಕಾರ ಉಕಾರ ಮಕಾರಂಗಳೊಡನವಿಭಾಗರೂಪದಿಂದೇಕಾಕ್ಷರವೆನಿಸಿಕೊಂಬ ಸಕಲ ಮಂತ್ರಶಿರೋಮಣಿಯೆನಿಸುಪ ಓಂಕಾರವೆಂಬ ಮೂಲ ಮಂತ್ರವನಾದರೂ, ಮೇಣ್ ನಾದ ಗುಹ್ಯ ಪರ ಜೀವ ದೇಹ ಭೂತಪಂಚಮ ಸಾಂತ ತತ್ವಾಂತ ಭೂತಾಂತ ಶಿವಾರ್ಣ ಶೂನ್ಯ ಅವ್ಯಯಂಗಳೆಂಬ ನಾಮಂಗಳಿಂದೊಪ್ಪುವ "ಹ" ಎಂಬ ಶುದ್ಧಪ್ರಸಾದವನಾದರೂ "ಹ್ರೀಂ" ಎಂಬ ಮೂಲಪ್ರಸಾದವನಾದರೂ, "ಹಂ" ಎಂಬ ತತ್ವಪ್ರಸಾದವನಾದರೂ, "ಹೌಂ" ಎಂಬ ಆದಿಪ್ರಸಾದವನಾದರೂ, ದ್ವ್ಯಕ್ಷರಂವಾ-ಎರಡಕ್ಷರರೂಪವಾದ "ಹಂಸ" ಎಂಬ ಆತ್ಮಪ್ರಸಾದ ಮಂತ್ರವನಾದರೂ,ಶಿವಾನುಗ್ರಹದಿಂದೆ ಅಭಿವ್ಯಕ್ತರೂಪವಾದ ತನ್ನ ಅನಾದಿಶಿವತತ್ವದ ಪರಾಮರ್ಶರೂಪವಾದ "ಸೋಹಂ" ಜಪವನಾದರೂ, ಷಡಕ್ಷರಂವಾ-ಸಪ್ತಕೋಟಿಮಹಾಮಂತ್ರಗಳಿಗೆ ಮುಖ್ಯವಾದ ತಾಂತ್ರಿಕವೈದಿಕಸಿದ್ಧವಾದ ಷಡಕ್ಷರಮಂತ್ರವನಾದರೂ, ಅಷ್ಟಾಕ್ಷರಂವಾ-"ಓಂ ಹ್ರೀಂ ಹ್ರೂಂ ನಮಶ್ಶಿವಾಯ" ಎಂಬ ಅಷ್ಟಾಕ್ಷರ ಮಂತ್ರವನಾದರೂ, ಮಂತ್ರಯೋಗೀ-ಮಂತ್ರಯೋಗಾಭ್ಯಾಸವುಳ್ಳಾತನು, ಸದಾ-ಅನವರತವೂ, ಮೋಕ್ಷಾಯ-ಮೋಕ್ಷಮಂಪಡೆಯಲೋಸ್ಕರ, ಜಪೇತ್-ಜಪಿಸುವುದು. (ತಾತ್ಪರ್ಯ:—ಆ ಜಪಯಜ್ಞವೇ ಸಮಸ್ತಯಜ್ಞಂಗಳಿಗೆ ವಿಶೇಷಮಪ್ಪುದರಿಂದೀಜಪಯಜ್ಞಮಂ ಮಾಳ್ಪ ಪ್ರಕಾರವೆಂತೆಂದೊಡೆ- ಜಪೋಪದೇಶಮಂ ಪಡೆದ ಪುರುಷನು ಬ್ರಾಹ್ಮೀಮುಹೂರ್ತದೊಳ್ಶಿವಧ್ಯಾನಮಂ ಮಾಡುತ್ತಲೆದ್ದು, ಶೌಚಾಚಮನದಂತಧಾವನಾದಿಗಳಂ ಮಾಡಿ, ಜಲಸ್ನಾನ ಭಸ್ಮಸ್ನಾನಾದಿಗಳನಾಚರಿಸಿ, ಆಗಮೋಕ್ತವಿಧಾನದಿಂದೀಶ್ವರಪೂಜೆಯಂ ಮಾಡಿ, ಶ್ರೀಗುರುವ ನಾರಾಧಿಸಿ, ಏಕಾಂತಸ್ಥಲವೊಳ್ ದರ್ಭಾಸನ ಚರ್ಮಾಸನ ವಸ್ತ್ರಾಸನ ಕಂಬಳಾಸನಾದಿಕದಲ್ಲಿ ಪೂರ್ವಮುಖವಾಗಿಯಾಗಲೀ ಮೇಣುತ್ತರಮುಖವಾಗಿಯಾಗಲೀ ತನಗಿಷ್ಟವಾದಾಸನದೊಳ್ಕುಳಿತು, ಪ್ರಾಣಾಯಾಮತ್ರಯಮಂಮಾಡಿ, ಆಯಾ ಮಂತ್ರೋದಿತಂಗಳಾದ ಋಷಿ ಛಂದಸ್ಸು ಅಧಿದೇವತೆ ಬೀಜ ಶಕ್ತಿಗಳಂ ಶಿರಸ್ಸಾದಿಯಾಗಿ ಪಾದಾಂತಮಾದಾಯಾಸ್ಥಲಂಗಳೊಳ್ಮುಟ್ಟಿ ಮುಟ್ಟಿ ಸ್ಮರಿಸುತ್ತ, ಕ್ರಮದಿಂ ಮೊದಲ್ ಸೃಷ್ಟಿ ಸ್ಥಿತಿ ಸಂಹಾರ ಕ್ರಮಂಗಳ ಸರಿದಾಶ್ರಮಭೇದಾನುಸಾರದಿಂ ಕರನ್ಯಾಸ ದೇಹನ್ಯಾಸ ಷಡಂಗನ್ಯಾಸಂಗಳಂ ಮಾಡಿ, ಆಯಾಮಂತ್ರಕಲ್ಪೋಕ್ತವಿಧಾನದಿಂ ಮಂತ್ರಪುರಶ್ಚರಣಮಂ ನಿತ್ಯಜಪಾನುಷ್ಠಾನಮಂ ಮೋಕ್ಷಾರ್ಥಿಯಾದಾತನು ರುದ್ರಾಕ್ಷೆಗಳ್ನೂರೆಂಟರಿಂದಾಗಲಿಪ್ಪತ್ತೈದರಿಂದಾಗಲಾಗಮೋಕ್ತಮಾರ್ಗದಿಂದಾದ ಜಪಮಾಲಿಕೆಯಿಂದಂಗುಷ್ಠಮಧ್ಯಮೆಗಳಿಂದುಪಾಂಶುರೂಪದಿಂ ಧ್ಯಾನಪೂರ್ವಕಮಾಗಿ ಜಪಂಮಾಳ್ಪುದು. ಅದರೊಳಷ್ಟಾಕ್ಷರಮಂತ್ರಾನುಷ್ಠಾನಸ್ವರೂಪಮೆಂ

ತೆಂದೊಡೆ-" ಓಂ ಅಸ್ಯಪ್ರಸಾದಪಂಚಾಕ್ಷರಮಂತ್ರಸ್ಯ ವಾಮದೇವಋಷಿಃ-ತ್ರಿಷ್ಟುಪ್‌ಛಂದಃ-ಶ್ರೀಸದಾಶಿವೋದೇವತಾ-ಓಂಬೀಜಂ-ಹ್ರಾಂಶಕ್ತಿಃ-ಚತುರ್ವಿಧಪುರುಷಾರ್ಥಸಿದ್ಧ್ಯರ್ಥೆ ಜಪೇವಿನಿಯೋಗಃ, ಯಥಾಶಕ್ತಿ ಜಪಂಕರಿಷ್ಯೇ" ಇತಿಸಂಕಲ್ಪ್ಯ,ಷಡಂಗನ್ಯಾಸಂಕುರ್ಯಾತ್—"ಓಂ ಹ್ರಾಂ ಓಂ ಸರ್ವಜ್ಞಶಕ್ತಿಧಾಮ್ನೇಗುಹ್ಯಾತಿಗುಹ್ಯಾಯ ಹೃದಯಾಯನಮಃ,ಓಂ ಹ್ರೀಂ ನಂ ತೃಪ್ತಿಶಕ್ತಿಧಾಮ್ನೇ ಗೋಪ್ತ್ರೇ ಶಿರಸೇಸ್ವಾಹಾ, ಓಂ ಹ್ರೂಂ ಮಂ ಅನಾದಿಬೋಧಶಕ್ತಿಧಾಮ್ನೇ ನಿಧನಾಯ ಶಿಖಾಯೈವಷಟ್, ಓಂ ಹ್ರೈಂ ಶಿಂ ಸ್ವತಂತ್ರಶಕ್ತಿಧಾಮ್ನೇ ಸರ್ವವಿದ್ಯಾಧಿಪಾಯ ತೇಜೋರೂಪಾಯ ಕವಚಾಯಹುಂ, ಓಂ ಹ್ರೌಂ ವಾಂ ಅಲುಪ್ತಶಕ್ತಿಧಾಮ್ನೇ ಪರಮೇಶ್ವರಾಯ ನೇತ್ರತ್ರಯಾಯವೌಷಟ್, ಓಂ ಹ್ರಃ ಯಂ ಅನಂತಶಕ್ತಿಧಾಮ್ನೇ ಜ್ಯೋತೀರೂಪಾಯ ಅಸ್ತ್ರಾಯಫಟ್." ಎಂಬೀ ಮಂತ್ರಂಗಳಿಂ ಷಡಂಗನ್ಯಾಸಮಂ ಮಾಡುವುದು. ಮೂರ್ತಿಧ್ಯಾನ,-"ಶಾಂತಂ ಪದ್ಮಾಸನಸ್ಥಂ ಶಶಧರಮಕುಟಂ ಪಂಚವಕ್ತ್ರಂ ತ್ರಿನೇತ್ರಂ ಶೂಲಂ ವಜ್ರಂಚ ಖಡ್ಗಂ ಪರಶು ಮಭಯದಂ ದಕ್ಷಭಾಗೇ ವಹಂತಂ। ನಾಗಂ ಪಾಶಂಚ ಘಂಟಾಂ ಪ್ರಲಯಹುತವಹಂ ಸಾಂಕುಶಂ ವಾಮಭಾಗೇ ನಾನಾಲಂಕಾರದೀಪ್ತಂ ಸ್ಫಟಿಕಮಣಿನಿಭಂ ನೌಮಿ ಸಾದಾಖ್ಯತತ್ವಂ" (ಪಾರ್ವತೀಶಂನಮಾಮಿ) ಎಂದುಂಟಾಗಿ, ಅಷ್ಟಾಕ್ಷರಮಂತ್ರವನಾದರೂ ಜಪಿಸುವುದು. ಬಳಿಕೀ ಮಂತ್ರದಿಂದುತ್ತರವಾದ ಷಡಕ್ಷರಮಂತ್ರಾನುಷ್ಠಾನಸ್ವರೂಪವೆಂತೆಂದೊಡೆ,—" ಅಸ್ಯ ಶ್ರೀಷಡಕ್ಷರಮಂತ್ರಸ್ಯ ವಾಮದೇವಋಷಿಃ—ಪಙ್ತಿಛಂದಃ-ಶ್ರೀಸದಾಶಿವೋದೇವತಾ-ಪ್ರಣವಂಬೀಜಂ-ಉಮಾಶಕ್ತಿಃ-ಉದಾತ್ತಸ್ವರಶ್ಶ್ವೇತವರ್ಣಃಶಿಸೌ-ಶ್ರೀಸದಾಶಿವಪ್ರೀತ್ಯರ್ಥೇಜಪೇವಿನಿಯೋಗಃ" ಎಂದು ಸ್ಮರಿಸಿ, ಬಳಿಕಾ ಮಾಂತ್ರಿಕಂ ಮಂತ್ರರೂಪನಾಗಿಯೇ ಮಂತ್ರಮಂ ಜಪಿಸಲ್ವೇಕಾಗಿ, ಆ ಮಂತ್ರವರ್ಣನ್ಯಾಸಂ ಕ್ರಮದಿಂ ಕರನ್ಯಾಸಮೆಂದು ದೇಹನ್ಯಾಸವೆಂದು ಷಡಂಗನ್ಯಾಸಮೆಂದು ತ್ರಿವಿಧಮಪ್ಪುದಾಗಿ, ಬಳಿಕ್ಕದೇ ಪ್ರತ್ಯೇಕವಾಗಿ ಉತ್ಪತ್ತಿ ಸ್ಥಿತಿ ಸಹ್ಮಾರವೆಂದು ಮೂರುಪ್ರಕಾರಮಪ್ಪುದದೆಂತೆಂದೊಡೆ- ಯಕಾರಾದಿ ಪಂಚವರ್ಣಂಗಳಂ ಹಸ್ತದ್ವಯಂಗಳೊಳಂಗುಷ್ಠಾದಿ ಕನಿಷ್ಠಾಂತಮಾಗಿ ನ್ಯಾಸಮಂಮಾಡಿ,ಪ್ರಣವಮಂ ಕರತಲಕರಪೃಷ್ಠಂಗಳೊಳಂಗಯ್ಗಳಿಂದೂರ್ಧ್ವಮುಖವಾಗಿ ನ್ಯಾಸಮಂಮಾಡುವುದು ಬ್ರಹ್ಮಚಾರಿಗೆ ಯೋಗ್ಯಮಾದ ಸೃಷ್ಟಿನ್ಯಾಸಮೆನಿಪುದು. ತದ್ವಿಪರೀತದಿಂ ನಕಾರಾದ್ಯಕ್ಷರಂಗಳಂ ಕನಿಷ್ಠಾದಿ ಅಂಗುಷ್ಠಾಂತಮಾಗಿ ನ್ಯಾಸಮಂಮಾಡಿ ಪ್ರಣವಮಂ ಕರತಲಕರಪೃಷ್ಠಂಗಳೊಳಂಗುಲಿಗಳಿಂದಧೋಮುಖವಾಗಿ ನ್ಯಾಸಮಂಮಾಡಲದು ಯತೀಶ್ವರರ್ಗೆ ಯೋಗ್ಯಮಾದ ಸಹ್ಮಾರನ್ಯಾಸಮೆನಿಪುದು. ಅಂಗುಲಿಗಳ ಮಧ್ಯಮಾದಿಯಾಗಿ ತರ್ಜನ್ಯಂತಮಾಗಿ ಶಿಕಾರಾದಿ ವಕಾರಾಂತಮಾದ ವರ್ಣಂಗಳ ನ್ಯಾಸಮಂ ಮಾಡಿ, ಪ್ರಣವಮಂ ಕರತಲಕರಪೃಷ್ಠಂಗಳೊಳಂಗುಲಿಗಳಿಂ ತಿರ್ಯಙ್ಮುಖವಾಗಿ ನ್ಯಾಸಮಂ ಮಾಡಲದೇ ಗೃಹಸ್ಥರ್ಗೆ ಯೋಗ್ಯಮಾದ ಸ್ಥಿತಿನ್ಯಾಸಮೆನಿಪುದು. ಇದು ಕರನ್ಯಾಸವಿಧಿ. ಅನಂತರ ವಾ ದೇಹನ್ಯಾಸಕ್ರಮವೆಂತೆಂದೊಡೆ,-ಯಕಾರಾದಿ ಪಂಚವರ್ಣಂಗ

ಳಂ ಮಸ್ತಕ ಮುಖ ಹೃದಯ ಗುಹ್ಯ ಪಾದಂಗಳೆಂಬ ಸ್ಥಾನಂಗಳೊಳ್ ಕ್ರಮದಿಂ ಚತುರಂಗುಲದಿಂ ನ್ಯಾಸವಂಮಾಡಿ, ಸರ್ವಾಂಗಮಂ ಕರತಳಂಗಳಿಂ ದಧೋಮುಖಮಾಗಿ ತಡವುತ್ತೆ ಪ್ರಣವನ್ಯಾಸಂಗಳಂ ಮಾಳ್ಪುದೇ ಬ್ರಹ್ಮಚಾರಿಗೆ ಯೋಗ್ಯಮಾದ ಸೃಷ್ಟಿನ್ಯಾಸವೆನಿಪುದು. ತದ್ವಿಪರೀತದಿಂ ನಕಾರಾದಿಗಳಂ ಪಾದಾದಿಮಸ್ತಕಾಂತವಾಗಿ ನ್ಯಾಸವಂಮಾಡಿ ಪ್ರಣವಮಂ ಕರತಲಗಳಿಂ ಮೇಲಾಗಿ ತಡವುತ್ತೆ ನ್ಯಾಸವಂಮಾಡಲದು ಯತೀಶ್ವರರ್ಗೆ ಯೋಗ್ಯಮಾದ ಸಂಹಾರನ್ಯಾಸವೆನಿಪುದು. ಹೃದಯಾದಿಮುಖಾಂತಮಾದ ಸ್ಥಾನಂಗಳಲ್ಲಿ ಶಿಕಾರಾದಿ ಮಕಾರಾಂತಮಾದ ವರ್ಣಂಗಳಂ ನ್ಯಾಸವಂಮಾಡಿ, ಪ್ರಣವಮಂ ಸರ್ವಾಂಗದೊಳ್ ನ್ಯಾಸಮಂ ಮಾಡಲದೇ ಗೃಹಸ್ಥರ್ಗೆ ಯೋಗ್ಯಮಾದ ಸ್ಥಿತಿನ್ಯಾಸವೆನಿಪುದು. ಅನಂತರದಲ್ಲಿ ಕ್ರಮಪ್ರಾಪ್ತಮಾದ ಷಡಂಗನ್ಯಾಸವೆಂತೆಂದೊಡೆ,—ಹೃದಯಾದಿಯಾಗಿ ಅಸ್ತ್ರಾಂತಮಾದ ನ್ಯಾಸವದು ಬ್ರಹ್ಮಚಾರಿಗೆ ಯೋಗ್ಯಮಾದ ಸೃಷ್ಟಿನ್ಯಾಸವೆನಿಪುದು. ಅಸ್ತ್ರಾದಿ ಹೃದಯಾಂತಮಾದ ನ್ಯಾಸವದು ಯತೀಶ್ವರರ್ಗೆ ಯೋಗ್ಯಮಾದ ಸಂಹಾರನ್ಯಾಸವೆನಿಸುಪುದು. ಕವಚಾದಿ ಶಿಖಾಂತಮಾದ ನ್ಯಾಸವದು ಗೃಹಸ್ಥರ್ಗೆ ಯೋಗ್ಯಮಾದ ಸ್ಥಿತಿನ್ಯಾಸವೆನಿಪುದು. ಅದಾಗಿ, ಸೃಷ್ಟಿರೂಪವಾದ ಷಡಂಗನ್ಯಾಸವೆಂತೆಂದೊಡೆ:—" ಓಂ ಯಂ ಓಂ ಸರ್ವಜ್ಞಶಕ್ತಿಧಾಮ್ನೇ ಅಂಗುಷ್ಠಾಭ್ಯಾಂನಮಃ, ಓಂ ವಾಂ ಓಂ ತೃಪ್ತಿಶಕ್ತಿಧಾಮ್ನೇ ತರ್ಜನೀಭ್ಯಾಂನಮಃ, ಓಂ ಶಿಂ ಓಂ ಅನಾದಿಬೋಧಶಕ್ತಿಧಾಮ್ನೇ ಮಧ್ಯಮಾಭ್ಯಾಂ ನಮಃ, ಓಂಮಂ ಓಂ ಸ್ವತಂತ್ರಶಕ್ತಿಧಾಮ್ನೇ ಅನಾಮಿಕಾಭ್ಯಾಂನಮಃ. ಓಂ ನಂ ಓಂ ಅಲುಪ್ತಶಕ್ತಿಧಾಮ್ನೇ ಕನಿಷ್ಠಿಕಾಭ್ಯಾಂನಮಃ, ಓಂ ಓಂ ಓಂ ಅನಂತಶಕ್ತಿಧಾಮ್ನೇ ಕರತಳಕರಪೃಷ್ಠಾಭ್ಯಾಂನಮಃ " ಎಂದು ಕರನ್ಯಾಸವಮಂ ಮಾಡುವುದು. " ಓಂ ಯಂ ಓಂ ಈಶಾನಾಯನಮಃ ಶಿರಸಿ, ಓಂ ವಾಂ ಓಂ ತತ್ಪುರುಷಾಯನಮಃ ಮುಖೇ, ಓಂ ಶಿಂ ಓಂ ಅಘೋರಾಯನಮಃ ಹೃದಯೇ, ಓಂ ಮಂ ಓಂ ವಾಮದೇವಾಯನಮಃ ಗುಹ್ಯೇ, ಓಂ ನಂ ಓಂ ಸದ್ಯೋಜಾತಾಯನಮಃ ಪಾದದ್ವಯೇ, ಓಂ ಓಂ ಓಂ ಪ್ರಣವಾಯನಮಃ ಸರ್ವಾಂಗೇ " ಎಂದು ದೇಹನ್ಯಾಸಮಂ ಮಾಡುವುದು. " ಓಂ ಓಂ ಓಂ ಸರ್ವಜ್ಞಶಕ್ತಿಧಾಮ್ನೇ ಹೃದಯಾಯನಮಃ, ಓಂ ನಂ ಓಂ ತೃಪ್ತಿಶಕ್ತಿಧಾಮ್ನೇ ಶಿರಸೇಸ್ವಾಹಾ, ಓಂ ಮಂ ಓಂ ಅನಾದಿಬೋಧಶಕ್ತಿಧಾಮ್ನೇ ಶಿಖಾಯೈವಷಟ್, ಓಂ ಶಿಂ ಓಂ ಸ್ವತಂತ್ರಶಕ್ತಿಧಾಮ್ನೇ ಕವಚಾಯಹುಂ, ಓಂ ವಾಂ ಓಂ ಅಲುಪ್ತಶಕ್ತಿಧಾಮ್ನೇ ನೇತ್ರತ್ರಯಾಯವೌಷಟ್, ಓಂ ಯಂ ಓಂ ಅನಂತಶಕ್ತಿಧಾಮ್ನೇ ಅಸ್ತ್ರಾಯಫಟ್ " ಎಂದು ಷಡಂಗನ್ಯಾಸಮಂ ಮಾಡುವುದು. ಬಳಿಕ ಮೂರ್ತಿಧ್ಯಾನವು:—" ಬಿಭ್ರದ್ದೋರ್ಭಿಃ ಕುಠಾರಂ ಮೃಗಮಭಯವರೌ ಸುಪ್ರಸನ್ನೋ ಮಹೇಶಸ್ಸರ್ವಾಲಂಕಾರದೀಪ್ತಸ್ಸರಸಿಜನಿಲಯೋವ್ಯಾಘ್ರಚರ್ಮೋತ್ತರೀಯಃ. | ಧ್ಯೇಯೋಮುಕ್ತಾಪರಾಗಾಮೃತರಸಕಲಿತಾದ್ರಿಃ ಪ್ರಭುಃ ಪಂಚವಕ್ತ್ರಸ್ತ್ರ್ಯಕ್ಷಃ ಕೋಟೀರಕೋಟೀಘಟಿತತುಹಿನರೋಚಿಷ್ಕಲೋತ್ತುಂಗಮೌಳಿಃ " ಎನೆಂಬ ಮೂರ್ತಿಯಂ ಧ್ಯಾನಿಸಿ, ಮಾಳ್ಪ ಜ

ಪಾನುಷ್ಠಾನವು—ಪುರಶ್ಚರಣ ಜಪವೆಂದೂ, ನಿತ್ಯಜಪವೆಂದೂ, ಪುರಶ್ಚರಣಪೂರ್ವಕನಿ
ತ್ಯಜಪವೆಂದೂ ಮೂರುಪ್ರಕಾರವು. ಅದರೊಳ್ಪುರಶ್ಚರಣಗೂಡಿದ ನಿತ್ಯಜಪವೇ
ವಿಶಿಷ್ಟಮಪ್ಪುದರಿಂ ಪುರಶ್ಚರಣಜಾಪಕನು ಸುಸ್ಥಲದಲ್ಲಿ ಸುಮುಹೂರ್ತದೊಳ್
ಸಂಕಲ್ಪಪೂರ್ವಕದಿಂದಾರುಲಕ್ಷವನಾಗಲಿ, ಇಪ್ಪತ್ತನಾಲ್ಕು ಲಕ್ಷವನಾಗಲಿ ಜಪಿಸಿ, ಆ
ಜಪಾನಂತರದಲ್ಲಿ ಒಂದುಲಕ್ಷ ತರ್ಪಣವಂ ಮಾಡಿ, ಕ್ಷೀರದಿಂದಾಗಲಿ ಘೃತದಿಂದಾಗ
ಲಿ ಸಹಸ್ರಾಹುತಿಯಂ ಕೊಟ್ಟು, ಈ ಪುರಶ್ಚರಣಜಪಾನಂತರದಲ್ಲಿ ಶರೀರಾಂತವಾಗಿ
ಸಂಕಲ್ಪಪೂರ್ವಕದಿಂ ನಿತ್ಯಜಪಕ್ಕೆ ಹನ್ನೆರಡು ಸಾವಿರವನಾಗಲಿ, ಸಾವಿರದೆಂಟನಾಗಲಿ
ನಿಯತವಾಗಿ ಮಾಳ್ಪುದು. ಜಪಾದಿಯುಲ್ಲಿಯೂ ಜಪಾಂತದಲ್ಲಿಯೂ ಜಪಮಾಲಿಕೆ
ಗರ್ಘ್ಯವಂ ಕೊಡುವುದು. ಪುರಶ್ಚರಣದಿಂ ಸಿದ್ಧಮಾದೀ ಷಡಕ್ಷರಮಂತ್ರದಿಂದಪ್ಪ
ಕಾಮ್ಯಫಲಪ್ರಕಾರವೆಂತೆಂದೊಡೆ:—ಪರ್ವತಾಗ್ರದಲ್ಲಿ ಒಂದು ಲಕ್ಷವಂ ಜಪಿಸಲು ಶ್ರೀ
ಯುರ್ವೃರ್ಧನವು, ಮಹಾನದೀತೀರದಲ್ಲಿ ಲಕ್ಷದ್ವಯದಿಂದಾಯುರ್ವರ್ಧನವು, ದೂರ್ವೆಯ
ನಾಗಲಿ ತಿಲವನಾಗಲಿ ಅಮೃತವಳ್ಳಿಯ ರಸವನಾಗಲಿ ಹತ್ತುಸಾವಿರವೇಳೆ ಮಂತ್ರಿ
ಸಿ ಸ್ವೀಕರಿಸಲು ಆಯುರ್ವರ್ಧನವು. ಅರಳಿಯ ಮರನನೇರಿ ಲಕ್ಷದ್ವಯಮಂ ಜಪಿಸ
ಲು ಮೃತ್ಯುಹರವು. ಪ್ರತಿದಿನವೂ ಅರಳಿಯ ಮರನಂ ಎರಡು ಕೈಗಳಿಂ ಮುಟ್ಟಿ
ನೂರೆಂಟುವೇಳೆ ಜಪಿಸಲು ಮೃತ್ಯುಹರವು. ಆದಿತ್ಯಾಭಿಮುಖವಾಗಿ ಏಕಲಕ್ಷವಂ
ಜಪಿಸಲು ಸಕಲವ್ಯಾಧಿಹರವು. ಒಂದುಮಾಸ ಪರ್ಯಂತವಾಗಿ ಉದಕವಂ ನೂ
ರೆಂಟುವೇಳೆ ಮಂತ್ರಿಸಿಕೊಳ್ಳಲು ಕುಕ್ಷಿರೋಗಹರವು. ನೈವೇದ್ಯವಂ ಹನ್ನೊಂದು
ವೇಳೆ ಮಂತ್ರಿಸಿಕೊಳ್ಳಲಾಗಿ ವಿಷಂಬೆರೆದಿದ್ದರೂ ಅಮೃತವಪ್ಪುದು. ನದಿಯುದಕವಂ
ಕುಂಭದಲ್ಲಿ ತುಂಬಿ ಹತ್ತುಸಾವಿರವೇಳೆ ಜಪಿಸಿ, ಬಳಿಕಾ ಉದಕದಿಂ ಸ್ನಾನವಂ ಮಾ
ಡಲು ರೋಗಹರವು. ಚಂದ್ರಗ್ರಹಣ ಸೂರ್ಯಗ್ರಹಣ ಕಾಲಂಗಳಲ್ಲಿ ಉಪವಾಸವಿರ್ದು
ಸಮುದ್ರಗಾಮಿಯಾದ ನದಿಯಲ್ಲಿ ಕಂಠಾಂತವಾಗಿ ಮುಳುಗಿ, ಗ್ರಹಣಾದಿಮೋಕ್ಷಾಂ
ತವಾಗಿ ಜಪಿಸಿ, ಮೋಕ್ಷಾಂತದಲ್ಲಿ ಬ್ರಾಹ್ಮೀರಸವಂ ನೂರೆಂಟುವೇಳೆ ಜಪಿಸಿ ಪಾನ
ವಂ ಮಾಡಲು ವಿದ್ಯಾಭ್ಯಾಸಕ್ಕೆ ಮಹಾಮತಿ ಪ್ರಕಾಶವಪ್ಪುದು. ಬಳಿಕ ಪ್ರಾಯ
ಶ್ಚಿತ್ತವಿಧಿ;—ತ್ರಿಸಂಧ್ಯಾಕಾಲದ ಪೂಜೆಗಳೊಳಗೊಂದು ಕಾಲದ ಪೂಜೆಯುಳಿದರೂ
ನೂರೆಂಟು ಜಪವಂ ಮಾಡುವುದು. ಅಪವಿತ್ರಾನ್ನ ಸ್ವೀಕಾರವಾದೊಡೆ ನೂರೆಂ
ಟು ಜಪವಂ ಮಾಡುವುದು. ಬ್ರಹ್ಮಹತ್ಯಾದಿ ಮಹಾಪಾತಕಕ್ಕೆ ಒಂದು ಲಕ್ಷವೂ
ಹತ್ತುಸಾವಿರಜಪವಂ ಮಾಡುವುದು. ಪಾತಕಂಗಳಿಗೆ ತದರ್ಧ. ( ಎಂದರೆ-ಐ
ಯ್ವತ್ತಯ್ದುಸಾವಿರವಂ ಮಾಡುವುದು ) ಉಪಪಾತಕಂಗಳಿಗೆ ತದರ್ಧ. ( ಎಂದರೆ
ಇಪ್ಪತ್ತೇಳುಸಾವಿರದೈನೂರಂ ಜಪಿಸುವುದು. ) ಉಳಿದ ಪಾತಕಂಗಳಿಗಯ್ದು ಸಾವಿರ
ವಂ ಜಪಿಸುವುದು. ಮೋಕ್ಷವಿಧಿಗೆ ಜಪವಿಧಿಯೆಂತೆಂದೊಡೆ —ಪ್ರತ್ಯೇಕವಾಗಿ ತ
ತ್ವಕ್ಕೊಂದೊಂದು ಲಕ್ಷವಾಗಿಪ್ಪತ್ತೈದುಲಕ್ಷವಂ ಜಪಿಸಲು ಪ್ರಕೃತಿತತ್ವವಂ ಜಯಿ
ಸುವನು. ನಿರಾಕಸ್ಥಲದೊಳ್ ಮಧ್ಯರಾತ್ರಿಯಲ್ಲಿ ಹತ್ತುಸಾವಿರವಂ ಜಪಿಸಲು ನಾ

ದಸಿದ್ಧಿಯುಪ್ಪುದು. ನಿವಾತಸ್ಥಲದೊಳ್ ಮಧ್ಯರಾತ್ರಿಯಲ್ಲಿ ಆಲಸ್ಯವಿಲ್ಲದೊಂದು ಲಕ್ಷವಂ ಜಪಿಸಲು ಜ್ಯೋತಿರ್ಮಯಬಿಂದುಸಾಕ್ಷಾತ್ಕಾರವುಪ್ಪುದು. ಮೂರು ಲಕ್ಷ ಜಪವಂ ಮಾಡಲಾಗಿ ಷಡಧ್ವಾತೀತವಾದ ಪರಶಿವಸಾಯುಜ್ಯವಂ ಪಡೆವನು. ತದನಂತರದೊಳ್ ದ್ವ್ಯಕ್ಷರರೂಪವಾದ "ಹಂಸ" ಮಂತ್ರವನಾದರೂ, "ಸೋಹಂ" ಜಪವನಾದರೂ, ಆ ಕಲ್ಪೋಕ್ತವಿಧಾನದಿಂದೊಂದು ಕೋಟಿಯಂ ಜಪಿಸುವುದು. ತದನಂತರದೊಳೇಕಾಕ್ಷರ ರೂಪವಾದ ಪ್ರಣವಮಂತ್ರದ ಸಿದ್ಧ್ಯರ್ಥವಾಗಿ ಜಪಪ್ರಾರಂಭದಲ್ಲಿ ಸ್ನಾನವಿಧಿಯುಕ್ತನಾಗಿ, ಬ್ರಹ್ಮಾರಣ್ಯನದೀತೀರಾದಿ ಸುಸ್ಥಲದಲ್ಲಿಪ್ಪ ಬ್ರಹ್ಮವೃಕ್ಷವನಾಶ್ರಯಿಸಿ, ಪ್ರಾಙ್ಮುಖೋದಙ್ಮುಖನಾಗಿ ಸ್ವಸ್ಥಾಸನದಲ್ಲಿ ಕುಳ್ಳಿರ್ದು, ಪ್ರಾಣಾಯಾಮತ್ರಯವಂ ಮಾಡಿ, ಬಳಿಕಾ ಪ್ರಣವಕ್ಕೆ ಬ್ರಹ್ಮನೇ ಋಷಿ-ದೇವಗಾಯತ್ರೀ ಛಂದಸ್ಸು-ಪರಮಶಿವನಧಿದೇವತೆ-ಅಂಬೀಜ-ಉಂಶಕ್ತಿ-ಮಂಕೀಲಕ-ಮೋಕ್ಷಾರ್ಥವಾದ ಜಪವೇ ವಿನಿಯೋಗವೆಂದು ಮೊದಲು ಸ್ಮರಿಸಿ, ಮೇಲಾಮಂತ್ರದಿಂ ಕರನ್ಯಾಸಂಗೈವಲ್ಲಿ-ಕರದ್ವಯದಂಗುಷ್ಠಾದಿ ಕನಿಷ್ಠಾಂತವಾದಂಗುಲಿಗಳ ಆದಿಮಧ್ಯಾಂತ ಪರ್ವಂಗಳಲ್ಲಿ ಪ್ರತ್ಯೇಕ ಬಿಂದುಯುಕ್ತವಾದ ಅಕಾರ ಉಕಾರ ಮಕಾರಂಗಳಂ ನ್ಯಾಸಂಮಾಡಿ,ಬಳಿಕ ಬಿಂದುಯುಕ್ತಪ್ರಣವವನಾಸರ್ವಾಂಗುಲಿಗಳಲ್ಲಿಯೂ ನ್ಯಾಸಂಗೆಯ್ದು, ಮೇಲಾಪ್ರಣವದಿಂದವೇ ಕರತಳಕರಪೃಷ್ಠಂಗಳು ಸಮಾರ್ಜನಂ ಮಾಡಿ, ಇಂತು ಕರನ್ಯಾಸಂಗೆಯ್ದು, ಅನಂತರದಲ್ಲಿ ನಾಭಿ ಹೃದಯ ಮೂರ್ಧಂಗಳಲ್ಲಿ ಕ್ರಮದಿಂ ಸೊನ್ನೆವೇರಿಸಿದ ಅಕಾರ ಉಕಾರ ಮಕಾರಂಗಳಂ ನ್ಯಾಸಂಮಾಡಿ, ಮೇಲೆ ಮೂರ್ಧಾದಿಪಾದಾಂತವಾಗಿ ಬಿಂದುಸಹಿತ ಪ್ರಣವನುಂ ನ್ಯಾಸಂಗೆಯ್ದು, ಇಂತು ದೇಹನ್ಯಾಸಂಮಾಡಿ "ಓಂ ಭೂಃ ಅಗ್ನ್ಯಾತ್ಮನೇ ಹೃದಯಾಯನಮಃ-ಓಂ ಭುವಃ ವಾಯ್ವಾತ್ಮನೇ ಶಿರಸೇಸ್ವಾಹಾ-ಓಂ ಸುವಃ ಸೂರ್ಯಾತ್ಮನೇ ಶಿಖಾಯೈವಷಟ್-ಓಂ ಮಹಃ ಬ್ರಹ್ಮಾತ್ಮನೇ ಕವಚಾಯ ಹುಂ-ಓಂ ಜನಃ ಜ್ಞಾನಾತ್ಮನೇ ನೇತ್ರತ್ರಯಾಯವೌಷಟ್-ಓಂ ತಪಃಸತ್ಯಾತ್ಮನೆ ಅಸ್ತ್ರಾಯಫಟ್-" ಎಂದುಷಡಂಗನ್ಯಾಸಂಗೆಯ್ದು, ಬಳಿಕಮೀಕ್ರಮದಿಂ ಕರನ್ಯಾಸದೇಹನ್ಯಾಸ ಅಂಗನ್ಯಾಸಂಗೆಯ್ದು, ಅನಂತರದಲ್ಲಿ ಜಗವೆಲ್ಲವಂ ತಪ್ತಾಯಃ ಪಿಂಡದಂತೆ ಪ್ರಣವ ಜ್ಯೋತಿರ್ವ್ಯಾಪ್ತವೆಂಬನುಸಂಧಾನದಿಂದಾದರೂ, ಅಲ್ಲದೆ ತನ್ನ ಮೂಲಾಧಾರಾದ್ಯಖಿಳ ಚಕ್ರಭೇದಿನಿಯಾದ ಸುಷುಮ್ನಾನಾಡೀಮಧ್ಯಗತ ವಿದ್ಯುಲ್ಲೇಖಾತ್ಮಕ ಬಿಂದು ಚಿಂತನೆಯಿಂದಾದರೂ, ಅಲ್ಲದೆ ಹೃತ್ಕಮಲಕರ್ಣಿಕಾಗ್ರದ ಸೋಮಸೂರ್ಯಾಗ್ನಿಮಂಡಲತ್ರಯ ಮಧ್ಯದಲ್ಲಿ ಮಹೇಶ್ವರಧ್ಯಾನಯುಕ್ತನಾಗಾದರೂ ಹತ್ತುಲಕ್ಷಜಪದಿಂ ಪುರಶ್ಚರಣಂ ಮಾಡಿದ ಮೇಲಾ ಪ್ರಣವಮಂತ್ರಂ ಸಿದ್ಧಿಸಿ, ಬಳಿಕ ಸಕಲಪಾಪಕ್ಷಯಮಂ ಷಟ್ಕರ್ಮಸಿದ್ಧಿಯಂ ಅಷ್ಟಮಹೈಶ್ವರ್ಯಂಗಳಂ ಸರ್ವವಿದ್ಯೆಗಳಂ ಯಥೇಷ್ಟಫಲಂಗಳುಮನೀವುದೇ ಸತ್ಯವೆಂದರಿವುದಾಗಿ, ಇದೆಲ್ಲಾ ಮಂತ್ರಯೋಗವಿಧಾನವೆಂಬುದಭಿಪ್ರಾಯಂ.

ಸೂ॥ ಕ್ರಮಪ್ರಾಪ್ತವಾದ ಲಯಯೋಗದ ಲಕ್ಷಣಮಂ ಪೇಳ್ದಪಂ:—

ಶ್ಲೋ॥ ಯಸ್ಯಚಿತ್ತಂ ನಿಜಧ್ಯೇಯೇ ವಾ ನಾದೇ ಮನಸಾಮರುತಾಸಹ ।
ಲೀನಂಭವತಿ ನಾದೇವಾ ಲಯಯೋಗೀಸಪಿವಹಿ ॥೬॥

ಟೀ॥ ಯಸ್ಯ-ಶಿವನಾವೊರ್ವಯೋಗೀಶ್ವರನ, ಚಿತ್ತಂ-ಪರಮಾಂತಃಕರಣವೆನಿಸುವ ಆತ್ಮಚೈತನ್ಯದಿಂ ಕೂಡಿದ ವಿದ್ಯಾಕರಣವು, ನಿಜಧ್ಯೇಯೇ-ನಿಜ-ತನ್ನ ಸಂಬಂಧವಾದ, ಧ್ಯೇಯೇ-ಮಂತ್ರಯೋಗದೊಳ್ಪೇಳ್ದ ಧ್ಯಾನಮೂರ್ತಿಯಲ್ಲಿ, ವಾ-ವೇಣು, ನಾದೇ-ವೈಕೃತಪ್ರಾಣಾಯಾಮದಿಂದಭಿವ್ಯಕ್ತವಾದ ನಾದದಲ್ಲಿಯಾದರೂ, ಮನಸಾಮರುತಾಸಹ-ಮನೋಮಾರುತಂಗಳೊಡನೆ ಕೂಡಿ, ಲೀನಂಭವತಿ-ಲಯವಾಗುತ್ತಿರ್ದಿತು. ಸಪಿವ-ಶಿತನೇ, ಲಯಯೋಗೀ-ಲಯಯೋಗಿಯೆಂದು, ಹಿ-ಪ್ರಸಿದ್ಧವಲಾ. ॥೬॥

ಸೂ॥ ಲಯಾನಂತರದಲ್ಲಿ ಹಠಯೋಗಲಕ್ಷಣಮಂ ಪೇಳ್ದಪಂ:—

ಶ್ಲೋ॥ ಭವೇದಷ್ಟಾಂಗಮಾರ್ಗೇಣಮುದ್ರಾಕರಣಬಂಧನೈಃ ।
ತಥಾಕೇವಲಕುಂಭೇವಾ ಹಠಯೋಗೀವಶಾನಿಲಃ ॥೭॥

ಟೀ॥ ಅಷ್ಟಾಂಗಮಾರ್ಗೇಣ-ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಯೆಂಬ ನಿಜಯೋಗಕ್ಕೆ ಅಂಗಂಗಳಾದೆಂಟರ ವರ್ತನದಿಂದವೂ, ಮುದ್ರಾಕರಣಬಂಧನೈಃ-ಮುದ್ರಾಬಂಧಕರಣಬಂಧಂಗಳಿಂದವೂ(ಇಲ್ಲಿ—" ಮಹಾಮುದ್ರಾಮಹಾಬಂಧೋ ಮಹಾವೇಧಶ್ಚ ಖೇಚರೀ । ಉಡ್ಡಿಯಾಣೋ ಮೂಲಬಂಧಸ್ತತೋಜಾಲಂಧರಾಭಿಧಃ ॥ ಕರಣೀವಿಪರೀತಾಸಾವಜ್ರೋಲೀಶಕ್ತಿಚಾಲನಂ । ಇದಂಹಿಮುದ್ರಾದಶಕಂಜರಾಮರಣನಾಶಕಂ " ಎಂದುದಾಗಿ, ಹತ್ತುಪ್ರಕಾರವಾದ ಮುದ್ರಾಬಂಧಂಗಳ ಲಕ್ಷಣವೆಂತೆಂದೊಡೆ:—ವಾಮಪಾದದಮಡದಿಂ ಯೋನಿಸ್ಥಾನವನೊತ್ತಿ, ಬಲದಪಾದವನೀಡಿ, ಎರಡು ಹಸ್ತಂಗಳಿಂದಂಗುಷ್ಠಮಂ ಪಿಡಿದು ವಾಯುಧಾರಣಮಂ ಮಾಡಿ ಜಾಲಂಧರಮಂಬಂಧಿಪುದು " ಮಹಾಮುದ್ರೆ " ಯೆನಿಸುವುದು. ವಾಮಪಾದದ ಮಡದಿಂ ಯೋನಿಸ್ಥಾನವನೊತ್ತಿ, ಎಡದ ತೊಡೆಯಮೇಲೆ ಬಲದಪಾದವನಿರಿಸಿ, ವಾಯುಪೂರಣಮಂಮಾಡಿ, ಜಾಲಂಧರಮಂ ಬಂಧಿಸೆ "ಮಹಾಬಂಧ" ವೆನಿಸುವುದು. ಈ ಮಹಾಬಂಧದಲ್ಲಿರ್ದ ಯೋಗೀಶ್ವರನು ಸುಭೂಮಿಯಲ್ಲಿ ಸಮವಾದ ಹಸ್ತದಲ್ಲಿರ್ದು ತಾಡನಮಂ ಮಾಡುವುದು " ಮಹಾವೇಧ " ವೆನಿಸುವುದು. ಛೇದನ ಚಾಲನ ದೋಹನಾದಿಕ್ರಿಯೆಗಳಿಂ ಪೆರ್ಚಿದ ಜಿಹ್ವೆಯಂ ಭ್ರೂಮಧ್ಯಸ್ಥಾನಕ್ಕೇರಿಸಿ ಸ್ಥಿರದೃಷ್ಟಿಯಾಗಿಹುದು " ಬಾಹ್ಯಖೇಚರಿ " ಯೆನಿಸುವುದು. ಮಡದಿಂದ ಯೋನಿಸ್ಥಾನವನೊತ್ತಿ ಗುದವನಾಕುಂಚಿಸುವುದು " ಆಧಾರಬಂಧ " ವೆನಿಸುವುದು. ಉದರಸ್ಥಾನದಲ್ಲಿ ಆಕರ್ಷಣಮಂ ಮಾಳ್ಪುದು " ಉಡ್ಡಿಯಾಣಬಂಧ " ವೆನಿಸುವುದು. ಚುಬುಕವನು ಹೃದಯಸ್ಥಾನದಲ್ಲಿರಿಸಿ ಕಂಠಸಂಕೋಚನಮಂ ಮಾಡುವುದು " ಜಾಲಂಧರಬಂಧ " ವೆ

ನಿಸುವುದು. ಅಧೋಗತವಾದ ಶಿರಸ್ಸಾಗಿ, ಪಾದಂಗಳೂರ್ಧ್ವವಾಗಿರಲಾಗಿ " ವಿಪರೀತ ಕರಣಿ ,, ಯೆನಿಸುವುದು. ಯೋನಿಮುಖದಲ್ಲಿ ಚಲಿಸುವ ಬಿಂದುವನೂರ್ಧ್ವಕ್ಕೇರಿಸುವುದು " ವಜ್ರೋಳಿ " ಯೆನಿಸುವುದು. ಇಡಾ ಪಿಂಗಳಾ ಮಧ್ಯದಲ್ಲಿ ವರ್ತಿಸುವ ಕುಂಡಲಿನೀ ಶಕ್ತಿಯನೆಬ್ಬಿಸುವುದು " ಶಕ್ತಿಚಾಲನ ,, ವೆನಿಸುವುದು. ಈ ಹತ್ತು ಪ್ರಕಾರವಾದ ಮುದ್ರಾಬಂಧಂಗಳಿಂದಲೂ, ಬಳಿಕ " ಧೌತಿರ್ವಸ್ತಿಸ್ತಥಾನೇತಿ ಸ್ತ್ರೋಟಕಂನೌಳಿಕಂತಥಾ । ಕಪಾಲಭಾತಿಶ್ಚೈತಾನಿ ಷಟ್ಕರ್ಮಾಣಿಪ್ರಚಕ್ಷತೇ ॥ " ಎಂದುದಾಗಿ, ಕರಣವೆನಿಸುವ ಷಟ್ಕರ್ಮ ಪ್ರಕಾರವೆಂತೆಂದೊಡೆ—ನಾಲ್ಕಂಗುಲದ ತೆರಪಿನ ಬಿಳಿಯ ಪಾವುಡೆಯ ನೊಂದುತುದಿಯಂ ಪಿಡಿದು, ಮತ್ತೊಂದು ತುದಿಯಂ ಮೆಲ್ಲನೆ ಹೃದಯಪರ್ಯಂತವಾಗಿ ನುಂಗಿ ತೆಗೆವುದು " ಧೌತಿ ,, ಯೆನಿಸುವುದು. ಕುಳಿತೊಡೆ ನಾಭಿಪ್ರಮಾಣವಾಗುವ ಜಲದಲ್ಲಿ ಕುಳಿತು: ಆಧಾರ ಕುಂಚನದಿಂದುದಕವಂ ಪೂರಿಸಿಬಿಡುವುದು " ವಸ್ತಿ ,, ಯೆನಿಸುವುದು. ಹನ್ನೆರಡಂಗುಲದ ಪ್ರಮಾಣದ ನೂಲನ್ನು ನಾಸಿಕಾದ್ವಾರದಲ್ಲೇರಿಸಿ ಬಾಯುಳ್ಳಿತೆಗೆವುದು " ನೇತಿ" ಯೆನಿಸುವುದು. ಅತಿ ಸೂಕ್ಷ್ಮವಾದ ವಸ್ತುಗಳಂ ಸ್ಥಿರದೃಷ್ಟಿಯಿಂ ಕಂಬನಿ ಬರುವ ಪರ್ಯಂತಂ ನೋಡುವುದು " ತ್ರೋಟಕ ,, ವೆನಿಸುವುದು. ಕಂಬವನಿಳಿಸಿ, ಎಡಚಾರಿ ಬಲಚಾರಿಯಾಗಿ ಕುಕ್ಷಿಯ ತಿರುಗಿಸುವುದು " ನೌಳಿ " ಯೆನಿಸುವುದು. ಇಡಾ ಪಿಂಗಳಾ ದ್ವಾರಂಗಳಲ್ಲಿ ಅತಿ ತೀವ್ರವಾಗಿ ರೇಚಕ ಪೂರಕಂಗಳಂ ಮಾಡುವುದು " ಕಪಾಲಭಾತಿ ,, ಯೆನಿಸುವುದು. ಈ ಪ್ರಕಾರವಾದ ಷಟ್ಕರ್ಮಬಂಧಂಗಳಿಂದಲೂ, ಮೇಣ್ ಶೀತಳೀಕರಣಾದಿ ಕರಣಂಗಳಿಂದಾದರೂ, ) ತಥಾ-ಹಾಂಗೆ, ವಾ-ಮೇಣು, ಕೇವಲಕುಂಭೇ-ರೇಚಕಪೂರಕಂಗಳಿಲ್ಲದೆ ಕುಂಭಿಸುವ ಕೇವಲ ಕುಂಭಕದಲ್ಲಿಯಾದರೂ, ವಶಾನಿಲಃ-ವಶಗತವಾದ ವಾಯುವುಳ್ಳಾತನು, ಹಠಯೋಗೀ-ಹಠಯೋಗೀಶ್ವರನು, ಭವೇತ್-ಆಗುವನು. ॥೭॥

ಸೂ॥ ಅನಂತರದೊಳು ಶ್ರೇಷ್ಠವಾದ ರಾಜಯೋಗಲಕ್ಷಣವಂ ಪೇಳ್ದಪಂ—

ಶ್ಲೋ॥ ತ್ರಿಷುಲಕ್ಷ್ಯೇಷು ಯೋಬ್ರಹ್ಮಸಾಕ್ಷಾತ್ಕಾರಂಗಮಿಷ್ಯತಿ ।
ಜ್ಞಾನೇವಾಽಥಮನೋವೃತ್ತಿರಹಿತೋ ರಾಜಯೋಗವಿತ್ ॥

ಟೀ॥ ಯಃ-ಆವನಾನೊರ್ವಪುರುಷನು, ತ್ರಿಷು-ಮೂರುಪ್ರಕಾರವಾದ, ಲಕ್ಷ್ಯೇಷು-ಬಾಹ್ಯಮಧ್ಯಾಂತರ್ಲಕ್ಷ್ಯಗಳಲ್ಲಿ, ಅಥವಾ-ಹಾಂಗಲ್ಲದಿರ್ದೊಡೆ, ಜ್ಞಾನೇ-ಸಾಂಖ್ಯಯೋಗದಲ್ಲಿಯ ತತ್ವ ವಿಲಕ್ಷ್ಯಜ್ಞಾನದಲ್ಲಿಯಾದರೂ, ನಿರ್ಲಕ್ಷ್ಯವಾದ ಅಮನಸ್ಕಜ್ಞಾನದಲ್ಲಿಯಾದರೂ, ಬ್ರಹ್ಮಸಾಕ್ಷಾತ್ಕಾರಂ-ಬ್ರಹ್ಮ-ಷಡಧ್ವಕ್ಕುಪಾದಾನಕಾರಣವಾದ ಪರಶಿವಾಧಿಷ್ಠಿತವಾದ ಬ್ರಹ್ಮವನು, ಸಾಕ್ಷಾತ್ಕಾರಂ-ಅಪರೋಕ್ಷಿಸಿ ಕಾಣ್ಬುದನು, ಗಮಿಷ್ಯತಿ-ಎಯ್ದುವನೋ, ಮನೋವೃತ್ತಿರಹಿತಃ- ಮನೋವ್ಯಾಪಾರವಿಲ್ಲದೆಯಿರ್ದಂಥ, ಸಃ-ಆತನು, ರಾಜಯೋಗವಿತ್-ರಾಜಯೋಗವಂ ಬಲ್ಲಾತನು, ಆಗುವನೆಂಬರ್ಥ್ಯಾಹರಿಸಿಕೊಂಬುದು. ॥೮॥

ಸೂ॥ "ಮದುಕ್ತೇನೈವಮಾರ್ಗೇಣ ಮಯ್ಯವಸ್ಥಾಪ್ಯಚೇತಸಃ । ವೃತ್ತ್ಯಂತರನಿರೋಧೋಯಸ್ಸಯೋಗಇತಿಗೀಯತೇ ॥"ಎಂಬ ಯೋಗದ ವಿಭಾಗೋದ್ದೇಶಕ್ರಮಕ್ಕೆ ಕಾರಣಮಂ ಪೇಳುತ್ತ, ರಾಜಯೋಗದ ವಿಶಿಷ್ಟತೆಯಂ ಪೇಳ್ದಪಂ—

ಶ್ಲೋ॥ ಉತ್ತರೋತ್ತರವೈಶಿಷ್ಟ್ಯಾದ್ಯೋಗಾಶ್ಚತ್ವಾರಏವಹಿ । ತೇಷ್ವೇಕಏವಮುಖ್ಯೋಽಸೌ ರಾಜಯೋಗೋತ್ತಮೋತ್ತಮಃ

ಟೀ॥ ಯೋಗಾಃ-ಹಿಂದೆಹೇಳಿದ ಯೋಗಂಗಳು, ಉತ್ತರೋತ್ತರವೈಶಿಷ್ಟ್ಯಾತ್-ಶಬ್ದಾತ್ಮಕವಾದ ಮಂತ್ರಯೋಗದಿಂ ನಿಶ್ಶಬ್ದಾತ್ಮಕವಾಗಿ ಮನೋಲಯವೆನಿಸುವ ಲಯಯೋಗವೇ ವಿಶೇಷವೆನಿಸುವುದು; ಆ ಮನೋಲಯದವನೇ ವಾಯುಜಯದಿಂ ಮನಮಂ ಸುಸ್ಥಿರಂಮಾಳ್ಪುದಾಗಿ, ಲಯದಿಂ ಹಠಯೋಗವು ವಿಶೇಷವೆನಿಸುವುದು; ಆ ಮನೋಮಾರುತಂಗಳ ಸುಪವೇಶಮಾತ್ರದಿಂ ನಿರಾಯಾಸದಿಂ ನಿಲಿಸಿ ನಿಜವಸ್ತು ಸಾಕ್ಷಾತ್ಕಾರಮಂಮಾಳ್ಪುದಾಗಿ, ರಾಜಯೋಗಮಾ ಹಠಯೋಗದಿಂ ವಿಶೇಷವು ಇಂತುದ್ದರಿಂದುತ್ತರೋತ್ತರ ವಿಶಿಷ್ಟವಾದ ಕಾರಣದಿಂ, ಚತ್ವಾರಏವಹಿ-ನಾಲ್ಕುಪ್ರಕಾರವೆಂಬು ಪ್ರಸಿದ್ಧವಲ್ಲಾ, ತೇಷು-ಆನಾಲ್ಕರವ ಯೋಗಂಗಳಲ್ಲಿ, ಅಸೌ-ಈ, ರಾಜಯೋಗೋತ್ತಮೋತ್ತಮಃ-ಉತ್ತಮೋತ್ತಮವಾದ ರಾಜಯೋಗವು, ಏಕಏವ-ಒಂದೇ, ಮುಖ್ಯಃ-ಮುಖ್ಯವಾಗಿಪ್ಪಂತಹುದಾಗುವುದು. ॥೯॥

ಸೂ॥ ಈ ಪೂರ್ವೋಕ್ತವಾದ ರಾಜಯೋಗದ ಅವಾಂತರಭೇದಂಗಳಿಗೆ ಲಕ್ಷಣಮಂ ಗ್ರಂಥಪ್ರಯದಿಂ ಪೇಳ್ದಪಂ—

ಶ್ಲೋ॥ ಸೋಽಪಿತ್ರಿಧಾಭವೇತ್ಸಾಂಖ್ಯ ಸ್ತಾರಕಶ್ಚಾಮನಾ ಇತಿ ।
ಪಂಚವಿಂಶತಿತತ್ವಾನಾಂ ಜ್ಞಾನಂತತ್ಸಾಂಖ್ಯಮುಚ್ಯತೇ ॥೧೦॥

ಟೀ॥ ಸೋಽಪಿ-ಆ ರಾಜಯೋಗವಾಯಿತ್ತಾದೊಡೆ, ಸಾಂಖ್ಯಃ-ಸಾಂಖ್ಯಯೋಗವೆಂದೂ, ತಾರಕಶ್ಚ-ತಾರಕಯೋಗವೆಂದೂ, ಅಮನಾಇತಿ-ಅಮನಸ್ಕಯೋಗವೆಂದೂ, ತ್ರಿಧಾ-ಮೂರುಪ್ರಕಾರವಾಗಿರ್ದಂತಹುದು, ಭವೇತ್-ಅಹುದು, ಪಂಚವಿಂಶತಿತತ್ವಾನಾಂ-ಪೃಥಿವ್ಯಾದಿಪ್ರಕೃತ್ಯಂತವಾದಿಪ್ಪತ್ತೈದು-ತತ್ವಂಗಳ, ಯತ್-ಆವುದಾನೊಂದು, ಜ್ಞಾನಂ-ವಿವೇಕದಿಂ ವಿಲಕ್ಷಿಸುವ ಜ್ಞಾನವುಂಟೋ, ತತ್-ಅದು, ಸಾಂಖ್ಯಂ-ಸಾಂಖ್ಯಯೋಗಜ್ಞಾನವೆಂದು, ಉಚ್ಯತೇ-ಹೇಳಲ್ಪಡುತ್ತಿದ್ದೀತು.

ಶ್ಲೋ॥ ಬಹಿರ್ಮುದ್ರಾಪ್ರಸಂಜ್ಞಾನಾ ದ್ಯೋಗಸ್ತಾರಕಉಚ್ಯತೇ ।
ಅಂತರ್ಮುದ್ರಾಪ್ರಸಂಜ್ಞಾನಾ ದಮನಸ್ಕಇತೀರಿತಃ ॥೧೧॥

ಟೀ॥ ಬಹಿರ್ಮುದ್ರಾಪ್ರಸಂಜ್ಞಾನಾತ್--ಮನೋದೃಷ್ಟಿ ಮಾರುತಂಗಳಂ ಬಹಿರ್ಮುಖವಾಗದಂತೆ ಮುದ್ರಿಸಿ ಲಕ್ಷ್ಯವನರಿವತ್ತಣಿಂದ, ತಾರಕಃ--ತಾರಕನೆಂಬ

ಯೋಗಃ-ಯೋಗವು, ಉಚ್ಯತೇ-ಹೇಳಲ್ಪಡುತ್ತಿದ್ದೀತು. ಅಂತರ್ಮುದ್ರಾಪರಿಜ್ಞಾನಾತ್-ಅಂತರಂಗದಮನಮಂ ನೆನೆಯುದಂತೆ ಮುದ್ರಿಸುವ ಅಂತರ್ಮುದ್ರೆಯ ಜ್ಞಾನದದೆಸೆಯಿಂದ, ಅಮನಸ್ಕ ಇತಿ-ಅಮನಸ್ಕಯೋಗವೆಂದು, ಈರಿತಃ-ಹೇಳಲ್ಪಟ್ಟಿತು. ||೧೧||

ಸೂ|| ರಾಜಯೋಗದ ಭೇದವಾದ ಸಾಂಖ್ಯಾದಿಯೋಗಂಗಳಿಗೆ ಉತ್ತರೋತ್ತರ ವಿಶಿಷ್ಟತೆಯುಂ ಪೇಳುತ್ತ ರಾಜಯೋಗಶಬ್ದ ದರ್ಥವಮಂ ಪೇಳುತ್ತಿರ್ದಪಂ—

ಶ್ಲೋ|| ಶ್ಲಾಘ್ಯಸ್ಸಾಂಖ್ಯಾತ್ತಾರಕೋಽಪಿಯ ಮಮನಸ್ಕೋಽಪಿತಾರಕಾತ್ ।
ರಾಜತ್ವಾತ್ಸರ್ವಯೋಗಾನಾಂರಾಜಯೋಗ ಇತಿ ಸ್ಮೃತಃ ||

ಟೀ|| ಸಾಂಖ್ಯಾತ್-ಪಂಚವಿಂಶತಿ ತತ್ವಜ್ಞಾನಮಾತ್ರವಾದ ಸಾಂಖ್ಯಯೋಗದದೆಸೆಯಿಂದೆ, ಅಯಂ ತಾರಕಃ-ನಾದಬಿಂದು ಸಾಕ್ಷಾತ್ಕರರೂಪವಾದೀ ತಾರಕಯೋಗವು, ಶ್ಲಾಘ್ಯಃ-ಶ್ರೇಷ್ಠವು, ತಾರಕಾತ್-ತಾರಕಯೋಗದ ದೆಸೆಯಿಂದೆ, ಅಮನಸ್ಕೋಽಪಿ-ನಿಜವಸ್ತು ಸಾಕ್ಷಾತ್ಕರದ ಅಮನಸ್ಕಯೋಗವು, ಶ್ಲಾಘ್ಯಃ-ಶ್ರೇಷ್ಠವು, ಈ ರಾಜಯೋಗವು ಸರ್ವಯೋಗಾನಾಂ-ಸಮಸ್ತ ಯೋಗಗಳಿಗೆ, ರಾಜತ್ವಾತ್-ಶ್ರೇಷ್ಠವಾದ ಕಾರಣ, ರಾಜಯೋಗ ಇತಿ-ರಾಜಯೋಗವೆಂದು, ಸ್ಮೃತಃ-ಸ್ಮರಿಸಲ್ಪಟ್ಟಿತು. (ತಾತ್ಪರ್ಯ-ಮಂತ್ರಾದಿಯೋಗಂಗಳಂತೆ ಬಹುಪ್ರಯಾಸವಿಲ್ಲದೆ ನಿರಾಯಾಸದಿಂ ದಾತ್ಮಲಾಭಮಪ್ಪುದಾಗಿ ಇದೇ ರಾಜಯೋಗವೆನಿಸುವುದು ಎಂಬುದರ್ಥಂ.) ||೧೨||

ಸೂ|| ಈ ರಾಜಯೋಗದಿಂದುತ್ತರವಾದ ಶಿವಯೋಗವುಂಟೆಂಬ ಪ್ರಶ್ನೆಯುನ್ನು ಮಾಡುದಿಂ ಪರಿಹರಿಸುತಿರ್ದಪಂ—

ಶ್ಲೋ|| ನಭೇದಶ್ಶಿವಯೋಗಸ್ಯರಾಜಯೋಗಸ್ಯತತ್ವತಃ ।
ಶಿವಾರ್ಥಿನಾಂತಥಾಪ್ಯೇವಮುಕ್ತೋಬುದ್ಧೇಃಪ್ರವೃದ್ಧಯೇ ||

ಟೀ|| ಶಿವಯೋಗಸ್ಯ-ಶಿವಯೋಗಕ್ಕೂ, ರಾಜಯೋಗಸ್ಯ-ರಾಜಯೋಗಕ್ಕೂ, ತತ್ವತಃ-ಪರಮಾರ್ಥದದೆಸೆಯಿಂದ, ಭೇದಃ-ಭೇದವು, ನ-ಇಲ್ಲ. ತಥಾಪಿ-ಹಾಗಾಯಿತ್ತಾದರೂ, ಶಿವಾರ್ಥಿನಾಂ-ನಿಜಮೋಕ್ಷವಂ ಬಯಸುವರ್ಗಳ, ಬುದ್ಧೇಃ-ಬುದ್ಧಿಯೊಳು ದ್ಭೋಧಿತವಾದ ಜ್ಞಾನಶಕ್ತಿಯ, ಪ್ರವೃದ್ಧಯೇ-ವೃದ್ಧಿಗೋಸ್ಕರ, ಭೇದಃ-ಭೇದವು, ಉಕ್ತಃ-ಹೇಳಲ್ಪಟ್ಟಿತು. ||೧೩||

ಸೂ|| ರಾಜಯೋಗ ಶಿವಯೋಗಂಗಳಿಗೆ ಭೇದವಮಂ ಸೂಚಿಸುತ್ತೆ ಮುಮುಕ್ಷುಗಳಿಂ ಶಿವಯೋಗವೇ ಸ್ವೀಕರಿಸಲು ಯೋಗ್ಯವೆಂದು ಪೇಳ್ದಪಂ:—

ಶ್ಲೋ|| ಪ್ರತಿಪಾದ್ಯಸ್ತುಯೋಭೇದಸ್ತಥಾಶಿವರತಾತ್ಮನಾಂ ।
ತಸ್ಮಾನ್ಮನೀಷಿಭಿರ್ಗ್ರಾಹ್ಯಶ್ಶಿವಯೋಗಸ್ತುಕೇವಲಃ ||೧೪||

ಟೀ॥ ಶಿವರತಾತ್ಮನಾಂ-ಶಿವ-ಶಿವತತ್ವಾಭಿವ್ಯಕ್ತಿಯಲ್ಲಿ, ರತ-ಪ್ರೀತವಾದ, ಆತ್ಮನಾಂ-ಸ್ವರೂಪವುಳ್ಳವರ್ಗ್ಗ, ತಯೋಃ-ಆರಾಜಯೋಗ ಶಿವಯೋಗಂಗಳಿಗೆ, ಭೇದಃ-ಭೇದವು, ತಥಾ-ಹಾಂಗೆ, ಶಿವಯೋಗಮಾರ್ಗದಲ್ಲಿ, ಪ್ರತಿಪಾದ್ಯಃ-ಸಮರ್ಥಿಸಲು ಯೋಗ್ಯವು (ಆ ಭೇದವಾವಪ್ರಕಾರನೆಂದೊಡೆ-ಪಾತಂಜಲಾದಿಶಾಸ್ತ್ರಂಗಳಲ್ಲಿ ಗುಣತ್ರಯಸಾಕ್ಷಾತ್ಕಾರವೇ ತಾರಕತ್ರಯವೆಂದು ತಿಳಿದು, ಪ್ರಕೃತಿಯಲ್ಲಿ ಮನೋಲಯವೇ ಅಮನಸ್ಕವೆಂದು ತಿಳಿದು, ಪ್ರಕೃತ್ಯರ್ಥದ ಪುರುಷಸಾಕ್ಷಾತ್ಕಾರವೇ ರಾಜಯೋಗವೆಂದು ಪೇಳ್ವರಾಗಿ, ಆ ರಾಜಯೋಗಂ ಶಿವಯೋಗವೆನಿಸಲರಿಯದು. ಆ ಶಿವಯೋಗವಾವುದೆಂದೊಡೆ-"ತದಾತ್ಮವತ್ವಂಯೋಗಿತ್ವಂ ಜಿತಾಕ್ಷಸ್ಯೋಪಪದ್ಯತೆ" ಎಂದುದಾಗಿ, ಶಿವಭಕ್ತಿ ಸಂಪುಟಾಧಾರವಾದ ಮಹಾಕುಂಡಲಿನೀಜನಿತಂಗಳಾದ ತಾರಕತ್ರಯಸಾಕ್ಷಾತ್ಕಾರದ್ವಾರದಿಂದೆ ಆ ಶಕ್ತಿಯಲ್ಲಿ ವೃತ್ತಿಜ್ಞಾನವಳಿದು ಸರ್ವತೋಮುಖವಾಗಿ ನಿಂದ ಶಿವತತ್ವಾಭಿವ್ಯಕ್ತಿಯೇ ಶಿವಯೋಗವೆನಿಪುದಾಗಿ, ಆ ರಾಜಯೋಗಕ್ಕೂ ಶಿವಯೋಗಕ್ಕೂ ಈ ಪ್ರಕಾರವಾದ ಭೇದವೆಂಬುದರ್ಥಂ.) ತಸ್ಮಾತ್-ಅದುಕಾರಣವಾಗಿ, ಮನೀಷಿಭಿಃ-ವಿವೇಕಿಗಳಿಂದ, ಕೇವಲಃ-ಸಕಲ ತತ್ವತಾತ್ವಿಕವಿಲಕ್ಷತೆಯಿಂ ಕೈವಲ್ಯರೂಪವಾಗಿರ್ದಂಥ, ಶಿವಯೋಗಸ್ತು-ಶಿವಯೋಗವೇ, ಗ್ರಾಹ್ಯಃ-ಗ್ರಹಿಸಲು ಯೋಗ್ಯವು. ॥೧೪॥

ಸೂ॥ ಆ ಶಿವಯೋಗಕ್ಕೆ ಸಾಧನವಪ್ಪುದರಿಂ ಮುಂದೆ ಪೇಳ್ವ ಶಿವಜ್ಞಾನಾದಿಗಳೈದು ಶಿವಯೋಗವೆನಿಸಿಕೊಂಬುವೆಂದು ಪೇಳುತ್ತಿರ್ದಪಂ:—

ಶ್ಲೋ॥ ಜ್ಞಾನಂಶಿವಮಯಂಭಕ್ತಿಶ್ಶೈವೀಧ್ಯಾನಂಶಿವಾತ್ಮಕಂ ।
ಶೈವವ್ರತಂಶಿವಾರ್ಚೇತಿ ಶಿವಯೋಗೋಹಿಪಂಚಧಾ ॥೧೫॥

ಟೀ॥ ಶಿವಮಯಂ-ಪಶುಶಾಸ್ತ್ರಜನಿತಜ್ಞಾನವಲ್ಲದಿಹುದರಿಂ ಶಿವಾತ್ಮಕವಾಗಿಪ್ಪಂಥ, ಜ್ಞಾನಂ-ಜ್ಞಾನವು, ("ಜ್ಞಾನಂಪ್ರವಾರ್ಥಬೋಧನಂ" ಎಂದುದಾಗಿ) ಶೈವೀ-ಅನ್ಯದೇವತಾಪರಿತ್ಯಾಗದಿಂ ಶಿವಸಂಬಂಧವಾದಂಥ, ಭಕ್ತಿಃ-ಭಕ್ತಿಯು, ("ಕೃತ್ಯಕ್ತಕರ್ಮಾನುಷ್ಠಾನಾಚ್ಚಿತ್ತಶುದ್ಧಿರ್ಭವೇದ್ಧ್ರುವಂ । ಚಿತ್ತಶುದ್ಧ್ಯಾಶಿವೇಭಕ್ತಿರ್ಭವತ್ಯವ್ಯಭಿಚಾರಿಣೀ" ಎಂದುದಾಗಿ) ಶಿವಾತ್ಮಕಂ-ಬಿಂದುನಾದವ್ಯೋಮಮಂತ್ರಭುವನವಿಗ್ರಹಾದಿಷಡ್ವಿಧದಿಂ ಶಿವಾತ್ಮಕವಾಗಿಪ್ಪಂಥ, ಧ್ಯಾನಂ-ಧ್ಯಾನವು, ("ಬಿಂದುರ್ನಾದಸ್ತಥಾವ್ಯೋಮಮಂತ್ರೋಭುವನವಿಗ್ರಹಃ । ಷಡ್ವಸ್ತ್ವಾತ್ಮಾಶಿವೋಧ್ಯೇಯಃಫಲಭೇದೇನಸಾಧಕೈಃ" ಎಂದುದಾಗಿ,) ಶೈವಂ-ಶಿವಸಂಬಂಧವಾಗಿಪ್ಪಂಥ, ವ್ರತಂ-ಭಸ್ಮವ್ರತವು, ("ಅಥವಾಽಥರ್ವಣೀಮಂತ್ರೇ ಗೃಹೀತ್ವಾಭಸ್ಮಪಾಂಡುರಂ । ಸರ್ವಾಂಗೋದ್ಧೂಳನಂಯತ್ತದ್ವ್ರತಂಪ್ರೋಕ್ತಂಮನೀಷಿಭಿಃ" ಎಂದುದಾಗಿ,) ಶಿವಾರ್ಚೇತಿ-ಶಿವ-ಶಿವನ, ಅರ್ಚಾ-ಮುಂದೆ ಪೇಳ್ವ ಬಾಹ್ಯಾಂತರಂಗಪೂಜಾಭಿಧಾನವು, ಇತಿ-ಈಪ್ರಕಾರದಿಂದೆ, ಶಿವಯೋಗಃ-ಶಿವಯೋಗವು, ಪಂಚಧಾ-ಐದುಪ್ರಕಾರವೆಂದು, ಹಿ-ಪ್ರಸಿದ್ಧವಲಾ. ॥೧೫॥

ಸೂ॥ ಈ ಶಿವಜ್ಞಾನ ಶಿವಭಕ್ತಿ ಶಿವಧ್ಯಾನ ಶಿವವ್ರತವೆಂಬ ನಾಲ್ಕುಪ್ರಕಾರವಮಂ ಗರ್ಭೀಕರಿಸಿಕೊಂಡಿರ್ಪುದಾಗಿ, ಶಿವಪೂಜೆಯೇ ಮುಖ್ಯ ಶಿವಯೋಗವೆನಿಸುವುದಾಗಿ, ಶಿವಪೂಜೆಯಿಂದಲ್ಲದೆ ಮೋಕ್ಷವಾಗದೆಂದು ಪೇಳ್ದಪಂ:—

ಶ್ಲೋ॥ ಶಿವಾರ್ಚನವಿಹೀನೋಯಃಪಶುರೇವನಸಂಶಯಃ ।
ಸತುಸಂಸಾರಚಕ್ರೇಽಸ್ಮಿನ್ನಜಸ್ರಂಪರಿವರ್ತತೇ ॥೧೬॥

ಟೀ॥ ಯಃ-ಆವಾತನು, ಶಿವಾರ್ಚನವಿಹೀನಃ-ಮುಂದೆಪೇಳ್ವಶಿವಪೂಜಾವಿಧಾನದಿಂದೆ ತೊಲಗಿದಾತನಪ್ಪನೋ, ಸಃ-ಆತನು, ಪಶುರೇವ-ಪಶುವೇ- ("ಯೇಷಾಂಶರೀರಿಣಾಂಶಕ್ತಿಃ ಪತತ್ಯಪಿನಿವೃತ್ತಯೇ । ತೇಷಾಂತಲ್ಲಿಂಗಮೌತ್ಸುಕ್ಯಂ ಮುಕ್ತ್ವಾದ್ವೇಷೋಭವಸ್ಥಿತೌ ॥ ಭಕ್ತಿಶ್ಚಶಿವಭಕ್ತೇಷುಶ್ರದ್ಧಾತಚ್ಛಾಸಕೇವಿಧೌ" ಎಂಬ ಶಕ್ತಿಪಾತಚಿಹ್ನವಿಲ್ಲದೆಮಿಹುದರಿಂದಾಣವಾಂಧನೆಂಬುದರ್ಥವು.) ಸಂಶಯಃ- ಸಂದೇಹವು, ನ-ಇಲ್ಲ. ಸತು-ಆ ಪಶುವಾದಾತನೇ, ಅಸ್ಮಿನ್-ಈದೃಶ್ಯಮಾನವಾದ, ಸಂಸಾರಚಕ್ರೇ-ತನುಕರಣಾಧುವನಭೋಗರೂಪದಿಂ ಪರಿಭ್ರಮಿಸುವ ಸಂಸಾರಚಕ್ರದಲ್ಲಿ, ಅಜಸ್ರಂ-ಅನವರತವೂ, ಪರಿವರ್ತತೇ-ತಿರುಗುತ್ತಿರ್ಪನು. (ತಾತ್ಪರ್ಯ-ಶಿವಾರ್ಚನವಿಹೀನನಾದ ಪುರುಷಂಗೆ ಉಳಿದ ಮಂತ್ರಾಂತರಂಗಳಲ್ಲಿಯು ಸಿದ್ಧಿಯುಂಟಾದರೂ ಜನನಮರಣಾದಿಕಂಗಳು ಬಿಡವೆಂಬಭಿಪ್ರಾಯದಿಂ ತ್ರಿಪದಾರ್ಥಂ ಸೂಚಿತವಾಯಿತೆಂಬುದರ್ಥಂ.) ॥೧೬॥

ಸೂ:—ಅರಿವಿಲ್ಲದಾತಂಗೆ ಅರ್ಚನೆಯಾಗದಾಗಿ ಆ ಶಿವತತ್ವಸ್ವರೂಪವಮಂ ಪ್ರತಿಜ್ಞಾಪೂರ್ವಕದಿಂ ನಾಲ್ಕು ಗ್ರಂಥಗಳಿಂ ಪೇಳ್ದಪಂ:—

ಶ್ಲೋ॥ ಸತ್ಯಂವದಾಮಿತತ್ತ್ವಂ ನಿರ್ಣೀತಂಪೂರ್ವಸೂರಿಭಿಃ ।
ಸರ್ವದೇವಮಯಸ್ಸಾಕ್ಷಾತ್ಸರ್ವಭೂತಮಯಸ್ತಥಾ ॥೧೭॥

ಟೀ॥ ಪೂರ್ವಸೂರಿಭಿಃ-ಪೂರ್ವದ ಶಿವಯೋಗಸಿದ್ಧರಿಂ, ನಿರ್ಣೀತಂ-"ಶಿವಶಕ್ತ್ಯಾದಿಭಿಸ್ಸಾರ್ಥಂ ಪಶ್ಯತ್ಯಾತ್ಮಾಗತಾವೃತಿಃ" ಎಂಬ ಜ್ಞಾನಸಾಕ್ಷಾತ್ಕಾರರೂಪವಾದ ಪ್ರತ್ಯಕ್ಷದಿಂದೆ "ವಿವಾದಾಧ್ಯಾಸಿತಂವಿಶ್ವಂ ವಿಶ್ವವಿತ್ಕರ್ತೃಪೂರ್ವಕಂ । ಕಾರ್ಯತ್ವಾದಾವಯೋಸ್ಸಿದ್ಧಂ ಕಾರ್ಯಂಕುಂಭಾದಿಕಂಯಥಾ"ಎಂಬುದು ಮುಂತಾದನುಮಾನಂಗಳಿಂದೆ "ವಿಶ್ವತಶ್ಚಕ್ಷುರುತವಿಶ್ವತೋಮುಖೋ ವಿಶ್ವತೋಬಾಹುರುತವಿಶ್ವತಃಪಾತ್-ಸಂಬಾಹುಭ್ಯಾಂನಮತಿಸಂಪತತ್ರೈಃ ದ್ಯಾವಾಪೃಥಿವೀಜನಯನ್ದೇವಏಕಃ- ಬ್ರಹ್ಮವಿಷ್ಣುರುದ್ರೇಂದ್ರಾಸ್ತೇಪ್ರಸೂಯಂತೇನಕಾರಣಂ- ಕಾರಣಂತುಧ್ಯೇಯಸ್ಸರ್ವೈಶ್ವರ್ಯಸಂಪನ್ನಶ್ಶಂಭುರಾಕಾಶಮಧ್ಯಗಃ" ಎಂಬ ವೇದವಾಕ್ಯಂಗಳಿಂದೆ, "ಅಥಾನಾದಿಮಲೋಪೇತಸ್ಸರ್ವಕೃತ್ಸರ್ವವಿಚ್ಛಿವಃ। ಪೂರ್ವವ್ಯತ್ಯಾಸಿತಸ್ಯಾಣೋಃಪಾಶಜಾಲಮಪೋಹತಿ" ಎಂಬ ಆಗಮಪ್ರಮಾಣ ಮುಂತಾದ ಪ್ರಮಾಣಶತಂಗಳಿಂದೆ ನಿಶ್ಚಯಿಸಲ್ಪಟ್ಟಂಥ,ತತ್ತ್ವಂ-ಆ

ಶಿವತತ್ವವನು, ಸತ್ಯಂ-ಯಥಾರ್ಥವಾಗಿ, ವದಾಮಿ-ಪೇಳ್ದಪೆನು. ಸಾಕ್ಷಾತ್-ಪ್ರತ್ಯಕ್ಷ ವಾಗಿ, ಸರ್ವದೇವಮಯಃ-ಬಿಂದುನಾದವ್ಯೋಮಮಂತ್ರಭುವನ ವಿಗ್ರಹಾದಿಸಕಲದೇವ ತಾದಿಸ್ವರೂಪನಾಗಿರ್ದಂಥ, (ಪಶುಭೂಮಿಯಾದ ಬ್ರಹ್ಮ ವಿಷ್ಣ್ವಾದಿದೇವತಾಸ್ವರೂಪ ವಲ್ಲವೆಂಬುದರ್ಥಂ) "ಸರ್ವವೇದಮಯಃ" ಎಂಬ ಪಾಠಾಂತರಕ್ಕೆ ಆಪ್ತಸಕಲವೇದ ಕರ್ತನಹತನದಿಂ-ಸಕಲವೇದಸಿದ್ಧನಹತನದಿಂ ಸಮಸ್ತ ವೇದಸ್ವರೂಪನಾಗಿರ್ಪಂಥ ಎಂ ಬುದರ್ಥಂ) ತಥಾ-ಹಾಂಗೆ,ಸರ್ವಭೂತಮಯಃ-ನಾದಾದಿದ್ವಾರದಿಂ ಸಕಲಪ್ರಾಣಿಸ್ವರೂ ಪನಾಗಿರ್ಪಂಥ, ಮೇಣು, ನಿವೃತ್ತ್ಯಾದಿ ಕಲಾದ್ವಾರದಿಂದ ಪೃಥಿವ್ಯಾದಿ ಭೂತಾತ್ಮಕ ನಾಗಿರ್ಪಂಥ. ॥೧೯॥

ಶ್ಲೋ॥ ಸರ್ವಜ್ಞಾನಮಯಸ್ಸರ್ವ್ಯ ಕ್ಸರ್ವತತ್ವೋತ್ತರೋತ್ತರಃ ।
ಸರ್ವತೇಜೋಮಯಸ್ಸಾಕ್ಷಾ ತ್ಸರ್ವಾನಂದಸ್ವರೂಪವಾ॥

ಟೀ॥ ಸಮ್ಯಕ್-ಆಣವಾದಿದೋಷವಿಲ್ಲದಿಹುದು ಸಮ್ಯಕ್ಕಾದ, ಸರ್ವಜ್ಞಾನಮ ಯಃ-ಸರ್ವಜ್ಞತಾಸ್ವರೂಪನಾಗಿರ್ಪಂಥ, ಸರ್ವತತ್ವೋತ್ತರೋತ್ತರಃ-ಪೃಥಿವ್ಯಾದಿ ಕಲತತ್ವಂಗಳಿಗೆಉತ್ತರವಾದ ಶಕ್ತಿತತ್ವಕ್ಕುತ್ತರನಾಗಿರ್ಪಂಥ, ಸಾಕ್ಷಾತ್-ಪ್ರತ್ಯಕ್ಷ ವಾಗಿ, ಸರ್ವತೇಜೋಮಯಃ- ನಿರುಪಾಧಿಕ ಜ್ಯೋತಿಸ್ವರೂಪನಾಗಿರ್ಪಂಥ, ಸರ್ವಾ ನಂದಸ್ವರೂಪವಾನ್-ಸಮಸ್ತವಾದಾನಂದವೇ ಸ್ವರೂಪನಾಗಿರ್ಪಂಥ. ॥೧೮॥

ಶ್ಲೋ॥ ಮಾಯಾಸಮೇತಸ್ಸಕಲೋ ನಿಷ್ಕಲಃಕೇವಲಃಪರಃ ।
ಅಸ್ತಿನಾಸ್ತಿದ್ವಯಾತೀತೋ ವಾಙ್ಮನೋಽಗೋಚರಾತ್ಮಕಃ॥

ಟೀ॥ ಮಾಯಾಸಮೇತಃ-ಕಾರ್ಯರೂಪವಾದ ಶುದ್ಧಮಾಯೆಯೊಡನೆ ಕೂಡಿದಾ ತನಾಗುತ್ತಲೂ, ಸಕಲಃ-ಸಕಲನೆನಿಸಿಕೊಂಡಾತ, ಕೇವಲಃ-ಕಾರಣರೂಪದಿಂ ನಿಷ್ಕ ಲವಾದ ಮಾಯೆಯಿಂದ ಸಮೇತನಾಗುತ್ತಲೂ, ನಿಷ್ಕಲಃ-ನಿಷ್ಕಲನೆನಿಸಿಕೊಂಬಾ ಥ, ಪರಃ-ಸಕಲನಿಷ್ಕಲವೆಂಬುಭಯ ಸ್ವರೂಪವಂ ಮೀರಿದಂಥ, ಅಸ್ತಿನಾಸ್ತಿದ್ವಯಾ ತೀತಃ-ದೃಶ್ಯರೂಪದಿಂದುಂಟೆಂಬ ಅದೃಶ್ಯರೂಪದಿಂದಿಲ್ಲವೆಂಬುಭಯಮಂ ಮೀರಿದಂಥ, ವಾಙ್ಮನೋಽಗೋಚರಾತ್ಮಕಃ-ಪ್ರಪಂಚವಾದವಾಕ್ಕುಗಳಿಗೆ ಪ್ರಕೃತಿಜನ್ಯವಾದ ಮ ನಸ್ಸಿಗೆ ಗೋಚರನಲ್ಲದಿರ್ಪಂಥ. ॥೧೯॥

ಶ್ಲೋ॥ ಅವರ್ಣೋವರ್ಣಸಂಯುಕ್ತೋ ವಿರೂಪೀವಿಶ್ವರೂಪಭೃತ್।
ಪರಮಾತ್ಮಾಪರಬ್ರಹ್ಮ ಕಶ್ಚಿದ್ದೇವೋಽಸ್ತಿ ಚಿಚ್ಛಿವಃ ॥೨೦॥

ಟೀ॥ ಅವರ್ಣಃ-ಅಕಾರಾದಿಕ್ಷಕಾರಾಂತವಾದ ವರ್ಣಾತ್ಮಕನಲ್ಲದಿರ್ಪಂಥ, ಮೇಣು, ಶ್ವೇತಪೀತಾದಿವರ್ಣವಿಲ್ಲದಿರ್ಪಂಥ, ವರ್ಣಸಂಯುಕ್ತಃ-ಲೋಕಾನುಗ್ರಹಾ ರ್ಥವಾಗಿ ಮಂತ್ರಬೀಜವರ್ಣಂಗಳಿಂ ಕೂಡಲ್ಪಟ್ಟಂಥ,ಮೇಣು ಧ್ಯಾನಾರ್ಥವಾಗಿ ಶ್ವೇ

ತ ಪೀತಾದಿವರ್ಣಂಗಳಿಂ ಕೂಡಲ್ಪಟ್ಟಂಥ, ವಿರೂಪೀ-ನಿರಾಕಾರನಾಗಿರ್ಪಂಥ, ವಿಶ್ವರೂಪಭೃತ್-ಸಕಲ ಬ್ರಹ್ಮಾಂಡಭರಣಸಮರ್ಥನಾಗಿರ್ಪಂಥ, ಪರಮಾತ್ಮಾ-ನಿತ್ಯನಿಗ್ರಹನಹುದರಿಂ ಪರಮಾತ್ಮಸ್ವರೂಪನಾಗಿರ್ಪ್ಪಂಥ, ಪರಬ್ರಹ್ಮ-ಬ್ರಹ್ಮಶಬ್ದವಾಚ್ಯವಾದ ಮಹಾ ಮಾಯಾಧಿಷ್ಠಾತೃವಾಗಿಯುಂ ತದ್ಧರ್ಮವಾದಾನಂದಾದಿಗಳ ಧ್ಯಾನಮಿಲ್ಲದಿಹುದರಿಂ ಪರಬ್ರಹ್ಮವೆನಿಸಿಕೊಂಬಂಥ, ಚಿಚ್ಛಿವಃ-ಪರಪ್ರಕಾಶಿಕೆಯಾದ ಮಹಾಜ್ಞಾನಶಕ್ತಿಯೊಡನೆ ಕೂಡಿ ನಿರ್ಮಲಸ್ವರೂಪನಾಗಿರ್ಪಂಥ, ಕಶ್ಚಿತ್-ಒಬ್ಬಾನೊಬ್ಬ, ದೇವಃ-ಸೃಷ್ಟಿಸ್ಥಿತ್ಯಾದಿ ಪಂಚಕೃತ್ಯಕಾರಿಯಾಗಿರ್ಪಂಥ ದೇವನು, ಅಸ್ತಿ-ಉಂಟು. ॥೨೦॥

ಸೂ:—ಈಪ್ರಕಾರದಿಂ ಪರಮಶಿವಸ್ವರೂಪನಾದ ಶಿವಂಗೆ ನಿತ್ಯಾಧಿಷ್ಠಾನರೂಪಿಯಾದ ಲಯಾಭಿಧಾನವುಳ್ಳ ಶಿವತತ್ವಸ್ವರೂಪಮಂ ನಿರೂಪಿಸಿ, ಬಳಿಕ ಶಿವತತ್ವವೇ ಜಗತ್ತಿಗುಪಾದಾನಕಾರಣಮಪ್ಪುದರಿಂ ಸಕಲ ಜಗತ್ತೂ ಶಿವತತ್ವಾತ್ಮಕವೆಂದರುಹಿಸಲಾ ಶಿವತತ್ವದಿಂದಪ್ಪ ಸೃಷ್ಟಿಯುಂ ಸೂಚನಮಾತ್ರದಿಂದೊಂಭತ್ತು ಗ್ರಂಥದಿಂ ಪೇಳ್ದಪಂ:-

ಶ್ಲೋ॥ ಶಿವಾದುತ್ಪದ್ಯತೇಶಕ್ತಿಶ್ಶಾಂತ್ಯತೀತಾಪರಾತ್ಮಿಕಾ ।
ಅಪ್ರಮೇಯಗುಣೋಪೇತಾಜೃಂಭತೇಸಾಶಿವಾಜ್ಞಯಾ॥೨೧

ಟೀ॥ ಶಿವಾತ್- ಘೃತಕಾಠಿನ್ಯನ್ಯಾಯದಿಂದಾಷ್ಟಬದ್ಧಭಾಗವಾದ ಶಿವತತ್ವದ ದೆಸೆಯಿಂದ, ಪರಾತ್ಮಿಕಾ ಪರಸ್ವರೂಪಿಣಿಯಾಗಿರ್ಪಂಥ, ಶ್ಶಾಂತ್ಯತೀತಾ-ಶಾಂತ್ಯತೀತೆಯೆನಿಸುವ, ಶಕ್ತಿಃ-ಶಕ್ತಿಯು, ಉತ್ಪದ್ಯತೇ-ಹುಟ್ಟುತ್ತಿಹುದು. ಅಪ್ರಮೇಯಗುಣೋಪೇತಾ-ಹವಣಿಸಬಾರದ ಗುಣಂಗಳಿಂ ಕೂಡಿರ್ಪ್ಪಂಥ, ಸಾ-ಆಶಾಂತ್ಯತೀತೆಯು, ಶಿವಾಜ್ಞಯಾ-ಸೃಷ್ಟಿಕೃತ್ಯಕಾರಿಣಿಯಾದ ಶಿವಶಕ್ತಿಯಿಂದೆ, ಜೃಂಭತೇ-ಕಾರ್ಯೋನ್ಮುಖವಾಗುತ್ತಿಹುದು. ॥೨೧॥

ಶ್ಲೋ॥ ಸಾಶಕ್ತಿಃಪಂಚಧಾಭಿನ್ನಾಭವತಿಬ್ರಹ್ಮರೂಪಿಣೀ ।
ಪಂಚಭೂತಾತ್ಮಿಕಾನಿತ್ಯಂತಸ್ಯಾಆಸೀದಿದಂಜಗತ್ ॥೨೨॥

ಟೀ ॥ ಬ್ರಹ್ಮರೂಪಿಣೀ-ಬ್ರಹ್ಮಶಬ್ದವಾಚ್ಯವಾದ ಮಹಾ ಮಾಯಾಸ್ವರೂಪಿಣಿಯಾಗಿರ್ಪಂಥ, (ಅಂಕುರೋತ್ಪತ್ತಿಗೆ ಬೀಜವುಬ್ಬವಂತೆ ಷಡಧ್ವಾತ್ಮಕವಾದ ಜಗದುತ್ಪತ್ತಿಗೆ ಬೃಹ್ಮಣರೂಪವಹುದರಿಂ ಬ್ರಹ್ಮಶಬ್ದವಾಚ್ಯವಾದ ಕುಂಡಲಿನೀಸ್ವರೂಪವುಳ್ಳುದೆಂಬುದರ್ಥಂ)ಸಾಶಕ್ತಿಃ-ಆಶಾಂತ್ಯತೀತೆಯೆಂಬಶಕ್ತಿಯು, ಪಂಚಧಾ-ತಾನೂಕೂಡಿ ಶಾಂತಿ ವಿದ್ಯೆ ಪ್ರತಿಷ್ಠೆ ನಿವೃತ್ತಿಯೆಂದೈದು ಪ್ರಕಾರವಾಗಿ, ಭಿನ್ನಾ- ಭೇದವಾಗಲ್ಪಟ್ಟಂತಹುದಾಗುತಪ್ಪೂ, ಪಂಚಭೂತಾತ್ಮಿಕಾ- ಕ್ರಮದಿಂದಾಕಾಶಾದಿಪಂಚಭೂತಸ್ವರೂಪಿಣಿಯಾಗಿರ್ಪಂತಹುದು, ನಿತ್ಯಂ-ಎಲ್ಲಾಗಳೂ, ಭವತಿ-ಆಗುತ್ತಿದ್ದೀತು, ತಸ್ಯಾಃ-ಆ ಪಂಚಭೂತಾತ್ಮಿಕೆಯ ದೆಸೆಯಿಂದ, ಇದಂ-ಈ ತೋರುವಂಥ, ಜಗತ್- ಉರ್ವಿ ಪರ್ವತ ಸಮುದ್ರಾದಿ ಜಗತ್ತು(ಸ್ಥೂಲಶರೀರಾತ್ಮಕವು)ಆಸೀತ್-ಆಯಿತು.॥೨೨॥

ಶ್ಲೋ॥ ಆದೌವ್ಯೋಮ್ನಿಸ್ಥಿತೋಭಾತಿಸಾಕ್ಷಾದ್ದೇವಸ್ಸದಾಶಿವಃ ।
ಸದಾಶಿವಾದೀಶ್ವರೋಽಪಿಸಂಭೂತಃಪವನೇಸ್ಥಿತಃ ॥೨

ಟೀ ॥ ಆದೌ- ಶಾಂತ್ಯತೀತಕಲಾವ್ಯಾಪ್ತವಹುದರಿಂದಾದಿಯಾಗಿರ್ಪ್ಪಂಥ, ವ್ಯೋ ಮ್ನಿ-ಆಕಾಶತತ್ವದಲ್ಲಿ, ದೇವಃ- ದಿವ್ಯತೇಜೋರೂಪನಾಗಿರ್ಪ್ಪಂಥ, ಸದಾಶಿವಃ- ನೋನ್ಮನೀ ಶಕ್ತಿಯೊಡಗೂಡಿದ ಸದಾಶಿವನು, ಸಾಕ್ಷಾತ್-ಪ್ರತ್ಯಕ್ಷವಾಗಿ, ಭಾತಿ-ಅ ಗ್ರಾಹಕನಾಗಿ ಪ್ರಕಾಶಿಸುತ್ತಿರ್ದ್ದಪನು, ಸದಾಶಿವಾತ್-ಸದಾಶಿವನ ದೆಸೆಯಿಂದ, ಸಂ ಭೂತಃ-ಸ್ವರೂಪಿಸಲ್ಪಟ್ಟ, ಈಶ್ವರೋಽಪಿ- ಮಾಯೆಯೆಂಬ ಶಕ್ತಿಯೊಡಗೂಡಿದ ಮಹೇ ಶ್ವರನು,ಪವನೇ-ವಾಯುತತ್ವದಲ್ಲಿ, ಸ್ಥಿತಃ-ತಿರೋಧಾಯಕನಾಗಿರಲ್ಪಟ್ಟಾತನು.॥

ಶ್ಲೋ॥ ಈಶ್ವರಾದಭವದ್ರುದ್ರೋವಹ್ನೌಸ್ಥಿತ್ವಾಪ್ರತಾಪವಾನ್ ।
ರುದ್ರಾದ್ವಿಷ್ಣುರ್ಮಹಾತೇಜಾವಾರಿತತ್ವೇವ್ಯವಸ್ಥಿತಃ ॥೩

ಟೀ ॥ ಈಶ್ವರಾತ್-ಅನಂತೇಶ್ವರನದೆಸೆಯಿಂದ, ರುದ್ರಃ-ಶ್ರೀಕಂಠೇಶ್ವರನು, ವ ಹ್ನೌ-ಅಗ್ನಿತತ್ವದಲ್ಲಿ,ಸ್ಥಿತ್ವಾ-ರುದ್ರಾಣಿಯೆಂಬ ಶಕ್ತಿಯೊಡಗೂಡಿರ್ದ್ದು, ಪ್ರತಾಪವಾ ಸಂಹರಿಸುವ ಪ್ರತಾಪವುಳ್ಳಾತನು, ಅಭವತ್-ಆದನು. ರುದ್ರಾತ್-ಆ ಶ್ರೀಕಂಠೇಶ್ವ ದೆಸೆಯಿಂದಲಾದ, ವಿಷ್ಣುಃ-ಲಕ್ಷ್ಮಿಯೆಂಬ ಶಕ್ತಿಯೊಡಗೂಡಿದ ನಾರಾಯಣನು, ಮ ಹಾತೇಜಾಃ- ಬ್ರಹ್ಮಾಂಡರಕ್ಷಣ ಮಹಾಸಾಮರ್ಥ್ಯವುಳ್ಳಾತನಾಗಿ, ವಾರಿತತ್ವೇ-ಅ ತತ್ವದಲ್ಲಿ, ವ್ಯವಸ್ಥಿತಃ-ಇರಲ್ಪಟ್ಟನು. ॥

ಶ್ಲೋ॥ ವಿಷ್ಣುತತೋಽದಿತೋಬ್ರಹ್ಮಾಪೃಥ್ವೀತತ್ವೇವ್ಯವಸ್ಥಿತಃ ।
ಏವಂಪರಾಯಾಶ್ಶಕ್ತೇರ್ವಿಶ್ವರೂಪಾಃಪಂಚಮೂರ್ತಯಃ ॥

ಟೀ ॥ ವಿಷ್ಣುತತೋಽದಿತಃ-ನಾರಾಯಣಸ್ವರೂಪದಿಂದಾಗಲ್ಪಟ್ಟಂಥ, ಬ್ರಹ್ಮಾ ಸೃಷ್ಟಿಕರ್ತೃವಾದ ಬ್ರಹ್ಮನು, ಪೃಥ್ವೀತತ್ವೇ-ಪೃಥ್ವೀತತ್ವದಲ್ಲಿ, ವ್ಯವಸ್ಥಿತಃ-ಬ್ರ ಣಿಯೆಂಬ ಶಕ್ತಿಯೊಡಗೂಡಿರಲ್ಪಟ್ಟನು. ಏವಂ-ಈಪ್ರಕಾರದಿಂದ, ಪರಾಯಾಃ- ಯೆನಿಸಿಕೊಂಬಂಥ, ಶಕ್ತೇಃ-ಶಾಂತ್ಯತೀತೆಯದೆಸೆಯಿಂದ, ವಿಶ್ವರೂಪಾಃ- ಆಕಾ ವಿಶ್ವರೂಪಂಗಳೂ, ಪಂಚಮೂರ್ತಯಃ-ಸದಾಶಿವಾದಿಪಂಚಮೂರ್ತಿಗಳೂ, ಆದರೆಂ ದರ್ಥಂ. ॥

ಸೂ॥ ಸಕಲ ತತ್ವದ್ವಾರಂಗಳಾದ ನಿವೃತ್ತ್ಯಾದಿಕಲೆಗಳು ನಿವೃತ್ತಿಕ್ರಮ ಬ್ರಹ್ಮಾದ್ಯಧಿಕಾರ ಮೂರ್ತಿಗಳ ಸಧಿಷ್ಠಿಸಿರ್ಪುದರಿಂದಾಕಲಾ ಪ್ರೇರಿಕೆಯಾದ ಯಸಾಮರ್ಥ್ಯ ವೀಮೂರ್ತಿಗಳಲ್ಲಿ ತೋರುತಿಹುದೆಂದು ಪೇಳ್ದಪಂ:—

ಶ್ಲೋ॥ ನಿವೃತ್ತಿಶ್ಚಪ್ರತಿಷ್ಠಾಚವಿದ್ಯಾಶಾಂತಿಸ್ತಥೈವಚ ।
ಶಾಂತ್ಯತೀತಕಲೇತ್ಯೇತಾಸ್ಸ್ಥಿತಾಬ್ರಹ್ಮಾದಿಮೂರ್ತಿಷು॥೫

ಟೀ॥ ನಿವೃತ್ತಿಶ್ಚ-ನಿವೃತ್ತಿಕಲೆಯೂ, ಪ್ರತಿಷ್ಠಾ ಚ-ಪ್ರತಿಷ್ಠೆಯೆಂಬಕಲೆಯೂ, ವಿದ್ಯಾ-ವಿದ್ಯೆಯೆಂಬ ಕಲೆಯೂ, ತಥೈವಚ-ಹಾಂಗೆಯೇ, ಶಾಂತಿಃ-ಶಾಂತಿಯೆಂಬ ಕಲೆಯೂ, ಶಾಂತ್ಯತೀತಕಲೇತಿ-ಶಾಂತ್ಯತೀತಕಲೆಯೆಂಬ, ಏತಾಃ-ಈಪಂಚಕಕಲೆಗಳು, ಬ್ರಹ್ಮಾದಿಮೂರ್ತಿಷು-ಬ್ರಹ್ಮಮುಂತಾದೈದು ಮೂರ್ತಿಗಳಲ್ಲಿ, ಸ್ಥಿತಾಃ-ಇರಲ್ಪಟ್ಟುವು. ॥

ಶ್ಲೋ॥ ತಯಾಶಿವಾಜ್ಞಯಾಹ್ಯೇತೇ ವರ್ತಂತೇಸುಮಹೋಜ್ವಲಾಃ ।
ಬ್ರಹ್ಮಣೋದೇವತಾದೈತ್ಯಾಮುನಯೋಮನವಸ್ತಥಾ॥೨೭॥

ಟೀ॥ ತಯಾ-ಆಕಲೆಗಳ ಸಧಿಷ್ಠಿಸಿದಂಥ, ಶಿವಾಜ್ಞಯಾ-ಶಿವಶಕ್ತಿಯಿಂದೆ, ಏತೇ-ಈ ಬ್ರಹ್ಮಾದಿಮೂರ್ತಿಗಳು, ಸುಮಹೋಜ್ವಲಾಃ-ಸೃಷ್ಟ್ಯಾದಿಕೃತ್ಯಂಗಳಂವಾಳ್ವ ಮಹಾಸಾಮರ್ಥ್ಯಮುಳ್ಳವರ್ಗಳಾಗಿ, ವರ್ತಂತೇ-ವರ್ತಿಸುತ್ತಿಹರು. ಬ್ರಹ್ಮಣಃ-ಆಮಂತ್ರಸಿದ್ಧನಪ್ಪ ಬ್ರಹ್ಮನವೆಸೆಯಿಂದೆ, ದೇವತಾಃ-ಇಂದ್ರಾದಿ ಸಕಲದೇವತೆಗಳು, ದೈತ್ಯಾಃ-ದಿತಿಯಮಕ್ಕಳಾದ ಬಲೀಂದ್ರಾದಿ ರಾಕ್ಷಸರುಗಳು, ಮುನಯಃ-ಸನಕಾದಿಮುನಿಗಳು, ತಥಾ-ಹಾಂಗೆ, ಮನವಃ-ಸ್ವಾಯಂಭುವಾದಿ ಮನುಗಳು,ಹುಟ್ಟುತ್ತಿಹರು ಎಂದರ್ಥ॥

ಶ್ಲೋ॥ ಸ್ವೇದಜಾಶ್ಚಾಂಡಜಾಸ್ಸರ್ವೇಪ್ರಾಣಿನಶ್ಚ ಜರಾಯುಜಾಃ ।
ತೃಣಗುಲ್ಮಲತಾವೃಕ್ಷಾದ್ಯನೇಕೋದ್ಭಿಜ್ಜಕೋಟಯಃ॥೨೮॥

ಟೀ॥ ಸ್ವೇದಜಾಶ್ಚ-ಬೆವರಿನಿಂದ ಪುಟ್ಟುವ, ಪ್ರಾಣಿನಶ್ಚ-ಪ್ರಾಣಿಗಳೂ, ಅಂಡಜಾಃ-ತತ್ತಿಯೊಡೆದು ಪುಟ್ಟುವಂಥ, ಸರ್ವೇ-ಸಮಸ್ತವಾಗಿಪ್ಪಂಥ ಪ್ರಾಣಿಗಳೂ, ಜರಾಯುಜಾಃ-ಮಾಸಿನಬಲ್ಲಿಗೂಡಿ ಜನಿಸುವ ಪ್ರಾಣಿಗಳೂ, ತೃಣಗುಲ್ಮಲತಾವೃಕ್ಷಾದ್ಯನೇಕೋದ್ಭಿಜ್ಜಕೋಟಯಃ-ಪರಮಾಣುಪುಂಜವೇ ಬೀಜವಾಗುಳ್ಳ ತೃಣಗುಲ್ಮಲತೆವೃಕ್ಷಮುಂತಾದನೇಕ ಉದ್ಭಿಜ್ಜಗಳೂ. ॥೨೮॥

ಶ್ಲೋ॥ ಗಿರಯಸ್ಸರಿತಶ್ಚಾನ್ಯೇ ಸಮುದ್ರಾಶ್ಚ ಸರಾಂಸಿಚ ।
ಸಂಭವಂತಿಕ್ರಮೇಣೈವತಸ್ಮಾಚ್ಛಿವಮಯಂಜಗತ್ ॥೨೯॥

ಟೀ॥ ಅನ್ಯೇ-ಈಪ್ರಾಣಿವರ್ಗಕ್ಕನ್ಯಂಗಳಾಗಿಪ್ಪ, ಗಿರಯಃ-ಲೋಕಾಲೋಕಾದಿಪರ್ವತಂಗಳು, ಸರಿತಃ-ಗಂಗಾದಿನದಿಗಳು, ಸಮುದ್ರಾಶ್ಚ-ಲವಣಾದಿ ಗರ್ಭೋದಾಂತಮಾದ ಸಮುದ್ರಂಗಳು, ಸರಾಂಸಿಚ-ಅರುಣೋದಯ ಮುಂತಾದ ಸರಸ್ಸುಗಳು, ಕ್ರಮೇಣೈವ-ಕ್ರಮದಿಂದವೇ, ಸಂಭವಂತಿ-ಪುಟ್ಟುತಿಹವು. ತಸ್ಮಾತ್-ಅದುಕಾರಣವಾಗಿ, ಜಗತ್- ಹಿಂದೆ ಹೇಳಿದ ಚೇತನಾಚೇತನಾತ್ಮಕವಾದ ಪ್ರಪಂಚವು,ಶಿವಮಯಂ-ಷಡಧ್ವೋಪಾದಾನಕಾರಣವಾದ ಶಿವತತ್ವಸ್ವರೂಪಮಾಗಿಪ್ಪಂತಹುದು. ॥೨೯॥

ಸೂ:—ಈಪ್ರಕಾರದಿಂದೆ ಶಿವತತ್ವದಪೂರ್ಣತೆಯಿಂದತಿಸಮೀಪತ್ವಮಂ ಸೃಷ್ಟಿದ್ವಾರದಿಂ ಪೇಳ್ದು, ಈಗಳೀಶಿವತತ್ವದ ವ್ಯಕ್ತಾವ್ಯಕ್ತರೂಪಾನುಸಂಧಾನಧ್ಯಾನದಿಂ ಪರಮಶಿವಾತ್ಮಕವಾದ ಮೋಕ್ಷಮಪ್ಪುದೆಂದು ಪೇಳ್ದಪಂ:—

ಶ್ಲೋ॥ ಯಸ್ತಂಶಿವಂಕೇವಲಚಿತ್ಸ್ವರೂಪಂ ಸೂರ್ಯೇಂದುವೈಶ್ವಾನರ ಮಂಡಲಸ್ಥಂ । ಗುರುಪ್ರಸಾದಾತ್ತ್ರಿಮಲಕ್ಷಯತ್ವಾದ್ಧ್ಯಾತ್ವಾ ಯಜೇನ್ಮೋಕ್ಷಸುಖಂಸಯಾತಿ ॥೩೦॥

ಟೀ॥ ಯಃ-ಯಾವನಾನೊರ್ವಪುರುಷನು, ತಂ-ಆ ಹಿಂದೆ ಹೇಳಿದ ಸ್ವರೂಪವುಳ್ಳಂಥ, ಮೇಣು, ವೇದಶಾಸ್ತ್ರಾಗಮಾದಿ ಪ್ರಸಿದ್ಧವಾಗಿರ್ಪ್ಪಂಥ, ಕೇವಲಚಿತ್ಸ್ವರೂಪಂ-ಕೇವಲ-ನಿತ್ಯನಿರ್ಮಲವಾದ, ಚಿತ್-ಪರಪ್ರಕಾಶಿಕೆಯಾದ ಮಹಾಜ್ಞಾನಶಕ್ತಿಯೇ, ಸ್ವರೂಪಂ- ಸ್ವರೂಪವಮಾಗುಳ್ಳಂಥ, ಸೂರ್ಯೇಂದುವೈಶ್ವಾನರಮಂಡಲಸ್ಥಂ-ಚಕ್ರೋದ್ಧರಣರೂಪವಾದ ಮಹಾಮಂಡಲದಲ್ಲಿ ಸೂರ್ಯಚಂದ್ರಾಗ್ನಿ ಮಂಡಲದಲ್ಲಿ ವರ್ತಿಸುತ್ತಿರ್ಪ್ಪಂಥ, ಮೇಣು, ಷಡಾಧಾರಾತ್ಮಕವಾದ ಲಿಂಗಮಧ್ಯದ ಬೀಜಾಕ್ಷರಂಗಳಲ್ಲಿ ಮಂಡಲತ್ರಯರೂಪದಿಂ ವರ್ತಿಸುತ್ತಿರ್ಪ್ಪಂಥ, ಮೇಣು, ಇಡೆ ಪಿಂಗಳೆ ಸುಷುಮ್ನೆಗಳೆಂಬ ಮಂಡಲತ್ರಯ ರೂಪದಲ್ಲಿ ವರ್ತಿಸುತ್ತಿರ್ಪ್ಪಂಥ, ಮೇಣು, ಶುದ್ಧತಾಮಸ ಶುದ್ಧರಾಜಸ ಶುದ್ಧಸಾತ್ವಿಕರೂಪವಾದ ಕೃಷ್ಣರಕ್ತಶ್ವೇತರೂಪವಾದ ಮಂಡಲತ್ರಯಾತ್ಮಕವಾದ ಪ್ರಣವಮಧ್ಯದಲ್ಲಿ ವರ್ತಿಸುತ್ತಿರ್ಪ್ಪಂಥ, ಶಿವಂ- ಪರಶಿವನನು, ಗುರುಪ್ರಸಾದಾತ್-ಶ್ರೀಗುರುವಿನ ಕೃಪಾಪ್ರಸಾದದ ದೆಸೆಯಿಂದೆ, ತ್ರಿಮಲಕ್ಷಯತ್ವಾತ್-ಆಣವಕಾರ್ಮಿಕ ಮಾಯೆಯೆಂಬ ಮಲತ್ರಯದ ನಾಶದದೆಸೆಯಿಂದೆ, ಧ್ಯಾತ್ವಾ-ಧ್ಯಾನವಂಮಾಡಿ, ಯಜೇತ್- ಪೂಜಿಸುವನೋ, ಸಃ-ಆಧ್ಯಾನಪೂಜಕನು, ಮೋಕ್ಷಸುಖಂ-ಪರಾಪರಮೋಕ್ಷಸುಖವನು, ಯಾತಿ-ಎಯ್ದುವನು ॥೩೦॥

ಸೂ॥ ಈ ನಿಜಮೋಕ್ಷೈಕಸಾಧನವಾದ ಶಿವಧ್ಯಾನಮಂ ವಿಸ್ತಾರವಾಗಿ ಪೇಳೋಸುಗ ಮೊದಲಲ್ಲಿ ಧ್ಯೇಯವಸ್ತುವಿನ ದ್ವೈವಿಧ್ಯದಿಂ ಧ್ಯಾನವೆರಡು ಪ್ರಕಾರವೆಂದು ಪೇಳುತ್ತ, ಆ ಧ್ಯಾನಂಗಳ ಪೂರ್ವೋತ್ತರ ಭಾಗಮಂ ಪೇಳ್ದಪಂ:—

ಶ್ಲೋ॥ ಶಿವಧ್ಯಾನಂದ್ವಿಧಾಜ್ಞೇಯಂಸಗುಣಂನಿರ್ಗುಣಂತಥಾ ।
ಆದೌಸಗುಣಮಾಶ್ರಿತ್ಯಪಶ್ಚಾನ್ನಿರ್ಗುಣಮಾಶ್ರಯೇತ್ ॥೩೧॥

ಟೀ॥ಶಿವಧ್ಯಾನಂ-ಮುಂದೆ ಪೇಳ್ವ ಶಿವಧ್ಯಾನವು, ಸಗುಣಂ-ಸಗುಣಧ್ಯಾನವೆಂದು, ತಥಾ-ಹಾಂಗೆ, ನಿರ್ಗುಣಂ-ನಿರ್ಗುಣಧ್ಯಾನವೆಂದು, ದ್ವಿಧಾ-ಎರಡು ಪ್ರಕಾರವಾಗಿ, ಜ್ಞೇಯಂ-ಅರಿಯಲುಯೋಗ್ಯವು, ಆದೌ- ಮೊದಲಲ್ಲಿ, ಸಗುಣಂ-ಸಾಲಂಬಧ್ಯಾನವನು, ಆಶ್ರಿತ್ಯ-ಆಶ್ರಯಿಸಿ, ಪಶ್ಚಾತ್-ತದನಂತರದಲ್ಲಿ, ನಿರ್ಗುಣಂ-ನಿರಾಲಂಬಧ್ಯಾನವನು, ಆಶ್ರಯೇತ್-ಆಶ್ರಯಿಸುವುದು. ॥೩೧॥

ತಾತ್ಪರ್ಯ:—ಅನಾದಿಜನ್ಮಾಂತರಂಗಳಲ್ಲಿ ಖಂಡಿತವಾದ ಮಾಯಿಗಾಜು ವಿಷಯರಾಶಿ ಪರಂಪರಾಗ್ರಹಣದಿಂ ಮೆಯ್ಯುಂಪಮನಸ್ಸು ಅನಾಸ್ವಾದಿತವಾದ ನಿರಾಲಂಬವಸ್ತುಗ್ರಹಣವ ನರಿಯದಾಗಿ, ಸಾಲಂಬಕ್ರಮದಿಂದಭ್ಯಾಸಮಂ ಮಾಳ್ಪುದೆಂಬುದರ್ಥಂ.।

ಸೂ॥ ಸಾಲಂಬ ನಿರಾಲಂಬ ಧ್ಯಾನಾನುಸಾರದಿಂದುಭಯ ವಿಧವಾದ ಧ್ಯೇಯಸ್ವರೂಪಮಂ ಪೇಳ್ದಪಂ:—

ಶ್ಲೋ॥ ಸಗುಣಂ ಬಹುಧಾ ಪ್ರೋಕ್ತಂ ಬಾಹ್ಯಾಭ್ಯಂತರಗೋಚರಂ ।
ಇಂದ್ರಿಯಾದಿಭಿರಗ್ರಾಹ್ಯಂ ನಿರ್ಗುಣಂ ತ್ವಂತರಿಕ್ಷವತ್ ॥೩೨॥

ಟೀ॥ ಬಾಹ್ಯಾಭ್ಯಂತರಗೋಚರಂ-ಬಾಹ್ಯ-ಕರ್ಮೇಂದ್ರಿಯವಾದ ಪೂಜಾಪಸಾಧನಂಗಳಾದ ಪಾಣೀಂದ್ರಿಯವಾಗಿಂದ್ರಿಯಂಗಳಿಗೂ, ಮೇಣು, ಬಾಹ್ಯ-ಜ್ಞಾನೇಂದ್ರಿಯವಾದ ನೇತ್ರಶ್ರೋತ್ರಂಗಳಿಗೂ, ಅಭ್ಯಂತರ-ಮನೋಬುದ್ಧಿ ರೂಪವಾದಂತಃಕರಣಂಗಳಿಗೂ, ಗೋಚರಂ-ಇಷ್ಟಲಿಂಗಾದಿರೂಪದಿಂದವೂ ಸ್ತೋತ್ರಮಂತ್ರಾದಿ ರೂಪದಿಂದವೂ ವಿಚಿತ್ರಪ್ರಕಾಶಾದಿ ರೂಪದಿಂದವೂ ವಿಚಿತ್ರನಾದಾದಿ ರೂಪದಿಂದವೂ ಬಾಹ್ಯಕ್ಕೆ ಗೋಚರವಾಗಿರ್ಪುದಂಥ, ಸಗುಣಂ-ಸಗುಣತತ್ವವು, ಬಹುಧಾ-ಹಲವುಪ್ರಕಾರವೆಂದು, ಪ್ರೋಕ್ತಂ-ಹೇಳಲ್ಪಟ್ಟಿತು. ನಿರ್ಗುಣಂತು- ನಿಷ್ಕಲವಾದ ಪರನಾದಾದಿಗಳಾದೊಡೆ, ಅಂತರಿಕ್ಷವತ್-ಪಂಚಮಭೂತವಾದ ಗಗನದೋಪಾದಿಯಲ್ಲಿ, ಇಂದ್ರಿಯಾದಿಭಿಃ-ಬಾಹ್ಯೇಂದ್ರಿಯಾಂತಃಕರಣಗಳಿಂದವೂ, ಅಗ್ರಾಹ್ಯಂ-ಗ್ರಹಿಸಲು ಯೋಗ್ಯವಲ್ಲದೆ ಯಿರ್ಪುದಂತಹುದು. (ಆನಂದದಂತೆ ಜ್ಞಾನಮಾತ್ರ ಗೋಚರವೆಂಬುದರ್ಥಂ. ಇದರಿಂದೆ ಸಕಲ-ಸಕಲನಿಷ್ಕಲ-ನಿಷ್ಕಲವೆಂಬ ಮೂರುತತ್ವಂ ಸೂಚಿಸಲ್ಪಟ್ಟಿತು.) ॥೩೭॥

ಸೂ॥ ಈ ಸಗುಣ ನಿರ್ಗುಣ ವಸ್ತು ಸಾಕ್ಷಾತ್ಕಾರಂ ಗುರೂಪದೇಶದಿಂದಪ್ಪುದಾಗಿ ಆ ಶ್ರೀಗುರೂಪಾಸ್ತಿಯಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ॥ ಏತದ್ದ್ವಯಪರಿಜ್ಞಾನಂ ಗುರುವಕ್ತ್ರೇ ವ್ಯವಸ್ಥಿತಂ ।
ಅತಏವ ಮುಮುಕ್ಷೂಣಾಂ ಪೂಜನೀಯಸ್ಸದ್ಗುರುಃ ॥೩೩॥

ಟೀ॥ ಏತದ್ದ್ವಯಪರಿಜ್ಞಾನಂ-ಈಸಾಲಂಬನಿರಾಲಂಬವೆಂಬ ಧ್ಯೇಯವಸ್ತುದ್ವಯದ ಅಪರೋಕ್ಷಜ್ಞಾನವು, ಗುರುವಕ್ತ್ರೇ- ಆಚಾರ್ಯನಮುಖದಲ್ಲಿ, ವ್ಯವಸ್ಥಿತಂ-ಶಾಸ್ತ್ರದ್ವಾರದಿಂದಲೂ ಕೈದೋರಿಕೆಯಿಂದಲೂ ನಿಶ್ಚಯಿಸಲ್ಪಟ್ಟಿತು. ಅತಏವ-ಇದು ಕಾರಣವಾಗಿಯೇ, ಮುಮುಕ್ಷೂಣಾಂ-ಮೋಕ್ಷಾಪೇಕ್ಷೆಯುಳ್ಳರ್ಗೆ, ಸಃ-ಆ ಶಿವಯೋಗಜ್ಞಾನಸಂಪನ್ನತೆಯಿಂ ಪ್ರಸಿದ್ಧನಾಗಿರ್ಪನಂಥ, ಗುರುಃ-ಆಚಾರ್ಯನು, ಪೂಜನೀಯಃ-ಪೂಜೆಸಲ್ತಕ್ಕಾತನು. ॥೩೩॥

ಸೂ॥ ಶಿವಯೋಗಾನುಭವಸಿದ್ಧನಾದ ಶ್ರೀಗುರುವಂ ಪಡೆಯುದಾತಂಗೆ ಇಹ ಪರ ಪ್ರಯೋಜನಂಗಳಾಗವೆಂದು ಪೇಳ್ದಪಂ—

ಶ್ಲೋ॥ ಸದಾಯುರಾರೋಗ್ಯಮಪಾರಭೂತಿಂ ವಿದ್ಯಾಂ ಯಶಸ್ಸ್ವರ್ಗ
ಸುಖಂಚ ಮೋಕ್ಷಂ। ಫಲಾನಿ ಸರ್ವಾಣಿ ನರಸ್ಸಮಾಪ್ತುಂ ಕಥಂ
ಸಮರ್ಥೋ ಗುರುಣಾ ವಿಹೀನಃ ॥೩೪॥

ಟೀ॥ ಸದಾಯುಃ-ಯೋಗಬಲದಿಂ ಬ್ರಹ್ಮಕಲ್ಪಿತವಾದ ಶತಾಯುವಂ ಮೀರಿ ದೀರ್ಘಾಯುಷ್ಯವನು, ಆರೋಗ್ಯಂ-ಧೌತಿಮೊದಲಾದಷಟ್ಕರ್ಮದಿಂ ತ್ರಿದೋಷಶಮನ ದಿಂ ನೀರೋಗತೆಯುನು, ಅಪಾರಭೂತಿಂ-ಅಣಿಮಾದಿಮಹಾಸಂಪತ್ತುಗಳನು, ವಿದ್ಯಾಂ-ಲೌಕಿಕ ವೈದಿಕ ಆಧ್ಯಾತ್ಮಿಕ ಅತಿಮಾರ್ಗಿಕ ಮಾಂತ್ರಿಕಗಳೆಂಬ ಮಹಾವಿದ್ಯೆಯನ್ನು, ಯಶಃ-ಕೀರ್ತಿಯನು, ಸ್ವರ್ಗಸುಖಂಚ-ಸ್ವರ್ಗಾದಿದೇವಲೋಕಂಗಳಲ್ಲಿಯ ಮಹಾಸುಖ ವನು, ಮೋಕ್ಷಂ- ಪರಮಶಿವತ್ವಾಭಿವ್ಯಕ್ತಿರೂಪವಾದ ಮೋಕ್ಷವನು, ಸರ್ವಾಣಿ-ಸಮಸ್ತವಾದಂಥ, ಫಲಾನಿಚ-ಅವಾಂತರ ಫಲಗಳನೂ, ಸಮಾಪ್ತುಂ-ಚೆನ್ನಾಗಿ ಪಡೆ ಯಲು, ಗುರುಣಾವಿಹೀನಃ-ಗುರುವಿಲ್ಲದಿರ್ಪಂಥ, ನರಃ-ಪುರುಷನು, ಕಥಂ-ಹೇಂಗೆ, ಸಮರ್ಥಃ-ಸಮರ್ಥನು ? (ಗುರೂಪದೇಶವಿಲ್ಲದಾತಂಗಾವ ಪ್ರಯೋಜನಂಗಳೂ ಆಗ ವೆಂಬುದರ್ಥಂ.) ॥೩೬॥

ಸೂ ॥ " ಶಿವಏವಗುರುಸ್ಸಾಕ್ಷಾತ್ " ಎಂಬುದಾಗಿ ಪರಾಪರಜ್ಞಾನಸಂಪತ್ತಿ ಯಿಂದೆ ಆಚಾರ್ಯಪಟ್ಟಾಭಿಷಿಕ್ತನಾದ ಶ್ರೀಗುರುವನ್ನು ಶಿವನಂ ಪೂಜಿಸುವಂತೆ ಪೂಜಿ ಪುದೆಂದು ಪೇಳ್ದಪಂ—

ಶ್ಲೋ॥ ಉಕ್ತಲಕ್ಷಣಸಂಯುಕ್ತ ಮಾರ್ಯಂ ಸರ್ವಾರ್ಥವೇದಿನಂ।
ಕರ್ಮಣಾ ಮನಸಾ ವಾಚಾ ಶಿವವತ್ಪೂಜಯೇದ್ಗುರುಂ॥೩೭॥

ಟೀ॥ ಉಕ್ತಲಕ್ಷಣಸಂಯುಕ್ತಂ-ಶಿವಾಗಮೋಕ್ತವಾದ ಗುರುಲಕ್ಷಣದಿಂ ಸಂಪ ನ್ನನಾಗಿರ್ಪಂಥ, ಆರ್ಯಂ- ಲೋಕಪೂಜ್ಯನಾಗಿರ್ಪಂಥ, ಸರ್ವಾರ್ಥವೇದಿನಂ- ಸಕಲ ಶಾಸ್ತ್ರಾರ್ಥಜ್ಞಾನಿಯಾಗಿರ್ಪಂಥ, ( " ಸಿದ್ಧಾಂತಏವಸಿದ್ಧಾಂತಃ ಪೂರ್ವಪಕ್ಷಸ್ತಥಾಪ ರೇ " ಎಂದುದಾಗಿ ಸಿದ್ಧಾಂತಜ್ಞಾನಬಲದಿಂದನ್ಯಶಾಸ್ತ್ರಂಗಳಂ ಪೂರ್ವಪಕ್ಷಮಾಗಿ ತಿಳಿ ದಾತನೆಂಬುದರ್ಥಂ) ಗುರುಂ-ಆಶ್ರೀಗುರುವನು, ಶಿವವತ್-ಶಿವನಂತೆ, ಕರ್ಮಣಾ-ಕ್ರಿಯೆ ಯಿಂದೆ, ಮನಸಾ-ಮನಸ್ಸಿನಿಂದೆ, ವಾಚಾ-ವಾಕ್ಕಿನಿಂದೆ, ಪೂಜಯೇತ್-ಪೂಜಾ ಧ್ಯಾನ ಸ್ತೋತ್ರಗಳಿಂದೆ ಯಜಿಸುವುದು. ।೩೭।

ಸೂ ॥ ಆ ಶ್ರೀಗುರುವಿನತ್ತಣಿಂ ಶಿವದೀಕ್ಷೆಯಂ ಪಡೆದಾತಂಗೆ ಸಂದೇಹವಿಲ್ಲದ ಫಲಸಿದ್ಧಿಯುಪ್ಪುದೆಂದು ಪೇಳ್ದಪಂ—

ಶ್ಲೋ॥ ತಸ್ಮಾದ್ಗುರುಮುಖೇನೈವ ದೀಕ್ಷಿತೋಯಶ್ಶಿವಾಶ್ರಿತಃ ।
ಚತುರ್ವರ್ಗಫಲಾವಾಪ್ತಿಸುಖಂ ತಸ್ಯಕರೇಸ್ಥಿತಂ ॥೩೮॥

ಟೀ॥ ಯಃ-ಶಿವನಾನೊರ್ವಪುರುಷನು, ತಸ್ಮಾತ್--ಆಪೂರ್ವೋಕ್ತವಾಗಿರ್ಪಂ ಥ, ಗುರುಮುಖಾದೇವ-ಗುರುಶ್ರೇಷ್ಠನತ್ತಣಿಂದವೇ, ದೀಕ್ಷಿತಃ-ಶಿವದೀಕ್ಷೆಯಂಪಡೆ ದಾತನಾಗಿಯೂ, ( ಆ ಶಿವದೀಕ್ಷೆಯು ಸದ್ಯೋನಿರ್ವಾಣದೀಕ್ಷೆ--ಅಸದ್ಯೋನಿರ್ವಾಣದೀ ಕ್ಷೆ-ಶಿವಧರ್ಮಿಣಿ-ಲೋಕಧರ್ಮಿಣಿ-ಭೌತಿಕಿ-ನೈಷ್ಠಿಕಿ-ಮುಂತಾಗಿ ವೇದಮಂತ್ರಕ್ರಿಯಾರೂ

ಪದಿಂ ಪಲವುತೆರನಾದರೂ, ಸಮಯದೀಕ್ಷೆ-ಸಾಧಕದೀಕ್ಷೆ--ಆಚಾರ್ಯಾಭಿಷೇಕವೆಂದು ಮೂರು ಕಟ್ಟಾಗಿರ್ಪುದು. ಅಲ್ಲಿ ಅಸಮರ್ಥರ್ಗೆ ಮಾಳ್ಪುದೇ ಸಮಯದೀಕ್ಷೆ: ಸಮರ್ಥರ್ಗೆಮಾಳ್ಪುದೇ ಸಾಧಕದೀಕ್ಷೆ. ಸಾಧಕರೊಳವಿಶಿಷ್ಟನಾದುಪದೇಶಕರ್ತೃವಿಂಗೆಮಾಳ್ಪುದೇ ಆಚಾರ್ಯಾಭಿಷೇಕವಾದ ಕಾರಣವಾ ಆಚಾರ್ಯನಿಂದವೇ ಉಪದೇಶಮಂ ಪಡೆವುದನ್ಯರಿಂ ಪಡೆಯಲಾಗದೆಂಬುದಭಿಪ್ರಾಯಂ.) ಶಿವಾಶ್ರಿತಃ-ನಿರ್ಮಲತ್ವವನಾಶ್ರೈಸಿದಾತನುಂಟೋ, ತಸ್ಯ-ಆಶಿವದೀಕ್ಷಿತನ, ಕರೇ-ಹಸ್ತದಲ್ಲಿ,ಚತುರ್ವರ್ಗಫಲಾವಾಪ್ತಿಸುಖಂ-ಧರ್ಮಾರ್ಥಕಾಮಮೋಕ್ಷವೆಂಬ ನಾಲ್ಕುಪ್ರಕಾರವಾದ ಫಲದಪ್ರಾಪ್ತಿಯಿಂದಾಗುವಸುಖವು, ಸ್ಥಿತಂ-ಇರಲ್ಪಟ್ಟಿತು. ॥೨೬॥

ಸೂ॥ ಶಿವಾನುಗ್ರಹವಮಂ ಪಡೆದಾತನು ದೀಕ್ಷಾಪೂರ್ಣತೆಗೋಸುಗ ಶರೀರಾಂತವಾಗಿ ದೀಕ್ಷೋತ್ತರವಲ್ಲಿ ವಿಹಿತವಾದ ಪೂಜಾಧ್ಯಾನಂಗಳಂ ಮಾಳ್ಪುದೆಂದು ಪೇಳ್ದಪಂ

ಶ್ಲೋ॥ ತ್ರಿಕಾಲಂವಾದ್ವಿಕಾಲಂವಾ ಪ್ಯೇಕಕಾಲಮಥಾಪಿವಾ ।
ಭಕ್ತ್ಯಾಗುರೂಕ್ತಮಾರ್ಗೇಣ ಪೂಜಯೇಚ್ಚಿನ್ಮಯಂಶಿವಂ ॥

ಟೀ॥ ತ್ರಿಕಾಲಂವಾ-ಉದಯಮಧ್ಯಾಹ್ನಸಾಯಾಹ್ನಗಳೆಂಬ ತ್ರಿಕಾಲದಲ್ಲಾದರೂ, ದ್ವಿಕಾಲಂವಾಪಿ-ಉದಯಾಸ್ತಗಳೆಂಬೆರಡು ಕಾಲದಲ್ಲಾದರೆಯೂ, ಏಕಕಾಲಮಥಾಪಿವಾ-ಪೂರ್ವೋಕ್ತಕಾಲದೊಳೊಂದು ಕಾಲದಲ್ಲಿಯಾದರೂ, ಭಕ್ತ್ಯಾ-ವಿಷಯವೈರಾಗ್ಯದಿಂ ಪೂಜ್ಯಪ್ರೀತಿರೂಪವಾದ ನಿಜಭಕ್ತಿಯಿಂದೆ, ಗುರೂಕ್ತಮಾರ್ಗೇಣ-ಶಾಸ್ತ್ರಾನುಭವಸಮ್ಮತವಾಗಿ ಶ್ರೀಗುರು ನಿರೂಪಿಸಿದ ಮಾರ್ಗದಿಂದೆ, ಚಿನ್ಮಯಂ-ಜ್ಞಾನಕ್ರಿಯಾಶಕ್ತಿರೂಪನಾದ, ಶಿವಂ-ಶಿವನನು, ಪೂಜಯೇತ್-ಪೂಜಿಸುವುದು. ॥೨೭॥

ಸೂ॥ ಈ ಪೂರ್ವೋಕ್ತಮಾದ ಪೂಜೆ ಯೆರಡುಪ್ರಕಾರ ವದರೊಳಗೊಂದಕ್ಕೆ ಮುಖ್ಯತ್ವವೆಂದು ಪೇಳ್ದಪಂ—

ಶ್ಲೋ॥ ಅಂತರ್ಯಾಗೋ ಬಹಿರ್ಯಾಗೋ ದ್ವಿವಿಧಂ ತಚ್ಛಿವಾರ್ಚನಂ ।
ಮುಖ್ಯಾಚಾಭ್ಯಂತರೀಪೂಜಾ ಸಾಚಬಾಹ್ಯಾಗ್ರಜನೋದಿತಾ ॥

ಟೀ॥ ತಚ್ಛಿವಾರ್ಚನಂ-ಆಪೂರ್ವೋಕ್ತಮಾದ ಶಿವಪೂಜೆಯು, ಅಂತರ್ಯಾಗಃ-ಅಂತಃಪೂಜೆಯೆಂದು, ಬಹಿರ್ಯಾಗಃ-ಬಾಹ್ಯಪೂಜೆಯೆಂದು, ದ್ವಿವಿಧಂ-ಎರಡುಪ್ರಕಾರವು, ತತ್ರ-ಆಎರಡುಪ್ರಕಾರದಲ್ಲಿ, ಆಭ್ಯಂತರೀಪೂಜಾ- ಅಂತರಂಗವಾದಜ್ಞಾನಪೂಜೆಯು, ಮುಖ್ಯಾ-ವಿಶಿಷ್ಟವಾಗಿರ್ಪಂತಹುದು, ಸಾಚ-ಆಆಭ್ಯಂತರಪೂಜೆಯು, ಬಾಹ್ಯಾಜ್ಜನೋದಿತಾ--ಬಾಹ್ಯಪೂಜೆಯಿಂಜನಿಸಲ್ಪಟ್ಟಂತಹುದು. (ಬಾಹ್ಯಪೂಜಾವಿಹೀನಂಗೆ ಅಂತಃಪೂಜೆಯಾಗದೆಂಬುದರ್ಥಂ)

ಸೂ॥ ಅಂತಃಪೂಜಾವಿಧಾನವನರಿಯದೆ ಬಾಹ್ಯಪ್ರತಿಮಾದಿಕಂಗಳಲ್ಲಿ ಪೀಠಾರ್ಚನೆಯನ್ನೇ ಮಾಳ್ಪವರ್ಗಳಜ್ಞರೆಂದು ಪೇಳ್ದಪಂ—

ಶ್ಲೋ॥ ಆತ್ಮಸ್ಥಮತ್ಯಂತರುಚಿಂ ಪ್ರಶಾಂತ ಮಶ್ರಾಂತಮೀಶಂಹಿ ಯ ಜಂತಿಸಂತಃ। ತಂ ಬಾಹ್ಯನಾನಾಪ್ರತಿಮಾಸು ಬಾಹ್ಯಕ್ರಿಯಾ ಭಿರೇವಾಲ್ಪಧಿಯೋ ಯಜಂತಿ ॥೩೯॥

ಟೀ॥ ಸಂತಃ-ಸತ್ಪುರುಷರುಗಳು, ಅತ್ಯಂತರುಚಿಂ- "ಜ್ವಲತ್ಕಾಲಾನಲಾಭಾಸಾ ವಿದ್ಯುತ್ಕೋಟಿಸಮಪ್ರಭಾ॥" ಎಂದುದಾಗಿ, ವಿಶಿಷ್ಟಜ್ಯೋತಿರ್ಮಯನಾಗಿರ್ಪ್ಪಂಥ, ಪ್ರಶಾಂತಂ-ಪರಮಶಾಂತನಾಗಿರ್ಪ್ಪಂಥ, ಈಶಂ-ಅನುಗ್ರಹಕರ್ತೃವಾದ ಪರಶಿವನನ್ನು, ಅಶ್ರಾಂತಂ-ಅನವರತವೂ, (ಜಾತಪ್ರೇತ ಸೂತಕಾದಿ ಸಂಕಲ್ಪವಿಲ್ಲವಾಗಿ ಊಟಯಾದಿಕಾಲನಿಯಮವಿಲ್ಲದೆ ಜಾಗ್ರದಾದ್ಯವಸ್ಥಾನಿಯಮವಿಲ್ಲದೆ ಆವಾಗವೂ ಎಂಬುದರ್ಥಂ.) ಆತ್ಮಸ್ಥಂ-ಆತ್ಮೀಯವಾದ ತನುತ್ರಯದಲ್ಲಿ ತೋರಿಗದೆ ಇರ್ಪ್ಪಂಥಾತನನ್ನಾಗಿ, ಯಜಂತಿ-ಪೂಜಿಸುತ್ತಿರ್ಪ್ಪರು, ತಂ-ಆಪರಶಿವನನನ್ನು, ಬಾಹ್ಯನಾನಾಪ್ರತಿಮಾಸು-ಅಂಗತ್ರಯದಿಂ ಬಾಹ್ಯವಾದ ನಾನಾ ಪೀಠಸ್ಥವಾದ ಪ್ರತಿಮೆಗಳಲ್ಲಿ, ಬಾಹ್ಯಕ್ರಿಯಾಭಿರೇವ-ಆಹ್ವಾನವಿಸರ್ಜನಾದಿಯಾದ ಬಾಹ್ಯಕ್ರಿಯೆಗಳಿಂದವೇ, ಮೇಣು ಜ್ಞಾನಬಾಹ್ಯವಾದ ಕ್ರಿಯಾಮಾತ್ರಗಳಿಂದವೇ, ಅಲ್ಪಧಿಯಃ-ಮಂದಬುದ್ಧಿಗಳು, ಯಜಂತಿಹಿ-ಪೂಜಿಸುತ್ತಿರ್ಪ್ಪರಲಾ! ॥೩೯॥

ಸೂ॥ ಅನಂತರದೊಳ್ ಆಭ್ಯಂತರ ಪೂಜಾಭಿಧಾನಕ್ಕೆ ಹೃದಯಕಮಲವೇ ಆಶ್ರಯಮಪ್ಪುದರಿಂ ಪೂರ್ವಮಧ್ಯೋರ್ಧ್ವವೆಂಬ ಹೃದಯಂಗಳೊಳು ಪೂರ್ವಹೃದಯಮಂ ಕಮಲರೂಪದಿಂ ಪೇಳುತ್ತ ದರೊಳ್ದಿವ್ಯಮೂರ್ತಿಯಂ ಚಿಂತಿಪುದೆಂದು ಪೇಳ್ದಪ-

ಶ್ಲೋ॥ ಹೃತ್ಪದ್ಮಂಶಿವಧರ್ಮಕಂದಸಹಿತಂ ಸುಜ್ಞಾನನಾಳಂತಥಾ ಸಿತ್ಯೈಶ್ವರ್ಯದಳಾಷ್ಟಕಂಶಶಿನಿಭಂವೈರಾಗ್ಯಸತ್ಕರ್ಣಿಕಂ।ಶ್ರೀರುದ್ರೇಶ್ವರಕೇಸರಾಂಚಿತಮಿದಂ ಸಂಚಿಂತ್ಯ ತನ್ಮಧ್ಯಮೇಸೂರ್ಯೇಂದ್ವಗ್ನಿ ಜ್ವಲವಹ್ನಿಮಂಡಲಗತಂ ಧ್ಯಾಯೇಚ್ಛಿವಂಚಿನ್ಮಯಂ॥

ಟೀ॥ ಶಿವಧರ್ಮಕಂದಸಹಿತಂ-ಆಗಮೋದಿತಂಗಳಾದ ಶಿವಾರ್ಚನಾದಿ ಸತ್ಕೃತ್ಯಂಗಳಿಂ ಜನಿತವಾದ ಪುಣ್ಯಪುಂಜವೆಂಬ ಕಂದದೊಡನೆಕೂಡಿದುಥ, ಸುಜ್ಞಾನನಾಳಂ-ಆಪುಣ್ಯಕಂದದಿಂ ಜನಿಸಿದ ನಿತ್ಯಾನಿತ್ಯವಿವೇಕವೆಂಬನಾಳವುಳ್ಳಂಥ, ತಥಾ-ಹಾಂಗೆ, ಸಿತ್ಯೈಶ್ವರ್ಯದಳಾಷ್ಟಕಂ-ಜ್ಞಾನಪ್ರಭಾವದಿಂ ಜನಿತವಾದಣಿಮಾದ್ಯಷ್ಟೈಶ್ವರ್ಯಂಗಳೇ ಎಂಟೆಸಳ್ಗಳಾಗುಳ್ಳಂಥ, ಶಶಿನಿಭಂ-ಶುದ್ಧಸಾತ್ವಿಕವಪ್ಪುದರಿಂ ಚಂದ್ರಂಗೆಸಮಾನವಾದಂಥ, ವೈರಾಗ್ಯಸತ್ಕರ್ಣಿಕಂ-ಇಹಪರವೈರಾಗ್ಯವೆಂಬ ಪರಮಕರ್ಣಿಕೆಯುಳ್ಳಂಥ, ಶ್ರೀರುದ್ರೇಶ್ವರಕೇಸರಾಂಚಿತಂ-ಅಷ್ಟದಿಕ್ಪತಿಗಳಾದ ರುದ್ರರೆಂಬಷ್ಟವಿದ್ಯೇಶ್ವರರೆಂಬ ಕೇಸರಂಗಳಿಂದೊಪ್ಪುವಂಥ, ಇದಂಹೃತ್ಪದ್ಮಂ-ಈಹೃದಯಕಮಲವನು, ಸಂಚಿಂತ್ಯ-ಚೆನ್ನಾಗಿ

ನೆದು, ತನ್ಮಧ್ಯಮೇ-ಆವೈರಾಗ್ಯಕರ್ಣಿಕಾಮಧ್ಯದಲ್ಲಿ, ಸೂರ್ಯೇಂದೂಜ್ಜ್ವಲವಹ್ನಿಮಂಡಲಗತಂ-ಅಕಾರ ಉಕಾರ ಮಕಾರವೆಂಬ ಸೂರ್ಯಚಂದ್ರಾಗ್ನಿಮಂಡಲತ್ರಯಮಧ್ಯವರ್ತಿಯಾದಂಥ, ಚಿನ್ಮಯಂ-ಜ್ಞಾನಸ್ವರೂಪನಾದಂಥ, ಶಿವಂ-ಪರಶಿವನನ್ನು, ಧ್ಯಾಯೇತ್-ಧ್ಯಾನಿಪುದು.

ತಾತ್ಪರ್ಯ— "ಅಧೋನಿಷ್ಟ್ಯಾ ವಿತಸ್ತ್ಯಾಂತು ನಾಭೇರುಪರಿತಿಷ್ಠತಿ । ಹೃದಯಂತದ್ವಿಜಾನೀಯಾ ದ್ವಿಶ್ವಸ್ಯಾಯತನಂಮಹತ್ ॥ ಹೃದಯಸ್ಯಾಸ್ಯಮಧ್ಯೇತು ಪುಂಡರೀಕಮಿವಸ್ಥಿತಂ । ಧರ್ಮಕಂದಸಮುದ್ಭೂತಂ ಜ್ಞಾನನಾಳಸುಶೋಭಿತಂ ॥ ಐಶ್ವರ್ಯಾಷ್ಟದಳೋಪೇತಂ ಪರವೈರಾಗ್ಯಕರ್ಣಿಕಂ ॥" ಎಂದುದಾಗಿ, ನಾಭಿಯಿಂ ಮೇಲೆ ದ್ವಾದಶಾಂಗುಲದಲ್ಲಿರ್ಪ ಮಹದ್ರೂಪಮಾದ ಹೃದಯದ ಮಧ್ಯದಲ್ಲಿ ತಮೋಗುಣಾತ್ಮಕಮಾದ ಅಧರ್ಮ ಅಜ್ಞಾನ ಅನೈಶ್ವರ್ಯಂಗಳೂ, ರಜೋಗುಣಾತ್ಮಕವಾದ ಅವೈರಾಗ್ಯಮೂ ದೀಕ್ಷಾಸಾಮರ್ಥ್ಯದಿಂ ನಾಶಮಾಗಲು, ಉಳಿದ ಸತ್ವಗುಣಾತ್ಮಕವಾದ ಧರ್ಮಕಂದದಿಂ ಸುಜ್ಞಾನನಾಳದಿಂ ದೈಶ್ವರ್ಯಾಷ್ಟದಳದಿಂ ಪರವೈರಾಗ್ಯಕರ್ಣಿಕೆಯಿಂ ರುದ್ರೇಶ್ವರಾದಿ ಕೇಸರಂಗಳಿಂ ಕೂಡಿದ ಏಷ್ಯಕಮಲದ ಕರ್ಣಿಕಾಮಧ್ಯದ ಮಂಡಲತ್ರಯದ ಪ್ರಣವಪೀಠದೊಳ್ಪರಮಾತ್ಮನಂ ಧ್ಯಾನಿಪುದೆಂಬುದಭಿಪ್ರಾಯಂ. "ಜ್ಞಾನಂ ಧರ್ಮೋದ್ಭವಂಸಾಕ್ಷಾತ್ ಜ್ಞಾನಾದ್ವೈರಾಗ್ಯಸಂಭವಃ । ವೈರಾಗ್ಯಾತ್ಪರವೈರಾಗ್ಯಂ ಪರಮಾರ್ಥಪ್ರಕಾಶಕಂ " ಎಂದುದಾಗಿ ॥೪೦॥

ಸೂ ॥ ಈ ಪ್ರಕಾರಮಾದ ಹೃದಯಕಮಲಕರ್ಣಿಕಾಮಧ್ಯದಲ್ಲಿ ಧ್ಯಾನಕ್ಕೆ ಯೋಗ್ಯಮಾದ ಶಿವನ ಸಗುಣ ನಿರ್ಗುಣ ಮೂರ್ತಿಗಳಂ ಕ್ರಮದಿಂ ಸಪ್ತಶ್ಲೋಕಂಗಳಿಂ ಪೇಳ್ದಪಂ—

ಶ್ಲೋ॥ ಪ್ರಸನ್ನವದನಂಶಾಂತಂ ದ್ವ್ಯಷ್ಟವರ್ಷೀಯಮುಜ್ಜ್ವಲಂ ।
ಅನೇಕಕೋಟಿಕಂದರ್ಪ ಲಾವಣ್ಯಸಮವಿಗ್ರಹಂ ॥೪೧॥

ಟೀ॥ ಪ್ರಸನ್ನವದನಂ-ಪ್ರಸನ್ನವಾದಮುಖವುಳ್ಳಂಥ, ಶಾಂತಂ-ರಾಗದ್ವೇಷರಹಿತನಾಗಿರ್ಪಂಥ, ದ್ವ್ಯಷ್ಟವರ್ಷೀಯಂ-ಹದಿನಾರುವರ್ಷದವನಾಗಿರ್ಪಂಥ, ಉಜ್ಜ್ವಲಂ-ಶೃಂಗಾರಮೂರ್ತಿಯಾಗಿರ್ಪಂಥ, ಅನೇಕಕೋಟಿಕಂದರ್ಪ ಲಾವಣ್ಯಸಮವಿಗ್ರಹಂ-ಅನೇಕಕೋಟಿಮನ್ಮಥರುಗಳ ಲಾವಣ್ಯಕ್ಕೆ ಸಮಾನವಾದ ಶರೀರವುಳ್ಳ ಥ ॥೪೧॥

ಶ್ಲೋ॥ ಚತುರ್ಭುಜಂ ಮೃಗೀಟಂಕವರದಾಭಯಧಾರಿಣಂ ।
ಚಂದ್ರಲೇಖಾಶಿರೋತ್ತಂಸಂ ಶರಚ್ಚಂದ್ರಾಯುತಪ್ರಭಂ ॥

ಟೀ॥ ಚತುರ್ಭುಜಂ--ನಾಲ್ಕುಭುಜವುಳ್ಳಂಥ, ಮೃಗೀಟಂಕವರದಭಯಧಾರಿಣಂ-ಮೃಗೀ-ಹುಲ್ಲೆ, ಟಂಕ-ಉನ್ನೊನೆಯುಕೈದು, ವರದ-ವರದಹಸ್ತ, ಅಭಯ ಅಭ

ಯುಹಸ್ತ ಇವುಗಳನ್ನು, ಧಾರಿಣಂ-ಧರಿಸಿರ್ಪನಂಥ, ಚಂದ್ರಲೇಖಾಶಿರೋತ್ತಂಸಂ-ಚಂದ್ರಕಲೆಯೇ ಶಿರಸ್ಸಿಗಾಭರಣವಾಗುಳ್ಳಂಥ. ಶರಚ್ಚಂದ್ರಾಯುತದ್ಯುತಿಂ-ಶರತ್ಕಾಲದ ಹತ್ತುಸಾವಿರಚಂದ್ರರ ಕಾಂತಿಯುಳ್ಳಂಥ. ॥೪೨॥

ಶ್ಲೋ॥ ದಿವ್ಯಾಂಬರಧರಂದೇವಂ ದಿವ್ಯಗಂಧಾನುಲೇಪನಂ ।
ದಿವ್ಯಾಭರಣಶೋಭಾಢ್ಯಂ ದಿವ್ಯಪುಷ್ಪೈರಲಂಕೃತಂ ॥೪೩॥

ಟೀ॥ ದಿವ್ಯಾಂಬರಧರಂ-ಮನೋಹರವಾದಂಬರವನ್ನು ಧರಿಸಿರ್ಪನಂಥ, ದೇವಂ-ಪ್ರಕಾಶರೂಪನಾಗಿರ್ಪನಂಥ, ದಿವ್ಯಗಂಧಾನುಲೇಪನಂ-ದಿವ್ಯಗಂಧಾನುಲೇಪನವುಳ್ಳಂಥ, ದಿವ್ಯಾಭರಣಶೋಭಾಢ್ಯಂ- ದಿವ್ಯಾಭರಣಗಳ ಕಾಂತಿಯಿಂ ಪೂಜ್ಯನಾಗಿರ್ಪನಂಥ, ದಿವ್ಯಪುಷ್ಪೈಃ-ದಿವ್ಯಕುಸುಮಗಳಿಂದ, ಅಲಂಕೃತಂ- ಅಲಂಕರಿಸಲ್ಪಟ್ಟಂಥ ॥೪೩॥

ಶ್ಲೋ॥ ತ್ರಿಣೇತ್ರಂತ್ರಿಗುಣಾಧಾರಂ ತ್ರಿಮಲಕ್ಷಯಕಾರಣಂ ।
ಸರ್ವಮಂಗಲಯಾದೇವ್ಯಾ ನಿಜವಾಮಾಂಗಶೋಭಿತಂ ॥೪೪॥

ಟೀ॥ ತ್ರಿಣೇತ್ರಂ-ತ್ರಿಲೋಚನನಾಗಿರ್ಪನಂಥ, ತ್ರಿಗುಣಾಧಾರಂ- ಶುದ್ಧಸತ್ವ ರಜಸ್ತಮೋಗುಣಂಗಳೇ ಆಧಾರವಾಗುಳ್ಳಂಥ, ತ್ರಿಮಲಕ್ಷಯಕಾರಣಂ-ಆಣವ ಕಾರ್ಮಿಕ ಮಾಯೀಯವೆಂಬ ಮಲತ್ರಯದ ನಾಶಕ್ಕೆ ಕರ್ತುವಾಗಿರ್ಪನಂಥ, ಸರ್ವಮಂಗಲಯಾ-ಅನುಗ್ರಹಕಾರಿಣಿಯಪ್ಪುದರಿಂ ಸಕಲಮಂಗಲಾತ್ಮಕಿಯಾಗಿರ್ಪನಂಥ, ದೇವ್ಯಾ- ಉಮಾದೇವಿಯಿಂದೆ, ನಿಜವಾಮಾಂಗಶೋಭಿತಂ-ತನ್ನ ವಾಮಭಾಗದ ಚೆಲುವಿಕೆಯನುಳ್ಳಂಥ

ಶ್ಲೋ॥ ಭಾಸ್ವತ್ಕಲ್ಪತರೋರ್ಮೂಲೇ ಫಲಪುಷ್ಪಸಮನ್ವಿತೇ ।
ವೇದಿಕಾಯಾಂಸುಖಾಸೀನಂ ನವರತ್ನಮಯಾಸನೇ ॥೪೫॥

ಟೀ॥ ಫಲಪುಷ್ಪಸಮನ್ವಿತಂ-ವಿಚಿತ್ರವಾದ ಫಲಂಗಳಿಂ ಪುಷ್ಪಂಗಳಿಂ ಕೂಡಲ್ಪಟ್ಟಂಥ, ಭಾಸ್ವತ್ಕಲ್ಪತರೋಃಮೂಲೇ- ಬಪ್ಪುತ್ತಿರ್ಪ ಕಲ್ಪವೃಕ್ಷದಡಿಯಲ್ಲಿರುವ, ವೇದಿಕಾಯಾಂ-ವೇದಿಕೆಯಲ್ಲಿಯು, ನವರತ್ನಮಯಾಸನೇ- ವಜ್ರವೈಡೂರ್ಯಾದಿ ನವರತ್ನಮಯಸಿಂಹಾಸನದಲ್ಲಿ, ಸುಖಾಸೀನಂ ಆನಂದಸ್ವರೂಪನಾಗಿ ಕುಳ್ಳಿರ್ಪನಂಥ, (ಸಗುಣರೂಪನಾದ ಪಂಚಬ್ರಹ್ಮ ಮಂತ್ರಾತ್ಮಕ ಶಿವನಂ ಹೃತ್ಕಮಲದಲ್ಲಿ ಪೂಜಿಪುದೆಂದು ಮುಂದಣ ಕ್ರಿಯೆಯೊಡನೆ ಸಂಬಂಧಂ.) ॥೪೫॥

ಶ್ಲೋ॥ ಅದ್ವೈತಮಚ್ಯುತಂವಿಷ್ಣುಂ ನಿತ್ಯಂನಿರ್ವಾಣಗೋಚರಂ ।
ಅಚಿಂತ್ಯಮಜಮವ್ಯಕ್ತ ಮಾದಿಮಧ್ಯಾಂತವರ್ಜಿತಂ ॥೪೬॥

ಟೀ॥ ಅದ್ವೈತಂ-ದ್ವೈತವಿಲ್ಲದೆಯಿರ್ಪನಂಥ, (ಅನಾದಿಮುಕ್ತನಪತನದಿಂದೆ ಶಾಸ್ತ್ರವಾದಿಗಳ್ಪೇಳ್ವಂತೆ ತನ್ನಲ್ಲಿಯೇ ಜೀವಪರನಾದಿ ದ್ವೈತಭ್ರಾಂತಿಯಿಲ್ಲದಿರ್ಪನಂಥ

ತನೆಂಬುದರ್ಥಂ.) ಅಚ್ಯುತಂ-ನಿತ್ಯನಿರ್ಮಲನಪ್ಪುದರಿಂ ಜನನಮರಣಾದಿಯಾದ ಕೇಡಿಲ್ಲದೆಯಿರ್ಪಂಥ, ವಿಷ್ಣುಂ-ವ್ಯಾಪಕನಾಗಿರ್ಪಂಥ, (ಮಾಯಾರೂಪನಲ್ಲವೆಂಬುದರ್ಥಂ.) ನಿತ್ಯಂ-ಸತತೋದಿತನಾಗಿರ್ಪಂಥ, (ಬೌದ್ಧರ್ಪೇಳ್ವಂತೆ ಕ್ಷಣಿಕನಲ್ಲವೆಂಬುದರ್ಥಂ.) ನಿರ್ವಾಣಗೋಚರಂ-ಸಕಲತತ್ವವಿಲಕ್ಷಣತಾರೂಪವಾದ ಮುಕ್ತಿಗೆ ಗೋಚರಿಸುವಂಥ, ಅಚಿಂತ್ಯಂ-ಸಗುಣಧ್ಯಾನಕ್ಕೆ ಗೋಚರಸಲ್ಲದೆಯಿರ್ಪಂಥ, ಅಜಾ- ಜನ್ಮರಹಿತನಾಗಿರ್ಪಂಥ, ಅವ್ಯಕ್ತಂ-ನಿಷ್ಕಲಸ್ವರೂಪನಾಗಿರ್ಪಂಥ, ಆದಿಮಧ್ಯಾಂತವರ್ಜಿತಂ-ಸೃಷ್ಟಿಸ್ಥಿತಿ ಸಂಹಾರಂಗಳಿಲ್ಲದೆಯಿರ್ಪಂಥ. ||೪೬||

ಶ್ಲೋ|| ಪರಂಶಿವಂಹೃದಿಧ್ಯಾತ್ವಾ ನಿಶ್ಚಲೀಭೂತಮಾನಸಃ ।
ಯಜೇದಾಭ್ಯಂತರದ್ರವ್ಯೈ ರವಧಾನೇನ ತದ್ಯಥಾ ||೪೭||

ಟೀ|| ಪರಂ-ನಿರಾಲಂಬನಹತನದಿಂ ಶ್ರೇಷ್ಠನಾಗಿರ್ಪಂಥ, ಶಿವಂ-ಶಿವನನು, ಹೃದಿ-ಪೂರ್ವೋಕ್ತವಾದ ಹೃದಯದಲ್ಲಿ, ನಿಶ್ಚಲೀಭೂತಮಾನಸಃ- ಮುದ್ರೆಗಳಿಂನಿಶ್ಚಲವಾದ ಮನಸ್ಸುಳ್ಳಾತನಾಗಿ, ಧ್ಯಾತ್ವಾ-ಧ್ಯಾನಿಸಿ, ಆಭ್ಯಂತರದ್ರವ್ಯೈಃ-ಮುಂದೆಪೇಳ್ವ ಶಮೆ ಮುಂತಾದಂತರಂಗದ್ರವ್ಯಂಗಳಿಂ, ಅವಧಾನೇನ-ಏಕಾಗ್ರತೆಯಿಂದೆ, ಯಜೇತ್-ಪೂಜಿಪುದು. ತತ್-ಆಧ್ಯಾನಪೂಜಾವಿಧಾನವು, ಯಥಾ-ಹೇಂಗೆ? (ಇದು ಮುಂದಣಪೂಜಾವಿಧಾನದ ಪ್ರಶ್ನೆ.) ||೪೭||

ಸೂ|| " ಭ್ರೂತಕಾಶಿವ್ಯವಸ್ಮೂರ್ತೇಸ್ಸಚ್ಚಿದಾನಂದಲಕ್ಷಣಂ " ಎಂದುದಾಗಿ, ಈ ಪ್ರಕಾರದಿಂ ಬುದ್ಧಿದ್ವಾರದ ಆತ್ಮಶಕ್ತಿಯು ಬಿಂದುದ್ವಾರದ ಶಿವಶಕ್ತಿಯು ಸಂಪುಟದಿಂ ಹೃದಯಮಧ್ಯದೊಳ್ಮಂತ್ರಮೂರ್ತಿಯಾದ ಶಿವಂಗೆ ಸ್ನಾನಾದಿ ಪೂಜಾವಿಧಾನಮಂ ಶ್ಲೋಕತ್ರಯದಿಂ ಪೇಳ್ದಪಂ.—

ಶ್ಲೋ|| ಶಮಾಂಬುಪರಿಷೇಚನಂ ಸಕಲಪೂರ್ಣಭಾವಾಂಬರಂ ತ್ರಿಶಕ್ತಿಗುಣಸಂಯುತಂ ವಿಹಿತಯಜ್ಞಸೂತ್ರಂತಥಾ । ಸ್ವಸಂವಿದನುಲೇಪನಂ ಸಮಧಿಕಾನುಕಂಪಾಕ್ಷತಾ ಶಿವಾಯವಿನಿವೇದಯೇತ್ಪ್ರಕಟಭಕ್ತಿಪುಷ್ಪಾಣಿಚ ||೪೮||

ಟೀ|| ಶಮಾಂಬುಪರಿಷೇಚನಂ- ಶಾಂತಿಜಲದಿಂಸ್ನಾನವನು, ಸಕಲಪೂರ್ಣಭಾವಾಂಬರಂ-ಆವರಣವಿಲ್ಲದಿಹುದರಿಂನಿರ್ಮಲವಾದ ವಿಶ್ವವ್ಯಾಪಕತೆಯೆಂಬ ದುಕೂಲವನು, ತ್ರಿಶಕ್ತಿಗುಣಸಂಯುತಂ ವಿಹಿತಯಜ್ಞಸೂತ್ರಂ-ಇಚ್ಛಾಜ್ಞಾನಕ್ರಿಯಾಶಕ್ತಿಗಳೆಂಬ ಸೂತ್ರಗಳಿಂದೆ ಎಲ್ಲಾಆಗಮಂಗಳಲ್ಲಿ ವಿಧಿಸಲ್ಪಟ್ಟ ಯಜ್ಞಸೂತ್ರವನು, ತಥಾ-ಹಾಂಗೆ, ಸ್ವಸಂವಿದನುಲೇಪನಂ- ತನ್ನಸಮ್ಯಗ್ಜ್ಞಾನವೆಂಬ ಗಂಧಾನುಲೇಪನವನು, ಸಮಧಿಕಾನುಕಂಪಾಕ್ಷತಾ- ಅತಿವಿಶೇಷವಾದ ಭೂತದಯೆಯೆಂಬಅಕ್ಷತೆಗಳನು, ಪ್ರಕಟಭಕ್ತಿಪು

ಷ್ಪಾಣಿಚ-ವ್ಯಕ್ತವಾದ ಭಕ್ತಿಕುಸುಮಂಗಳನ್, ಶಿವಾಯ-ಶಿವಂಗೋಸ್ಕರ, ವಿನಿ
ಯೋತ್-ಸಮರ್ಪಿಸುವುದು. ||೪

ಶ್ಲೋ|| ಧೂಪಮಾಂತರಚತುಷ್ಟಯೇನ ತದ್ದೀಪಮಿಂದ್ರಿಯಗುಣೋ
ತ್ಕರೇಣತು । ಕಲ್ಪಯೇಚ್ಚ ಸುಖದುಃಖವರ್ಜಿತಾ ಜೀವ
ಪಮುಪಹಾರಮಾಂತರೇ ||೪

ಟೀ|| ಆಂತರಚತುಷ್ಟಯೇನ-ಮನಸ್ಸು ಬುದ್ಧಿ ಅಹಂಕಾರ ಪರಮಾತ್ಮ
ಣವಾದವಿದ್ಯೆಯೆಂಬ ನಾಲ್ಕು ಅಂತಃಕರಣಗಳಿಂದೆ, ಧೂಪಂ-ಧೂಪವನು, ಇಂದ್ರಿ
ಗುಣೋತ್ಕರೇಣತು-ಇಂದ್ರಿಯ-ಸರ್ವೇಂದ್ರಿಯಂಗಳಿಗೆ ಮುಖ್ಯವಾದ ನೇತ್ರೇಂದ್ರಿಯ
ಗುಣ-ಮುದ್ರಾಭೇದದಿಂತೋರುವ ಸತ್ವರಜಸ್ತಮೋಗುಣಾತ್ಮಕಂಗಳಾದ ವಿಚಿತ್ರ
ಸ್ಯಯಂಗಳ, ಉತ್ಕರೇಣತು-ಅತಿಶಯದಿಂದವೆ, ತದ್ದೀಪಂ-ಆದೀಪವನು, ಸುಖ
ಖವರ್ಜಿತಂ-ಸುಖದುಃಖರಹಿತವಾಗಿರ್ಪಂಥ, ಜೀವರೂಪಂ-ಆತ್ಮಸ್ವರೂಪವನು,
ಪಹಾರಂ-ನೈವೇದ್ಯವನಾಗಿ, ಆಂತರೇ-ಅಂತರಂಗದಲ್ಲಿ, ಕಲ್ಪಯೇಚ್ಚ-ಕಲ್ಪಿಸ. ವುದು

ಶ್ಲೋ|| ರಜಸ್ತಮಸ್ಸತ್ವಗುಣತ್ರಯಾಖ್ಯ ತಾಂಬೂಲಕಂ ಪ್ರಾಣನ
ಸ್ಕೃತಿಂಚ । ಇತ್ಯೇವಮಾಭ್ಯಂತರಮುಖ್ಯಪೂಜಾದ್ರವ್ಯಾ
ಸಂಪಾದಯ ಶಂಕರಾಯ ||೪

ಟೀ|| ರಜಸ್ತಮಸ್ಸತ್ವಗುಣತ್ರಯಾಖ್ಯತಾಂಬೂಲಕಂ- ಗುಣತ್ರಯವೆಂಬತಾಂ
ಬೂಲವನು, ಪ್ರಾಣನಮಸ್ಕೃತಿಂಚ-ಹಂಸರೂಪದಲ್ಲಿ ಚರಿಸುವ ಪ್ರಾಣವುಂ ಸೋಹ
ಭಾವದಿಂ ಉಸಿರಿಸುವ ನಮಸ್ಕಾರವನು, ಇತಿ-ಈಪ್ರಕಾರವಾದ, ಆಭ್ಯಂತರಮುಖ್ಯ
ಪೂಜಾದ್ರವ್ಯಾಣಿ-ಅಂತರಂಗಂಗಳಾದ ಮುಖ್ಯವಾದ ಪೂಜಾದ್ರವ್ಯಂಗಳನು, ಏವಂ-ಈ
ಪ್ರಕಾರದಿಂದೆ, ಶಂಕರಾಯ- ಸುಖಂಕರನಾದ ಶಿವಂಗೋಸ್ಕರ, ಸಂಪಾದಯ- ಸಂ
ಪಾದಿಸು ||೫೦

ಸೂ|| ಈಪ್ರಕಾರವಾದಂತಃಪೂಜಾವಿಧಾನಕ್ಕೆ ಅಸಮರ್ಥನಾದ ಶಿಷ್ಯಂಗೆ ಪ್ರ
ತ್ಯಕ್ಷವಾದ ರಾಜನ ದೃಷ್ಟಾಂತದಿಂ ಪೂಜಿಸೆಂದು ಪೇಳ್ದಪಂ —

ಶ್ಲೋ|| ಅಥವಾ ವಾಹನಾದ್ಯೈಸ್ತು ಮುಪಚಾರೈಶ್ಚ ರಾಜವತ್ ।
ಪೂಜಯ ತ್ವಂ ಶಿವಂ ಭಕ್ತ್ಯಾ ಪರಮಾತ್ಮಾನಮಂತರೇ ||೫೧||

ಟೀ|| ಅಥವಾ-ಹಾಗಲ್ಲದಿರ್ದೊಡೆ, ಪರಮಾತ್ಮಾನಂ-ಅನಾದಿಮುಕ್ತನಹತನೂ
ಪರಮಾತ್ಮರೂಪನಾಗಿರ್ಪಂಥ, ತಂ-ಆ ಪೂರ್ವೋಕ್ತಸ್ವರೂಪವುಳ್ಳಂಥ, ಶಿವಂ-ಶಿವನನು
ರಾಜವತ್-ಪ್ರತ್ಯಕ್ಷನಾದ ರಾಜನೋಪಾದಿಯಲ್ಲಿ, ವಾಹನಾದ್ಯೈಃ-ವಾಹನಛತ್ರಚಾಮ

ಕಂಗಳು ಮೊದಲಾಗುಳ್ಳಂಥ, (ಮೇಣು, ಆವಾಹನಾದ್ಯೈಃ-ಆವಾಹನ ಸ್ಥಾಪನ ಮೊದಲಾಗಿರ್ಪಂಥ,) ಉಪಚಾರೈಃ-ಉಪಚಾರಂಗಳಿಂದೆ, ಅಂತರೇ-ಹೃದಯಮಧ್ಯದಲ್ಲಿ, ಭಕ್ತ್ಯಾ-ಭಕ್ತಿಯಿಂದೆ, ಪೂಜಯಸ್ವ-ಪೂಜಿಸು. ||೩೧||

ಸೂ|| ಈಪ್ರಕಾರವಾದಂತಃಪೂಜಾವಿಧಾನದಿಂ ಮಹಾಫಲಂಗಳಪ್ಪುವಾಗಿ, ಈ ಪೂಜೆಯನೇ ಮಾಳ್ಪುದೆಂದು ಶ್ಲೋಕದ್ವಯದಿಂ ಪೇಳ್ದಪಂ—

ಶ್ಲೋ|| ಅತಏವ ಸದಾ ಪೂಜಾ ಮಿಮಾಮಾಭ್ಯಂತರಾಂ ಕುರು।
ಸಮಸ್ತಪಾಪದಳನೀಂ ಸರ್ವದುಃಖವಿನಾಶಿನೀಂ ||೫೩||
ಶಿವಭಕ್ತಿಪ್ರದಾಂ ಸಾಕ್ಷಾ ನ್ಮನೋನೈರ್ಮಲ್ಯಕಾರಿಣೀಂ ।
ಸರ್ವೈಶ್ವರ್ಯಕರೀಂ ಸಮ್ಯಗ್ಯೋಗಜ್ಞಾನಪ್ರದಾಯಿನೀಂ||೫೪||

ಟೀ || ಅತಏವ- ಇದುಕಾರಣವಾಗಿಯೇ, ಸಮಸ್ತಪಾಪದಳನೀಂ-ಸಕಲಪಾಪಮಂ ಕ್ಷಯಿಸುವಂಥ, ಸರ್ವದುಃಖವಿನಾಶಿನೀಂ-ಸಮಸ್ತದುಃಖಮಂ ಕೆಡಿಸುವಂಥ, ಶಿವಭಕ್ತಿಪ್ರದಾಂ-ಶಿವಭಕ್ತಿಯಂ ವಿಶೇಷಮಾಗಿ ಕೊಡುವಂಥ, ಸಾಕ್ಷಾತ್-ಪ್ರತ್ಯಕ್ಷಮಾಗಿ, ಮನೋನೈರ್ಮಲ್ಯಕಾರಿಣೀಂ-ಮನಸ್ಸಿನ ನಿರ್ಮಲತೆಗೆ ಕಾರಣವಾಗಿರ್ಪಂಥ, ಸರ್ವೈಶ್ವರ್ಯಕರೀಂ-ಸಮಸ್ತೈಶ್ವರ್ಯಮಂ ಮಾಳ್ಪಂಥ, ಸಮ್ಯಕ್-ಲೇಸಾಗಿ, ಯೋಗಜ್ಞಾನಪ್ರದಾಯಿನೀಂ-ಶಿವಯೋಗಜ್ಞಾನಮಂ ಕೊಡುವಂಥ, ಇಮಾಂ-ಈ ಪೂರ್ವೋಕ್ತವಾಗಿರ್ಪಂಥ, ಆಭ್ಯಂತರಾಂ-ಅಭ್ಯಂತರವಾದ ಹೃದಯಸಂಬಂಧಿನಿಯಾಗಿರ್ಪಂಥ, ಪೂಜಾಂ-ಪೂಜೆಯನು, ಸದಾ-ಅನವರತವೂ, ಕುರು-ಮಾಡು. ||೫೪||

ಇತಿಶ್ರೀಮದ್ವೇದವೇದಾಂತಾಗಮಪುರಾಣಸ್ಮೃತೀತಿಹಾಸಪ್ರತಿಪಾದಿತ
ಶ್ರೀವೀರಶೈವಮಾರ್ಗಸ್ಥಾಪನಾಚಾರ್ಯ ಶ್ರೀಬಸವಾರಾಧ್ಯವಿರಚಿತ
ಕರ್ನಾಟಕಟೀಕಾವಿರಾಜಿತಾಯಾಂ ಶ್ರೀಚೆನ್ನಸದಾಶಿವ
ಯೋಗೀಶ್ವರವಿರಚಿತಾಯಾಂ ಶಿವಯೋಗಪ್ರದೀಪಿಕಾ
ಯಾಂ ಯೋಗಶಾಸ್ತ್ರೇ ಪ್ರಥಮಃ ಪಟಲಃ.

ಶ್ರೀಗುರುಭ್ಯೋನಮಃ.

## (ಅಥ ದ್ವಿತೀಯಃ ಪಟಲಃ)



ಸೂ|| ಈಪ್ರಕಾರದಿಂ ಹಠಯೋಗಾಭ್ಯಾಸದಿಂದೆ ಮುನ್ನವೇ ಮಾಳ್ಪ ಅಂತಃಪೂಜಾವಿಧಾನದೊಳ್ ಮನಕೆ ಚಂಚಲತೆಯುಂಟಾಗದಹಾಗೆ ಮನದ ಚಂಚಲತ್ವಮಂ ನಿಲ್ಲಿಸುವ ಯೋಗಸಾಧನವಾದ ಬೇರೊಂದು ಪೂಜಾವಿಧಾನಮಂ ಪೇಳ್ವೆನೆಂದೀದ್ವಿತೀಯಪಟಲಾದಿಯೊಳಾಚಾರ್ಯಂ ಶಿಷ್ಯಂಗೆ ಪೇಳ್ದಪಂ:—

ಶ್ಲೋ॥ ಅಥತೇಸಂಪ್ರವಕ್ಷ್ಯಾಮಿ ಶಿವಪೂಜಾವಿಧಿಂ ಬುಧೈಃ ।
ಪುನಃಪ್ರಕಾರಮಾಖ್ಯಾತಂಯೋಗಮಾರ್ಗೈಕಗೋಚರಂ ॥

ಟೀ॥ ಅಥ-ಪೂರ್ವಪಟಲಾನಂತರದಲ್ಲಿ, ಬುಧೈಃ-ಹಠಯೋಗಸಿದ್ಧರಾದವಿವೇಕಿ
ಗಳಿಂದೆ, ಪುನಃಪ್ರಕಾರಂ-ಮರಳಿ ಭಿನ್ನಪ್ರಕಾರವಾಗಿ, ಆಖ್ಯಾತಂ-ಪೇಳಲ್ಪಟ್ಟಂಥ, ಯೋ
ಗಮಾರ್ಗೈಕಗೋಚರಂ- ಹಠಯೋಗಮಾರ್ಗವೊಂದಕ್ಕೆ ಗೋಚರಿಸುವಂಥ, ಶಿವಪೂ
ಜಾವಿಧಿಂ-ಶಿವಪೂಜಾವಿಧಾನವನು, ತೇ-ನಿನಗೆ, ಸಂಪ್ರವಕ್ಷ್ಯಾಮಿ-ಚೆನ್ನಾಗಿ ಪೇಳ್ವೆನು
ಶೃಣು-ಕೇಳು ಎಂದಧ್ಯಾಹರಣವು.

ಸೂ॥ "ಶರೀರಮಾದ್ಯಂಖಲುಧರ್ಮಸಾಧನಂ" ಎಂದುದಾಗಿ, ಮುಂದೆ ಶಿವ
ಜ್ಞಾನಯೋಗಂಗಳ ಸಿದ್ಧ್ಯರ್ಥವಾಗಿ ಯಮಾದ್ಯಷ್ಟಾಂಗದಿಂ ಶರೀರರಕ್ಷಣಮಂ ಮಾಳ್ಪು
ದೆಂದು ಪೇಳ್ದಪಂ:—

ಶ್ಲೋ॥ ಯೋಗಾತ್ಸಂಜಾಯತೇಜ್ಞಾನಂ ಜ್ಞಾನಾದ್ಯೋಗಃಪ್ರವರ್ತತೇ
ದ್ವಯೋಸ್ಸಂಸಿದ್ಧಯೇಭೂಮೌಶರೀರಂರಕ್ಷಯೇದ್ಬುಧಃ॥

ಟೀ॥ ಯೋಗಾತ್-ಹಠಯೋಗದದೆಸೆಯಿಂದೆ, ಜ್ಞಾನಂ ಅರಿವು, ಸಂಜಾಯ
ತೇ-ತಮೋಗುಣಾದಿರೂಪವಾದ ಶ್ಲೇಷ್ಮಾದಿದೋಷಂಗಳ ನಾಶದಿಂ ಚೆನ್ನಾಗಿ ಅಭಿವ್ಯಕ್ತಿ
ಯನೆಯ್ದುತ್ತಿಹುದು. ಜ್ಞಾನಾತ್-ಆ ಅರಿವಿನ ದೆಸೆಯಿಂದೆ, ಯೋಗಃ ಶಿವತ್ವಾಭಿವ್ಯಕ್ತಿ
ರೂಪವಾದ ಯೋಗವು, ಪ್ರವರ್ತತೇ-ಪ್ರವರ್ತಿಸುತ್ತಿರ್ಪುದು, ದ್ವಯೋಃ-ಆಜ್ಞಾನಯೋ
ಗಂಗಳ, ಸಂಸಿದ್ಧಯೇ-ಸಮ್ಯಕ್ಕಾದಸಿದ್ಧಿಗೋಸ್ಕರ, ಭೂಮೌ-ಭೂಲೋಕದಲ್ಲಿ, ಶರೀ
ರಂ-ದೇಹವನು, ಬುಧಃ-ವಿವೇಕಿಯಾದ ಪುರುಷನು, ರಕ್ಷಯೇತ್-ರಕ್ಷಿಪುದು.

ಸೂ॥ ಆಶರೀರರಕ್ಷಣಂ ಶ್ಲೇಷ್ಮಾದಿದೋಷನಾಶದಿಂದಪ್ಪುದಾದೋಷನಾಶವು ಹಠ
ಯೋಗದಿಂದಪ್ಪುದಾಗಿ, ಮೊದಲಲ್ಲಿ ಹಠಯೋಗಮಂ ಸಾಧಿಪುದೆಂದು ಪೇಳ್ದಪಂ:—

ಶ್ಲೋ॥ ಶರೀರಂಕಫನಾಶೇನ ಸುಸ್ಥಿರಂ ಯಾತಿ ನಿಶ್ಚಿತಂ ।
ತತ್ಕಫಂ ಹಠಯೋಗೇನ ವಿನಶ್ಯತಿ ಶರೀರಿಣಾಂ ॥

ಟೀ॥ ಶರೀರಂ-ದೇಹವು, ಕಫನಾಶೇನ-ಶ್ಲೇಷ್ಮನಾಶದಿಂದೆ, ಸುಸ್ಥಿರಂ-ಚೆನ್ನಾ
ಸ್ಥಿರತೆಯನು, ಯಾತಿ-ಎಯ್ದುತ್ತಿಹುದೆಂದು, ನಿಶ್ಚಿತಂ- ನಿಶ್ಚೈಸಲ್ಪಟ್ಟಿತು. ಶರೀರಿ
ಣಾಂ-ದೇಹಿಗಳ, ತತ್ಕಫಂ-ಆಶ್ಲೇಷ್ಮದೋಷವು, ಹಠಯೋಗೇನ-ಧೌತಿ ವಸ್ತಿ ನೇತಿ
ತ್ರೋಟಕ ನೌಳಿ ಕಪಾಲಭಾತಿಯೆಂಬ ಷಟ್ಕರ್ಮ ಮುಂತಾದ ವೈಕೃತಪ್ರಾಣಾಯಾಮ
ದಿಂದೆ, ವಿನಶ್ಯತಿ-ಕೆಡುತ್ತಿರ್ಪುದು.

ಸೂ॥ ಮುಮುಕ್ಷುಜನಕ್ಕೆ ದೇಹಾಪೇಕ್ಷೆಯುಂ ದೇಹರಕ್ಷಣಾರ್ಥವಾಗಿ ಹಠ
ಯೋಗಾಪೇಕ್ಷೆಯುಮಿಲ್ಲದೊಡಂ ಪರಂಪರೆಯಿಂ ಶಿವತ್ವಾಭಿವ್ಯಕ್ತಿಗೆ ಸಾಧನವಪ್ಪುದ
ಪ್ರಥಮದಲ್ಲಿ ಹಠಯೋಗಾಭ್ಯಾಸಮಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ|| ಶಿವಯೋಗಸ್ಸಾಧಕಾನಾಂಸಾಧ್ಯಸ್ತತ್ಸಾಧನಂಹಠಃ ।
ತಸ್ಮಾದಾದೌಪ್ರಯೋಕ್ತವ್ಯಂಹಠಯೋಗಮಿದಂಶೃಣು ||೪||

ಟೀ||ಸಾಧಕಾನಾಂ-ಮುಕ್ತಿಸಾಧಕರ್ಗೆ, ಶಿವಯೋಗಃ-ಶಿವಯೋಗವೇ, ಸಾಧ್ಯಃ-ಸಾಧಿಸಲ್ತಕ್ಕುದು. ತತ್ಸಾಧನಂ-ಆ ಶಿವಯೋಗಕ್ಕೆ ಸಾಧನವಾಗಿರ್ಪಂತಹುದು, ಹಠಃ-ಹಠಯೋಗವು, ತಸ್ಮಾತ್-ಅದುಕಾರಣದಿಂದೆ, ಆದೌ-ಮೊದಲಲ್ಲಿ, ಪ್ರಯೋಕ್ತವ್ಯಂ-ಸಾಧಿಸಲು ಯೋಗ್ಯವಾದ, ಇದಂ-ಈಮುಂದೆಪೇಳ್ವ, ಹಠಯೋಗಂ-ಹಠಯೋಗವನು ಶೃಣು-ಕೇಳು. ||೪||

ಸೂ || ಈಮುಂದೆಪೇಳ್ವ ಹಠಯೋಗದಿಂ ಬಾಹ್ಯಾಭ್ಯಂತರದೊಳೀಶ್ವರಪೂಜೆಯಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ|| ಅಂಗಾನ್ಯಷ್ಟೌಹಠಸ್ಯಾಪಿಬಾಹ್ಯಾನ್ಯಭ್ಯಂತರಾಣಿಚ ।
ಯಮಾದಿಭಿರತೋಽಷ್ಟಾಂಗೈರ್ದೇವಪೂಜಾಂಸಮಾಚರೇತ್||

ಟೀ|| ಹಠಸ್ಯಾಪಿ-ಹಠಯೋಗಕ್ಕಾದೊಡೆ, ಬಾಹ್ಯಾನ್ಯಪಿ-ಯಮನಿಯಮ ಆಸನಪ್ರಾಣಾಯಾಮವೆಂಬ ಬಾಹ್ಯಂಗಳಾಗಿರ್ಪಂಥ, ಅಭ್ಯಂತರಾಣಿಚ-ಪ್ರತ್ಯಾಹಾರಧ್ಯಾನಧಾರಣಸಮಾಧಿಗಳೆಂಬಂತರಂಗಗಳಾಗಿರ್ಪಂಥ, ಅಂಗಾನಿ-ಅಂಗಂಗಳು, ಅಷ್ಟೌ-ಎಂಟು. ಅತಃ-ಇದುಕಾರಣವಾಗಿ, ಯಮಾದಿಭಿಃ-ಯಮ ಮೊದಲಾಗಿರ್ಪಂಥ, ಅಷ್ಟಾಂಗೈಃ-ಎಂಟುಯೋಗಂಗಳಿಂದೆ, ದೇವಪೂಜಾಂ-ಶಿವಪೂಜೆಯನು, ಸಮಾಚರೇತ್-ಆಚರಿಸುವುದು. ||೫||

ಸೂ|| ಶುದ್ಧನಲ್ಲದಾತಂಗೆ ಶಿವಪೂಜೆ ಘಟಿಸದಾಗಿ, ಅಂತಶ್ಶುದ್ಧಿ ಮುಂತಾದ ಪೂಜಾವಿಧಾನಮಂ ಪೇಳ್ದಪಂ:—

ಶ್ಲೋ||ಯಮನಿಯಮಗುಣೈಶ್ಚ ಸ್ವಾತ್ಮಶುದ್ಧಿಂ ವಿಧಾಯ ಸ್ವವಶವಿ
ವಿಧಪೀಠೈರೇವಭೂತ್ವಾಸ್ಥಿರಾತ್ಮಾ । ಅಸುನಿಯಮಜಲೇನ
ಸ್ನಾಪಯೇದ್ದಿವ್ಯಲಿಂಗಂ ಪ್ರಕಟಿತಚತುರಂಗಂ ಬಾಹ್ಯಮೇ
ತದ್ವಿಧಾನಂ ||೬||

ಟೀ|| ಯಮನಿಯಮಗುಣೈಶ್ಚ-ಮುಂದೆಪೇಳ್ವ ಯಮನಿಯಮಂಗಳೆಂಬ ವಿಂಶತಿಗುಣಂಗಳಿಂದೆ, ಸ್ವಾತ್ಮಶುದ್ಧಿಂ-ನಿಜಸ್ವರೂಪಶುದ್ಧಿಯನು, ವಿಧಾಯ-ಮಾಡಿ, ಸ್ವವಶವಿವಿಧಪೀಠೈರೇವ-ತನಗೆ ವಶವಾದ ನಾನಾಪ್ರಕಾರವಾದ ಪದ್ಮಾಸನಾದಿ ಪೀಠಗಳಿಂದವೇ, ಸ್ಥಿರಾತ್ಮಾ-ಸ್ಥಿರವಾದ ದೇಹಸ್ವರೂಪವುಳ್ಳಾತನು, ಭೂತ್ವಾ-ಆಗಿ, ಅಸುನಿಯಮಜಲೇನ-ಮುಂದೆಪೇಳ್ವ ಪ್ರಾಣಾಯಾಮವೆಂಬುದಕದಿಂದವೆ, ದಿವ್ಯಲಿಂಗಂ-ಜ್ಯೋತಿರ್ಲಿಂಗವನು, ಸ್ನಾಪಯೇತ್-ಸ್ನಾನವಂಮಾಡಿಪುದು. ಏತತ್ಪ್ರಕಟಿತಚತುರಂಗಂ.

ಈವ್ಯಕ್ತವಾದ ನಾಲ್ಕು ಯೋಗಾಂಗವು, ಬಾಹ್ಯಂ-ಬಾಹ್ಯವಾಗಿರ್ಪಂಥ, ವಿಧಾನಂ-ಪೂಜಾವಿಧಾನವೆನಿಪುದೆಂಬುದರ್ಥಂ. ||

ಸೂ|| ಸ್ನಾನಾನಂತರದಲ್ಲಿ ಶಿವಂಗೆ ಪ್ರತ್ಯಾಹಾರಾದಿಗಳಿಂ ಗಂಧಾದಿಗಳಂ ಸಂಕಲ್ಪಿಸುವುದೇ ಅಂತಃಪೂಜಾವಿಧಾನವೆಂದು ಪೇಳ್ದಪಂ —

ಶ್ಲೋ|| ಶಂಭೋಃ ರಥೇಂದ್ರಿಯನಿವರ್ತನಮೇವ ಗಂಧೋ ಧ್ಯಾನಂ ಪ್ರಸೂನನಿಚಯೋ ದೃಢಧಾರಣಾಸಾ । ಧೂಪಸ್ಸಮಾಧಿ ರಥಶುದ್ಧಮಹೋಪಹಾರ ಮಭ್ಯಂತರಾಖ್ಯಚತುರಂಗವಿಧಾನಮೇತತ್ ||

ಟೀ|| ಅಥ-ಅನಂತರದಲ್ಲಿ, ಶಂಭೋಃ-ಶಿವಂಗೆ, ಇಂದ್ರಿಯನಿವರ್ತನಮೇವ-ಶ್ರೋತ್ರಾದೀಂದ್ರಿಯಂಗಳ ವಿಷಯವೈಮುಖ್ಯಮಂ ಮಾಳ್ಪ ಪ್ರತ್ಯಾಹಾರವೇ, ಗಂಧಃ-ಗಂಧಾನುಲೇಪನವು, ಧ್ಯಾನಂ-ಆ ಇಂದ್ರಿಯ ನಿವರ್ತನದಿಂದಂತರ್ಮುಖವಾದ ಮನದಿಂ ಶಿವಧ್ಯಾನವೇ, ಪ್ರಸೂನನಿಚಯಃ-ಪುಷ್ಪಸಮೂಹವು, ಸಾ ದೃಢಧಾರಣಾ-ಆಮುಂಪೇಳ್ದ ದೃಢವಾದ ಧಾರಣೆಯೇ, ಧೂಪಃ-ಧೂಪವು, ಅಥ-ಅನಂತರದಲ್ಲಿ, ಸಮಾಧಿಃ-ಜ್ಞಾತಾಜ್ಞಾತರೂಪವಾದಸಮಾಧಿಯೇ, ಶುದ್ಧಮಹೋಪಹಾರಃ- ಶುದ್ಧವಾದಮಹಾನೈವೇದ್ಯವು, ಏತತ್-ಇದು, ಅಭ್ಯಂತರಾಖ್ಯಚತುರಂಗವಿಧಾನಂ- ಅಭ್ಯಂತರವೆಂಬ ಚತುರಂಗಪೂಜಾವಿಧಾನವು. ||

ಸೂ|| ಈಪ್ರಕಾರವಾದ ಪೂಜೆಯೇ ಮುಖ್ಯವೆಂದು ಪೇಳ್ದಪಂ:—

ಶ್ಲೋ|| ಏವಮಷ್ಟಾಂಗಯೋಗೇನ ಸದಾಂತಃಪದ್ಮಸದ್ಮನಿ।
ಪೂಜಯೇತ್ಪರಮಂದೇವಂ ಕಿಂಬಾಹ್ಯೈರ್ದೇವಪೂಜನೈಃ ||

ಟೀ|| ಏವಂ-ಈಪ್ರಕಾರವಾದ, ಅಷ್ಟಾಂಗಯೋಗೇನ-ಯಮ ಮುಂತಾದ ಅಷ್ಟಾಂಗಯೋಗದಿಂದೆ, ಸದಾ-ಅನವರತವೂ, ಅಂತಃಪದ್ಮಸದ್ಮನಿ-ಹೃದಯಕಮಲವೆಂಬ ಮನೆಯಲ್ಲಿ, ಪರಂ-ಸರ್ವೋತ್ಕೃಷ್ಟನಾಗಿರ್ಪಂಥ, ದೇವಂ-ಮಹಾದೇವನನು, ಪೂಜಯೇತ್-ಪೂಜಿಸುವುದು, ಬಾಹ್ಯೈಃ-ಯೋಗಬಾಹ್ಯಂಗಳಾಗಿರ್ಪಂಥ, ದೇವಪೂಜನೈಃ-ದೇವಪೂಜೆಗಳಿಂದ, ಕಿಂ-ಏನು ? ||

ಈ ಯೋಗಮಾರ್ಗದಿಂದೀಶ್ವರಪೂಜಕನೇ ವಿಶಿಷ್ಟನೆಂದು ಪೇಳ್ದಪಂ:—

ಶ್ಲೋ|| ಸ್ವಾತ್ಮನ್ಯೇವಸದಾಷ್ಟಾಂಗೈಃ ಪೂಜಯೇಚ್ಛಿವಮವ್ಯಯಂ ।
ಶೈವಸ್ಸಏವ ವಿದ್ವಾನ್ಸಸ್ಸಚ ಯೋಗವಿದಾಂ ವರಃ ||

ಟೀ॥ ಸ್ವಾತ್ಮನ್ಯೇವ-ಯೋಗೀಶ್ವರನು ತನ್ನ ಹೃದಯದಲ್ಲಿಯೇ, ಸದಾ-ಸರ್ವಕಾಲದಲ್ಲಿ, ಅಷ್ಟಾಂಗೈಃ- ಯಮಾದ್ಯಷ್ಟಾಂಗಂಗಳಿಂದೆ, ಅವ್ಯಯಂ- ಕೇಡಿಲ್ಲದಿರ್ಪಂಥ, ಶಿವಂ-ಶಿವನನು, ಪೂಜಯೇತ್-ಪೂಜಿಸುವುದು, ಸಏವ-ಆತನೇ, ಶೈವಃ-ಶಿವಸಂಬಂಧಿಯಾದಾತನು, ಸಃ-ಆತನೇ, ವಿದ್ವಾನ್-ವಿವೇಕವುಳ್ಳಾತನು, ಸಚ-ಆತನೇ, ಯೋಗವಿದಾಂ-ಶಿವಯೋಗವಬಲ್ಲವರ್ಗೆ, ವರಃ-ಶ್ರೇಷ್ಠನು. ॥೯॥

ಸೂ॥ "ಚಿತ್ತಸ್ಯನಿಯಮಸ್ತತ್ರಸಯಮಃಪರಿಪಠ್ಯತೇ" ಎಂದುದಾಗಿ, ಅನಂತರದಲ್ಲಿ ಬಾಹ್ಯಚತುರಂಗಕ್ಕೆ ಮೊದಲಾದ ಯಮದ ಲಕ್ಷಣಮಂ ಪೇಳ್ದಪಂ:—

ಶ್ಲೋ॥ ಸುಬ್ರಹ್ಮಚರ್ಯಂನಿಯತಾಶನಂಚಧೃತಿರ್ದಯಾಸೂನೃತ
ಮಾರ್ಜವಂಚ। ಶುಚಿತ್ವಮಸ್ತೇಯಮದ್ವೈಸ್ಯಹಿಂಸೇಯ
ಮಾದಶೈತೇಮುನಿಭಿಃಪ್ರಣೀತಾಃ ॥೧೦॥

ಟೀ॥ ಸುಬ್ರಹ್ಮಚರ್ಯಂ-ಸ್ತ್ರೀಸಂಗರಾಹಿತ್ಯ ಸ್ವದಾರಪರಿತುಷ್ಟತೆ ಯೆಂಬೆರಡುಪ್ರಕಾರವಾದ ಲೇಸಾದ ಬ್ರಹ್ಮಚರ್ಯವು, ನಿಯತಾಶನಂಚ-ಅಲ್ಪಾಹಾರವು, ಧೃತಿಃ-ಶೋಕಭೀತ್ಯಾದಿಗಳಿಂ ಮನಕ್ಕೆ ಕಂಪನವಿಲ್ಲದಿಹುದು, ದಯಾ-ದುಃಖಿತರ್ಗೆ ಹಿತವಚಿಂತಿಪುದು, ಸೂನೃತಂ-ಸತ್ಯವಚನವು, ಆರ್ಜವಂಚ-ಕುಟಿಲತೆಯಿಲ್ಲದಿಹುದು, ಶುಚಿತ್ವಂ-ಜಲಸ್ನಾನಭಸ್ಮಸ್ನಾನಾದಿಗಳಿಂಬಾಹ್ಯದಲ್ಲಿಯ ದೋಷಕ್ಷಯಾಸಕ್ತನೆಯಿಲ್ಲದಿಹುದರಿಂದಂತರಂಗದಲ್ಲಿಯ ಶುಚಿತ್ವವು, ಅಸ್ತೇಯಂ-ಪರದ್ರವ್ಯವನಪಹರಿಸದಿಹುದು, ಅದ್ವೈಸ್ಯಹಿಂಸೇ-ಅಕಾರ್ಪಣ್ಯಮಹಿಂಸೆಯು, ಏತೇದಶ-ಈಪತ್ತು, ಯಮಾಃ- ಯಮಂಗಳೆಂದು, ಮುನಿಭಿಃ-ಮುನೀಶ್ವರರಿಂದ, ಪ್ರಣೀತಾಃ-ಹೇಳಲ್ಪಟ್ಟುವು. ॥೧೦॥

ಸೂ॥ "ಅಶಾಸ್ತ್ರೀಯಕ್ರಿಯಾತ್ಯಾಗಾಚ್ಛಾಸ್ತ್ರೀಯೇಷ್ವಪಿಕರ್ಮಸು।ನಿಯಮಃಪಠ್ಯತೇಶಾಸ್ತ್ರೇ" ಎಂದುದಾಗಿ, ದ್ವಿತೀಯಯೋಗವೆನಿಸುವ ನಿಯಮಂಗಳಂ ಪೇಳ್ದಪಂ-

ಶ್ಲೋ॥ ಸಂತೋಷಮಾಸ್ತಿಕ್ಯಗುಣೋಮತಿಶ್ಚ ತಪೋವ್ರತಂಶಂಕ
ರಪೂಜನಂಜಪಃ । ಹ್ರೀರ್ಯೋಗಶಾಸ್ತ್ರಶ್ರವಣಂಚಪಾತ್ರೇ
ಪ್ರದಾನಮೇತೇನಿಯಮಾದಶಸ್ಮೃತಾಃ ॥೧೧॥

ಟೀ॥ ಸಂತೋಷಂ-"ಸಂತೋಷಮುದಿತಂತಂತ್ರೇಲಾಭಾಲಾಭೇಸಮಾಮತಿಃ" ಎಂದುದಾಗಿ, ಭೋಗ್ಯವಸ್ತುಗಳಲಬ್ಧಿನಾಶಂಗಳಲ್ಲಿ ಸಮಾನಬುದ್ಧಿಯೆನಿಸುವ ಸಂತೋಷವು, ಆಸ್ತಿಕ್ಯಗುಣಃ-ಶಿವಾಗಮೋಕ್ತಂಗಳಾದ ವಿಧಿನಿಷೇಧಂಗಳಿಂ ಪುಣ್ಯಪಾಪಂಗಳಿಹವೆಂಬ ವಿಶ್ವಾಸವು, ಮತಿಶ್ಚ-ತನಗುರುಚಾರ್ಯೋಪದೇಶವಾದಾದ ಸತ್ಕೃತ್ಯಪರಿಕೆಯು, ತಪಃ-ಯೋಗಾರ್ಥವಾಗಿ ದೇಹಶೋಷಣವು, ಮೇಣು ನಾಹುಕೋಹಮಿತ್ಯಾದಿಯಾದಾಲೋಚನೆಯು, ವ್ರತಂ-ಭಸ್ಮನಿಷ್ಠತ್ವಾದಿವ್ರತವು, ಶಂಕರಪೂಜನಂ-ಧ್ಯಾನಸ್ತೋತ್ರಾ

ಈವ್ಯಕ್ತನಾದ ನಾಲ್ಕು ಯೋಗಾಂಗವು, ಬಾಹ್ಯಂ-ಬಾಹ್ಯವಾಗಿರ್ಪಂಥ, ವಿಧಾನಂ-ಪೂ
ಜಾವಿಧಾನವೆನಿಪುದೆಂಬುದರ್ಥಂ. ॥

ಸೂ॥ ಸ್ನಾನಾನಂತರದಲ್ಲಿ ಶಿವಂಗೆ ಪ್ರತ್ಯಾಹಾರಾದಿಗಳಿಂ ಗಂಧಾದಿಗಳಂ ಸಂಕ
ಲ್ಪಿಸುವುದೇ ಅಂತಃಪೂಜಾವಿಧಾನವೆಂದು ಪೇಳ್ದಪಂ —

ಶ್ಲೋ॥ ಶಂಭೋರಥೇಂದ್ರಿಯನಿವರ್ತನಮೇವ ಗಂಧೋ ಧ್ಯಾನಂ
ಪ್ರಸೂನನಿಚಯೋ ದೃಢಧಾರಣಾಸಾ । ಧೂಪಸ್ಸಮಾಧಿ
ರಥಶುದ್ಧಮಹೋಪಹಾರಮಭ್ಯಂತರಾಖ್ಯಚತುರಂಗವಿ
ಧಾನಮೇತತ್ ॥

ಟೀ॥ ಅಥ-ಅನಂತರದಲ್ಲಿ, ಶಂಭೋಃ-ಶಿವಂಗೆ, ಇಂದ್ರಿಯನಿವರ್ತನಮೇವ-ಶ್ರೋ
ತ್ರಾದೀಂದ್ರಿಯಂಗಳ ವಿಷಯವೈಮುಖ್ಯಮಂ ಮಾಳ್ಪ ಪ್ರತ್ಯಾಹಾರವೇ, ಗಂಧಃ-
ಗಂಧಾನುಲೇಪನವು, ಧ್ಯಾನಂ-ಆ ಇಂದ್ರಿಯ ನಿವರ್ತನದಿಂದಂತರ್ಮುಖವಾದ ಮನದಿಂ
ಶಿವಧ್ಯಾನವೇ, ಪ್ರಸೂನನಿಚಯಃ-ಪುಷ್ಪಸಮೂಹವು, ಸಾ ದೃಢಧಾರಣಾ-ಆಮುಂಪೇ
ಳ್ದ ಧೃಢವಾದ ಧಾರಣೆಯೇ, ಧೂಪಃ-ಧೂಪವು, ಅಥ-ಅನಂತರದಲ್ಲಿ, ಸಮಾಧಿಃ-ಜ್ಞಾ
ತಾಜ್ಞಾತರೂಪವಾದಸಮಾಧಿಯೇ, ಶುದ್ಧಮಹೋಪಹಾರಃ- ಶುದ್ಧವಾದಮಹಾನ್ನನೈವೇ
ದ್ಯವು, ಏತತ್-ಇದು, ಅಭ್ಯಂತರಾಖ್ಯಚತುರಂಗವಿಧಾನಂ- ಅಭ್ಯಂತರವೆಂಬ ಚತು
ರಂಗಪೂಜಾವಿಧಾನವು. ॥

ಸೂ॥ ಈಪ್ರಕಾರವಾದ ಪೂಜೆಯೇ ಮುಖ್ಯವೆಂದು ಪೇಳ್ದಪಂ:—

ಶ್ಲೋ॥ ಏವಮಷ್ಟಾಂಗಯೋಗೇನ ಸದಾಂತಃಪದ್ಮಸದ್ಮನಿ।
ಪೂಜಯೇತ್ಪರಮಂದೇವಂ ಕಿಂ ಬಾಹ್ಯೈರ್ದೇವಪೂಜನೈಃ ।

ಟೀ॥ ಏವಂ-ಈಪ್ರಕಾರವಾದ, ಅಷ್ಟಾಂಗಯೋಗೇನ-ಯಮ ಮುಂತಾದ ಅ
ಷ್ಟಾಂಗಯೋಗದಿಂದೆ, ಸದಾ-ಅನವರತವೂ, ಅಂತಃಪದ್ಮಸದ್ಮನಿ-ಹೃದಯಕಮಲವೆಂ
ಬ ಮನೆಯಲ್ಲಿ, ಪರಂ-ಸರ್ವೋತ್ಕೃಷ್ಟನಾಗಿರ್ಪಂಥ, ದೇವಂ-ಮಹಾದೇವನನು, ಪೂಜ
ಯೇತ್-ಪೂಜಿಸುವುದು, ಬಾಹ್ಯೈಃ-ಯೋಗಬಾಹ್ಯಂಗಳಾಗಿರ್ಪಂಥ, ದೇವಪೂಜನೈಃ-
ದೇವಪೂಜೆಗಳಿಂದ, ಕಿಂ-ಏನು ? ॥

ಈ ಯೋಗಮಾರ್ಗದಿಂದೀಶ್ವರಪೂಜಕನೇ ವಿಶಿಷ್ಟನೆಂದು ಪೇಳ್ದಪಂ:—

ಶ್ಲೋ॥ ಸ್ವಾತ್ಮನ್ಯೇವಸದಾಷ್ಟಾಂಗೈಃ ಪೂಜಯೇಚ್ಛಿವಮವ್ಯಯಂ ।
ಶೈವಸ್ಸಏವ ವಿದ್ವಾನ್ಸಸ್ಸಚ ಯೋಗವಿದಾಂ ವರಃ ॥

ಟೀ॥ ಸ್ವಾತ್ಮನ್ಯೇವ-ಯೋಗೀಶ್ವರನು ತನ್ನ ಹೃದಯದಲ್ಲಿಯೇ, ಸದಾ-ಸರ್ವಕಾಲದಲ್ಲಿ, ಅಷ್ಟಾಂಗೈಃ- ಯಮಾದ್ಯಷ್ಟಾಂಗಂಗಳಿಂದೆ, ಅವ್ಯಯಂ- ಕೇಡಿಲ್ಲದಿರ್ಪಂಥ, ಶಿವಂ-ಶಿವನನು, ಪೂಜಯೇತ್-ಪೂಜಿಸುವುದು. ಸಏವ-ಆತನೇ, ಶೈವಃ-ಶಿವಸಂಬಂಧಿಯಾದಾತನು, ಸಃ-ಆತನೇ, ವಿದ್ವಾನ್-ವಿವೇಕವುಳ್ಳಾತನು, ಸಚ-ಆತನೇ, ಯೋಗವಿದಾಂ-ಶಿವಯೋಗವಬಲ್ಲವರ್ಗೆ, ವರಃ-ಶ್ರೇಷ್ಠನು. ॥೯॥

ಸೂ ॥ " ಚಿತ್ತಸ್ಯನಿಯಮಸ್ತತ್ರಯಮಃಪರಿಪಠ್ಯತೇ " ಎಂದುದಾಗಿ, ಅ ನಂತರದಲ್ಲಿ ಬಾಹ್ಯಚತುರಂಗಕ್ಕೆ ಮೊದಲಾದ ಯಮದ ಲಕ್ಷಣಮಂ ಪೇಳ್ದಪಂ:—

ಶ್ಲೋ॥ ಸುಬ್ರಹ್ಮಚರ್ಯಂನಿಯತಾಶನಂಚಧೃತಿರ್ದಯಾಸೂನೃತ
ಮಾರ್ಜವಂಚ। ಶುಚಿತ್ವಮಸ್ತೇಯಮದ್ವೈಸ್ಯಹಿಂಸೇಯ
ಮಾದಶೈತೇಮುನಿಭಿಃಪ್ರಣೀತಾಃ ॥೧೦॥

ಟೀ॥ ಸುಬ್ರಹ್ಮಚರ್ಯಂ-ಸ್ತ್ರೀಸಂಗರಾಹಿತ್ಯ ಸ್ವದಾರಪರಿತುಷ್ಟತೆ ಯೆಂಬೆರಡುಪ್ರಕಾರವಾದ ಲೇಸಾದ ಬ್ರಹ್ಮಚರ್ಯವು, ನಿಯತಾಶನಂಚ-ಅಲ್ಪಾಹಾರವು, ಧೃತಿಃ-ಶೋಕಭೀತ್ಯಾದಿಗಳಿಂ ಮನಕ್ಕೆ ಕಂಪನವಿಲ್ಲದಿಹುದು, ದಯಾ-ದುಃಖಿತರ್ಗೆ ಹಿತವಚಿಂತಿಪುದು, ಸೂನೃತಂ-ಸತ್ಯವಚನವು, ಆರ್ಜವಂಚ-ಕುಟಿಲತೆಯಿಲ್ಲದಿಹುದು, ಶುಚಿತ್ವಂ-ಜಲಸ್ನಾನಭಸ್ಮಸ್ನಾನಾದಿಗಳಿಂಬಾಹ್ಯದಲ್ಲಿಯು ದೋಷಕ್ಕಾಸ್ಪದನೆಯಿಲ್ಲದಿಹುದರಿಂದಂತರಂಗದಲ್ಲಿಯು ಶುಚಿತ್ವವು, ಅಸ್ತೇಯಂ-ಪರದ್ರವ್ಯವನಪಹರಿಸದಿಹುದು, ಅದ್ವೈಸ್ಯಂಹಿಂಸೇ-ಅಕಾರ್ಪಣ್ಯಾಮಹಿಂಸೆಯು, ಏತೇದಶ-ಈಹತ್ತು, ಯಮಾಃ- ಯಮಂಗಳೆಂದು, ಮುನಿಭಿಃ-ಮುನೀಶ್ವರರಿಂದ, ಪ್ರಣೀತಾಃ-ಹೇಳಲ್ಪಟ್ಟುವು. ॥೧೦॥

ಸೂ॥ " ಅಶಾಸ್ತ್ರೀಯಕ್ರಿಯಾತ್ಯಾಗಾಚ್ಛಾಸ್ತ್ರೀಯೇಷ್ವಪಿಕರ್ಮಸು।ನಿಯಮಃಪಠ್ಯತೇಶಾಸ್ತ್ರೇ" ಎಂದುದಾಗಿ, ದ್ವಿತೀಯಯೋಗವೆನಿಸುವ ನಿಯಮಂಗಳಂ ಪೇಳ್ದಪಂ-

ಶ್ಲೋ॥ ಸಂತೋಷಮಾಸ್ತಿಕ್ಯಗುಣೋಮತಿಶ್ಚ ತಪೋವ್ರತಂಶಂಕ
ರಪೂಜನಂಜಪಃ । ಹ್ರೀರ್ಯೋಗಶಾಸ್ತ್ರಶ್ರವಣಂಚಪಾತ್ರೇ
ಪ್ರದಾನಮೇತೇನಿಯಮಾದಶಸ್ಮೃತಾಃ ॥೧೧॥

ಟೀ॥ ಸಂತೋಷಂ-" ಸಂತೋಷಮುದಿತಂತಂತ್ರೇಲಾಭಾಲಾಭೇಸಮಾಮತಿಃ " ಎಂದುದಾಗಿ, ಭೋಗ್ಯವಸ್ತುಗಳಲಬ್ಧಿನಾಶಂಗಳಲ್ಲಿ ಸಮಾನಬುದ್ಧಿಯೆನಿಸುವ ಸಂತೋಷವು, ಆಸ್ತಿಕ್ಯಗುಣಃ-ಶಿವಾಗಮೋಕ್ತಂಗಳಾದ ವಿಧಿನಿಷೇಧಂಗಳಿಂ ಪುಣ್ಯಪಾಪಂಗಳಿಹವೆಂಬ ವಿಶ್ವಾಸವು, ಮತಿಶ್ಚ-ತನಗುರೂಪದೇಶವಾದಾದ ಸತ್ಕೃತ್ಯದರಿಕೆಯು, ತಪಃ-ಯೋಗಾರ್ಥವಾಗಿ ದೇಹಶೋಷಣವು, ಮೇಣು ನಾಹಂಕೋಹಮಿತ್ಯಾದಿಯಾದಾಲೋಚನೆಯು, ವ್ರತಂ-ಭಸ್ಮನಿಷ್ಠತ್ವಾದಿವ್ರತವು, ಶಂಕರಪೂಜನಂ-ಧ್ಯಾನಸ್ತೋತ್ರಾ

ಭಿಷೇಕಾದಿಗಳಿಂ ಶಿವಾರ್ಚನೆಯು, ಜಪಃ-ಮಾನಸೋಪಾಂಶುವಾಚಕಂಗಳಿಂ ಪ್ರಣ
ಪಂಚಾಕ್ಷರ್ಯಾದಿ ಮಂತ್ರಜಪವು, ಹ್ರೀಃ-ಲೋಕವಿರುದ್ಧ ವೇದವಿರುದ್ಧವಾದ ಮ
ರ್ಗಂಗಳಲ್ಲಿ ಮನವೆರಗದಿಹುದು, ಯೋಗಶಾಸ್ತ್ರಶ್ರವಣಂಚ-ಯೋಗಶಾಸ್ತ್ರಂಗಳ ಕೇಳ
ವುದು, ಪಾತ್ರೇಪ್ರದಾನಂ-ಸತ್ಪಾತ್ರದಾನವು, ಏತೇದಶ-ಈಹತ್ತು, ನಿಯಮಾಃ-ನಿ
ಮಂಗಳೆಂದು, ಸ್ಮೃತಾಃ-ನೆನೆಯಲ್ಪಟ್ಟವು. ॥೧೧

ಸೂ॥ ಈ ನಿಯಮಂಗಳ್ಗಾತ್ಮಶುದ್ಧಿಯೇ ಫಲವೆಂದು ಪೇಳ್ದಪಂ:—

ಶ್ಲೋ॥ ಯಮಾಶ್ಚ ನಿಯಮಾಸ್ಸಮ್ಯಗೇವಂವಿಂಶತಿಸಂಖ್ಯಯಾ ।
ಸ್ಥಿರಧೀರ್ನಿಯತೋಭೂತ್ವಾಸ್ವಾತ್ಮಶುದ್ಧಿಂಸಮಾಚರೇತ್ ॥

ಟೀ॥ ಯಮಾಶ್ಚ- ಯಮಯೋಗಂಗಳು, ನಿಯಮಾಃ-ನಿಯಮಯೋಗಂಗಳು
ಸಮ್ಯಕ್-ಲೇಸಾಗಿರ್ಪಂತಹುವು, ಏವಂ-ಈ ಪೂರ್ವೋಕ್ತಪ್ರಕಾರವಾದ, ವಿಂಶತಿಸಂ
ಖ್ಯಯಾ-ಇಪ್ಪತ್ತು ಗುಣಂಗಳಿಂದೆ, ಸ್ಥಿರಧೀಃ-ಸ್ಥಿರವಾದ ಬುದ್ಧಿಯುಳ್ಳಾತನಾಗಿ, ನಿಯ
ತಃ-ಜಿತೇಂದ್ರಿಯನು, ಭೂತ್ವಾ-ಆಗಿ, ಸ್ವಾತ್ಮಶುದ್ಧಿಂ-ಬುದ್ಧಿಶುದ್ಧಿದ್ವಾರದಿಂ ತನ್ನಾ
ತ್ಮಶುದ್ಧಿಯನು, ಸಮಾಚರೇತ್-ಚೆನ್ನಾಗಿ ಆಚರಿಸುವುದು. (ಯಮನಿಯಮಂಗಳ
ಶುದ್ಧನಾದಾತಂಗಲ್ಲದೆ ಮುಂದಣ ಯೋಗಸಿದ್ಧಿಯಾಗದೆಂಬುದರ್ಥಂ.) ॥೧೨

ಸೂ॥ ಯಮನಿಯಮಂಗಳಿಂದಾತ್ಮಶುದ್ಧಿ ಪಡೆದಾತಂಗೆ ಅನಂತರದಲ್ಲಿ ಸಾಧ
ಲ್ತಕ್ಕ ಮುಖ್ಯಂಗಳಾದಾಸನಂಗಳಿಂ ಪೇಳ್ದಪಂ:—

ಶ್ಲೋ॥ ಸಿದ್ಧಾಂಬುಜಸ್ವಸ್ತಿಕಮುಕ್ತವೀರಭದ್ರಾಹಿಭುಕ್ಸ್ವಗ
ವಾಂಮುಖಾನಿ।ಸುಖಾಸನಂಚೈವ ಸಮಂಕಿತಾನಿ ತತೋ
ದಶೈವಾನಿ ವರಾಸನಾನಿ ॥೧೩

ಟೀ॥ ಸಿದ್ಧಾಂಬುಜ... ..ಗವಾಂಮುಖಾನಿ-ಸಿದ್ಧಾಸನ ಪದ್ಮಾಸನ ಸ್ವಸ್ತಿಕಾ
ಸನ ಮುಕ್ತಾಸನ ವೀರಾಸನ ಭದ್ರಾಸನ ಮಯೂರಾಸನ ಗೋಮುಖಾಸನಂಗಳು
ತತಃ-ಅನಂತರದಲ್ಲಿ, ಸುಖಾಸನಂಚೈವ-ಸುಖಾಸನವೆಂಬ, ಇಮಾನಿದಶ-ಈಹತ್ತು, ವ
ರಾಸನಾನಿ-ಶ್ರೇಷ್ಠವಾದಾಸನಂಗಳೆಂದು,ಸಮಂಕಿತಾನಿ-ಚೆನ್ನಾಗಿ ಕುರುಹಿಸಲ್ಪಟ್ಟವ
(ತಾತ್ಪರ್ಯಂ-ಒಂದುಮಡದಿಂ ಯೋನಿಸ್ಥಾನವನೊತ್ತಿ ಮತ್ತೊಂದು ಮಡಮಂ ಮೇ
ಢ್ರದಮೇಲಿರಿಸಿ,ಏಕಚಿತ್ತವುಳ್ಳಾತನಾಗಿ, ಋಜುಕಾಯನಾಗಿ, ಭ್ರೂಮಧ್ಯದಲ್ಲಿ ಸ್ಥಿರದೃ
ಷ್ಟಿಯುಳ್ಳಾತನಾಗಿಹತನವೇ ಸಿದ್ಧಾಸನವೆನಿಸುವುದು. ಎರಡು ತೊಡೆಗಳಮೇಲೆರಡು
ಪದತಳಂಗಳಂ ಮೇಲುಮುಖವಾಗಿರಿಸಿ, ಎರಡು ಕರತಳಂಗಳಂ ಮೇಲುಮುಖವಾಗಿ
ರಿಸಿ, ರಾಜದಂತಕವೆನಿಸುವ ದಂತಮೂಲಸ್ಥಾನದಲ್ಲಿ ಜಿಹ್ವಾಗ್ರವನಿರಿಸಿ, ನಾಸಿಕಾಗ್ರ
ದೃಷ್ಟಿಯಿಂದಿಹುದೇ ಪದ್ಮಾಸನವೆನಿಸುವುದು. ಎರಡು ತೊಡೆಗಳ ಸಂಧಿಗಳಲ್ಲಿ ಎ

ಡು ಪದತಳಂಗಳನಿರಿಸಿ, ಋಜುಕಾಯನಾಗಿಹುದೇ ಸ್ವಸ್ತಿಕಾಸನವೆನಿಸುವುದು. ಮೇಢ್ರದಮೇಲೆಡದ ಮಡವನಿರಿಸಿ ಆ ಮಡದಮೇಲೆ ಬಲದಮಡವನಿರಿಸಿ ಋಜುಕಾಯನಾಗಿಹುದೇ ಮುಕ್ತಾಸನವೆನಿಸುವುದು. ಒಂದು ಪಾದಮಂ ಮತ್ತೊಂದು ತೊಡೆಯ ಮೇಲಿರಿಸಿ ಋಜುಕಾಯನಾಗಿಹುದೇ ವೀರಾಸನವೆನಿಸುವುದು. ವೃಷಣದಿಂ ಕೆಳಗೆರಡು ಮಡಂಗಳಂ ಶಿವನಿಸ್ಥಾನದ ಎಡಬಲದಲ್ಲಿರಿಸಿ ಎರಡು ತೊಡೆಗಳಂ ಎರಡು ತೋಳ್ಗಳಿಂ ದೃಢವಾಗಿ ಬಳಸಿಹುದೇ ಭದ್ರಾಸನವೆನಿಸುವುದು. ಎರಡು ಕರತಳಂಗಳಂ ಭೂಮಿಯಮೇಲಿಟ್ಟು ಎರಡುಮೊಳಕೈಯುಂ ಕುಕ್ಷಿಯೊಳಿಟ್ಟು ಸಖಿಖಾಂತವಾದ ಶರೀರವಮಂ ಭೂಮಿಯಂ ಸೋಂಕವೆ ಆಕಾಶದಲ್ಲಿ ದಂಡಾಕೃತಿಯಾಗಿ ನೀಡುವುದೇ ಮಯೂರಾಸನವೆನಿಸುವುದು. ವೃಷಣದಿಂ ಕೆಳಗೆರಡುಮಡಂಗಳಂ ಶಿವನಿಸ್ಥಾನದ ಕೆಲಬಲನಾಗಿರಿಸಿ, ಎರಡು ಜಾನುಗಳಲ್ಲಿ ಎರಡು ಹಸ್ತಂಗಳಂ ಬೆರಳ್ಗಳಂ ಪಸರಿಸಿ ಇರಿಸಿ, ಮುಖಮಂ ತೆರೆದು ನಾಸಾಗ್ರದೃಷ್ಟಿಯಾಗಿರ್ಪುದೇ ಸಿಂಹಾಸನವೆನಿಸುವುದು. ಬಲದ ಮಡಮಂ ಎಡದ ಪೊರವಾರಿನೊಳಿಟ್ಟು ಎಡದಮಡಮಂ ಬಲದ ಪೊರವಾರಿನೊಳಿಟ್ಟು ಪಾದಂಗಳಂ ಗೋಮುಖಾಕಾರಮಂ ಮಾಳ್ಪುದೇ ಗೋಮುಖಾಸನವೆನಿಸುವುದು. ತನಗಾವಪ್ರಕಾರದಿಂ ಸುಖವೂ ಧೈರ್ಯವೂ ಅಪ್ಪುದೋ ಅಂತೆ ಕುಳ್ಳಿರ್ಪುದೇ ಸುಖಾಸನವೆಂಬುದಭಿಪ್ರಾಯಂ) ಪ್ರಮಾಣಂ:—" ಅಥಸಿದ್ಧಾಸನಂವಕ್ಷ್ಯೇಶೃಣುಷ್ವಂಸುಸಮಾಹಿತಾಃ । ಸಂಪೀಡ್ಯಶಿವನಿಂಸೂಕ್ಷ್ಮಗುಲ್ಫೇನೈವತುಸವ್ಯತಃ । ಸವ್ಯಂದಕ್ಷಿಣಗುಲ್ಫೇನಸಿದ್ಧಾಸನಮಿತೀರಿತಂ ॥ ಅಂಗುಷ್ಠೌಚನಿಬಧ್ನೀಯಾದ್ಧಸ್ತಾಭ್ಯಾಂವ್ಯುತ್ಕ್ರಮೇಣತು । ಊರ್ವೋರುಪರಿವಿಪ್ರೇಂದ್ರಾಃಕೃತ್ವಾಪದತಲೇಶುಭೇ ॥ ಪದ್ಮಾಸನಂಭವೇದೇತತ್ಸರ್ವೇಷಾಮಪಿಪೂಜಿತಂ । ಜಾನೂರ್ವೋರಂತರೇಸಮ್ಯಕ್ಕೃತ್ವಾಪಾದತಲೇಶುಭೇ ॥ ಋಜುಕಾಯಸ್ಸುಖಾಸೀನಸ್ಸ್ವಸ್ತಿಕಂತತ್ಪ್ರಚಕ್ಷತೇ । ಮೇಢ್ರಾದುಪರಿನಿಕ್ಷಿಪ್ಯಸವ್ಯಂಗುಲ್ಫಂತಥೋಪರಿ ಗುಲ್ಫಾಂತರಂಚನಿಕ್ಷಿಪ್ಯಮುಕ್ತಾಸನಮಿತೀರಿತಂ । ಅಥವೀರಾಸನಂವಕ್ಷ್ಯೇಶೃಣುಷ್ವಂಸುಸಮಾಹಿತಾಃ ॥ ಏಕಪಾದಮಥೈಕಸ್ಮಿನ್ವಿನ್ಯಸ್ಯೋರುಣಿಸಂಸ್ಥಿತಂ । ಇತರಸ್ಮಿನ್ನಥಶ್ಚೋರುಂವೀರಾಸನಮುದಾಹೃತಂ ॥ ಅಥಭದ್ರಾಸನಂವಕ್ಷ್ಯೇಶೃಣುಷ್ವಮೃಷಯೋಽಧುನಾ । ಗುಲ್ಫೌಚವೃಷಣಸ್ಯಾಧಸ್ಸೀವನ್ಯಾಃಪಾರ್ಶ್ವಯೋಃಕ್ಷಿಪೇತ್ ॥ ಪಾರ್ಶ್ವಪಾದೌಚಪಾಣಿಭ್ಯಾಂದೃಢಂಬಧ್ವಾಸುನಿಶ್ಚಲಃ । ಭದ್ರಾಸನಂಭವೇದೇತತ್ಸರ್ವವ್ಯಾಧಿವಿಷಾಪಹಂ॥ ಅವಷ್ಟಭ್ಯಧರಾಂಸಮ್ಯಕ್ಕರಾಭ್ಯಾಂಸುಸಮಾಹಿತಃ । ಹಸ್ತಯೋಃಕೂರ್ಪರೌಚಾಪಿಸ್ಥಾಪಯೇನ್ನಾಭಿಪಾರ್ಶ್ವಯೋಃ ॥ ಸಮುನ್ನತಶಿರಃಪಾದೋದಂಡವದ್ವ್ಯೋಮ್ನಿಸುಸ್ಥಿತಃ । ಮಯೂರಾಸನಮೇತತ್ಸ್ಯಾತ್ಸರ್ವಪಾಪಪ್ರಣಾಶನಂ ॥ ಗುಲ್ಫೌಚವೃಷಣಸ್ಯಾಧಸ್ಸೀವನ್ಯಾಃಪಾರ್ಶ್ವಯೋಃಕ್ಷಿಪೇತ್ । ದಕ್ಷಿಣಂಸವ್ಯಗುಲ್ಫೇನದಕ್ಷಿಣೇನತಥೇತರಂ ॥ ಹಸ್ತೌಜಾನ್ವೋಸ್ಸಂಸ್ಥಾಪ್ಯಚಾಂಗುಲೀಶ್ಚಪ್ರಸಾರ್ಯಚ । ವ್ಯಾತ್ತವಕ್ತ್ರೋನಿರೀಕ್ಷೇತನಾಸಾಗ್ರಂಸುಸಮಾಹಿತಃ । ಸಿಂಹಾಸನಂಭವೇದೇತತ್ಪೂಜಿತಂಯೋಗಿಭಿಸ್ಸದಾ ॥

ಸವ್ಯೇದಕ್ಷಿಣಗುಲ್ಫಂತು ಪೃಷ್ಠಪಾರ್ಶ್ವೇನಿವೇಶಯೇತ್। ದಕ್ಷಿಣೇಪಿತಥಾಸವ್ಯಂಗೋ
ಖಂಗೋಮುಖಾಕೃತಿಃ " ॥೧

ಸೂ॥ ಆಶ್ರಮವಿಭಾಗದಿಂದಾಸನ ವಿಭಾಗವಂ ಪೇಳ್ದಪಂ: —

ಶ್ಲೋ॥ ಗೃಹಿಣಾಮಂಬುಜಾಸಿದ್ಧಂಗೃಹಸ್ಥೇತರವರ್ತ್ಮನಾಂ ।
ಸುಖಾಸನಂಚಸರ್ವೇಷಾಮಿತ್ಯೇತತ್ತ್ರಿವಿಧಂಪರಂ ॥೧

ಟೀ॥ ಗೃಹಿಣಾಂ-ಗೃಹಸ್ಥರ್ಗೆ, ಅಂಬುಜಂ-ಪದ್ಮಾಸನವೇ, ಪರಂ-ಶ್ರೇಷ್ಠ
(ಪರಮೇಶ್ವರನ ಸೃಷ್ಟಿಕೃತ್ಯಾನುಕೂಲರಹತನದಿಂ ಗೃಹಸ್ಥರ್ಗೆ ಕಾಮನಾಶಕ
ಪದ್ಮಾಸನವೇ ಮುಖ್ಯವೆಂಬುದರ್ಥಂ.) ಗೃಹಸ್ಥೇತರವರ್ತ್ಮನಾಂ-ಗೃಹಸ್ಥರಿ
ಮಾರ್ಗದಲ್ಲಿ ವರ್ತಿಸುವ ಬ್ರಹ್ಮಚಾರಿ ಭಿಕ್ಷು ವಾನಪ್ರಸ್ಥರ್ಗೆ, ಸಿದ್ಧಂ-ಕಾಮನಾಶಕ
ದಂ ಸಿದ್ಧಾಸನವೇ, ಪರಂ-ಶ್ರೇಷ್ಠವು, ಸರ್ವೇಷಾಂ-ಸಮಸ್ತರ್ಗೆ, ಸುಖಾಸನಂ
ಸುಖಾಸನವೇ, ಪರಂ-ಶ್ರೇಷ್ಠವು, ಏತತ್ತ್ರಿವಿಧಂ-ಈಮೂರುಪ್ರಕಾರವು, ಇತಿ-ಈ
ರ್ಯಾದೆಮುಳ್ಳಿ, ವರ್ತಿಪುನೆಂಬುದರ್ಥಂ. ॥೧

ಸೂ ॥ ಈಪ್ರಕಾರದಿಂ ದಾಸನಾಭ್ಯಾಸಸಂಪನ್ನನಾದ ಯೋಗೀಶ್ವರಂ ಮು
ಪ್ರಾಣಾಯಾಮಾಭ್ಯಾಸಮಂ ಮಾಡಲೇಕಾಂತಸ್ಥಲವನಾಶ್ರಯಿಸವೇಕೆಂದು ಪೇಳ್ದಪ

ಶ್ಲೋ॥ ಯಾನಿಕಾನಿಪ್ರಶಸ್ತಾನಿಹ್ಯಾಸನಾನಿಸಮಾನಿಚ ।
ತೇಷ್ವಭೀಷ್ಟಾಸನಾಸೀನೋವಿವಿಕ್ತಸ್ಥಾನಮಾಶ್ರಯೇತ್॥

ಟೀ॥ ಹಿ-ಪ್ರಸಿದ್ಧವಾಗಿ, ಯಾನಿಕಾನಿ-ಆವುವುಕೆಲವು, ಪ್ರಶಸ್ತಾನಿ-ಶ್ರೇಷ್ಠ
ಳಾಗಿರ್ಪಂಥ, ಸಮಾನಿಚ-ಶಾಸ್ತ್ರೋಕ್ತಿಗೆ ಸದೃಶಂಗಳಾಗಿರ್ಪಂಥ, ಆಸನಾನಿ-ಆಸ
ಗಳುಂಟೋ, ತೇಷು-ಅವುಗಳೊಳಗೆ, ಅಭೀಷ್ಟಾಸನಾಸೀನಃ-ಇಷ್ಟವಾದಾಸನದಲ್ಲಿ
ತನಾಗುತ್ತಾ, ವಿವಿಕ್ತಸ್ಥಾನಂ-ಏಕಾಂತಸ್ಥಲವನು, ಆಶ್ರಯೇತ್-ಆಶ್ರಯಿಪುದು.

ಸೂ॥ ಏಕಾಂತಸ್ಥಲವಲ್ಲಿ ಮಾಳ್ಪ ಯೋಗಸಾಧನವ ಪ್ರಶಸ್ತವಾದ
ಗಮಂಟಪಮಂ ನಾಲ್ಕು ಶ್ಲೋಕಂಗಳಿಂ ಪೇಳ್ದಪಂ: —

ಶ್ಲೋ॥ ತತ್ರರಮ್ಯಂಮಠಂಕುರ್ಯಾತ್ಸೂಕ್ಷ್ಮದ್ವಾರಂಚನಿರ್ವ್ರಣಂ
ಪ್ರಾಕಾರವೇಷ್ಟಿತಂಶುದ್ಧಂಬಹಿಶ್ಶಾಲಾಸಮನ್ವಿತಂ ॥೧

ಟೀ ॥ ತತ್ರ-ಆ ಏಕಾಂತಸ್ಥಲದಲ್ಲಿ, ರಮ್ಯಂ-ಮನೋಹರವಾಗಿರ್ಪಂಥ, ಸೂ
ಕ್ಷ್ಮದ್ವಾರಂ- ಚಿಕ್ಕಬಾಗಿಲುಳ್ಳಂಥ, ನಿರ್ವ್ರಣಂ- ರಂಧ್ರಾದಿದೋಷವಿಲ್ಲದೆಯಿರ್ಪಂ
ಪ್ರಾಕಾರವೇಷ್ಟಿತಂ-ಕೋಟೆಯಿಂಬಳಸಲ್ಪಟ್ಟಂಥ, ಶುದ್ಧಂ-ನಿರ್ಮಲವಾಗಿರ್ಪಂಥ,
ಹಿಶ್ಶಾಲಾಸಮನ್ವಿತಂ-ಬಳಸಿಕೈಸಾಲೆಯಿಂ ಕೂಡಿದಂಥ, ಮಠಂ-ಯೋಗಗೃಹವ
ಕುರ್ಯಾತ್-ಮಾಡುವುದು ॥೧

ಶ್ಲೋ॥ ಸುಗಂಧಕುಸುಮಾಕೀರ್ಣಂವಿತಾನಪರಿಶೋಭಿತಂ ।
ಮೃದೂಪಧಾನಶಯ್ಯಾದ್ಯೈರಾಸನಾದ್ಯೈಸ್ಸಮಾಕುಲಂ ॥೧೭॥

ಟೀ॥ ಸುಗಂಧಕುಸುಮಾಕೀರ್ಣಂ- ಸುಪರಿಮಳಕುಸುಮಂಗಳಿಂ ತುಂಬಲ್ಪಟ್ಟಂಥ, ವಿತಾನಪರಿಶೋಭಿತಂ-ಮೇಲುಕಟ್ಟಿಂದೊಪ್ಪಲ್ಪಟ್ಟಂಥ, ಮೃದೂಪಧಾನಶಯ್ಯಾದ್ಯೈಃ-ಮೃದುವಾದ ತಲೆಮೆತ್ತೆ ಹಾಸು ಮೊದಲಾದವರಿಂದವೂ, ಆಸನಾದ್ಯೈಃ-ಗದ್ದುಗೆಮೊದಲಾದವರಿಂದವೂ, ಸಮಾಕುಲಂ-ತುಂಬಿದಂಥ. ॥೧೭॥

ಶ್ಲೋ॥ ಸುಧೂಪವಾಸಿತಂನಿತ್ಯಂಗೋಮಯೇನಾನುಲೇಪಿತಂ ।
ಸಮಿತ್ಪುಷ್ಪದಳೋಪೇತಂಕಂದಮೂಲಫಲಾನ್ವಿತಂ ॥೧೮॥

ಟೀ॥ ನಿತ್ಯಂ-ಅನವರತವೂ, ಸುಧೂಪವಾಸಿತಂ-ಒಳ್ಳೆತ್ತಾದಧೂಪದಿಂ ಪೊರೆಯಲ್ಪಟ್ಟಂಥ, ಗೋಮಯೇನ-ಶುದ್ಧಗೋಮಯದಿಂದ, ಅನುಲೇಪಿತಂ-ಸಾರಿಸಲ್ಪಟ್ಟಂಥ, ಸಮಿತ್ಪುಷ್ಪದಳೋಪೇತಂ-ಕಟ್ಟಿಗೆಗಳಿಂದವೂ ಪುಷ್ಪಗಳಿಂದವೂ ಪತ್ರಂಗಳಿಂದವೂ ಕೂಡಲ್ಪಟ್ಟಂಥ, ಕಂದಮೂಲಫಲಾನ್ವಿತಂ-ಗೆಣಸು ಬೇರು ಹಣ್ಣುಗಳೊಡನೆ ಕೂಡಲ್ಪಟ್ಟಂಥ. ॥೧೮॥

ಶ್ಲೋ॥ ಸಮಗ್ರಭಸ್ಮರುದ್ರಾಕ್ಷಕುಶಾಜಿನವಿಭೂಷಿತಂ ।
ಶುದ್ಧಾನ್ನಪಾನಸಂಪನ್ನಂಸರ್ವೌಷಧಸಮಾಶ್ರಯಂ ॥೧೯॥

ಟೀ॥ ಸಮಗ್ರಭಸ್ಮರುದ್ರಾಕ್ಷಕುಶಾಜಿನವಿಭೂಷಿತಂ-ಅಧಿಕವಾದ ವಿಭೂತಿ ರುದ್ರಾಕ್ಷಿ ದರ್ಭೆ ಕೃಷ್ಣಾಜಿನ ವ್ಯಾಘ್ರಾಜಿನವೆಂಬಿವರಿಂದಲಂಕೃತವಾದಂಥ, ಶುದ್ಧಾನ್ನಪಾನಸಂಪನ್ನಂ- ಪವಿತ್ರವಾದನ್ನಪಾನಂಗಳ ಸಮೃದ್ಧಿಯುಳ್ಳಂಥ, ಸರ್ವೌಷಧಸಮಾಶ್ರಯಂ - ಸಮಸ್ತೌಷಧಿಗಳಿಗಾಶ್ರಯವಾಗಿರ್ಪಂಥ, (ರಮ್ಯಂ- ಮನೋಹರವಾಗಿರ್ಪಂಥ, ಮಠಂ-ಯೋಗಗೃಹವನು, ಕುರ್ಯಾತ್-ಮಾಡುವುದೆಂದು ಪೂರ್ವಕ್ರಿಯಾಸಂಬಂಧವು. ॥೧೯॥

ಸೂ॥ ಈಪ್ರಕಾರವಾದ ಯೋಗಮಂಟಪವು ವಾನಪ್ರಸ್ಥಾದಿಗಳ್ಗೆ ಘಟಿಸದಾಗಿ, ಅವರ್ಗೆ ಯೋಗಾಭ್ಯಾಸಸ್ಥಾನಮಂ ಪೇಳ್ದಪಂ:—

ಶ್ಲೋ॥ ಸದಾಮನೋಹರಾಸ್ಪದಾವನೇನಿವಾಸಮೇತ್ಯವಾ ।
ಸದಾಶಿವಂಪ್ರಪೂಜಯೇದ್ಧೃದಿಸ್ಥಿತಂಸಮಾಹಿತಂ ॥೨೦॥

ಟೀ॥ ಸದಾ-ಶಿವಾಗಮ್ರೂ, ಮನೋಹರಾಸ್ಪದಂ-ಚಿತ್ತವಿಶ್ರಮಣಭೂಮಿಯಾಗಿರ್ಪಂಥ, ವನೇ-ವನದಲ್ಲಿನು, ನಿವಾಸಂವಾ-ಗುಹೆಮುಂತಾದ ನಿವಾತಸ್ಥಲವನಾದರೂ, ಏತ್ಯ-ಎಯ್ದಿ, ಹೃದಿ-ಹೃತ್ಕಮಲದಲ್ಲಿ, ಸ್ಥಿತಂ-ಇರಲ್ಪಟ್ಟಂಥ, ಸದಾಶಿವಂ-ಸಕಲನಿಷ್ಕ

ಲಾತ್ಮಕನಾದ ಶಿವನನು, ಸಮಾಹಿತಃ-ಏಕಾಗ್ರಚಿತ್ತನಾಗಿ, ಪ್ರಪೂಜಯೇತ್-ಪ್ರಕ
ದಿಂ ಪೂಜಿಪುದು. ||

ಸೂ|| ಪೂಜೆಗೆ ಅಭಿಷೇಕವೇ ಮುಂದಾದಕಾರಣ, ಆಧ್ಯಾನಪೂಜೆಗೆ ಸ್ನಾನ
ಯಂ ಪೇಳ್ದಪಂ: —

ಶ್ಲೋ|| ತದ್ಯಥಾಶೃಣುಹೇವಿದ್ವನ್ನಾದೌಕೇವಲಕುಂಭಕೇ ।
ಪ್ರಾಣಾಯಾಮಜಲೇನೈವಸ್ನಾಪಯೇಚ್ಚಿನ್ಮಯಂಶಿವಂ ||

ಟೀ|| ಹೇವಿದ್ವನ್-ಎಲೆವಿವೇಕಿಯಾದ ಶಿಷ್ಯನೆ, ತತ್-ಆಪೂಜಾವಿಧಾನವು,
ಥಾ-ಆವಪ್ರಕಾರವೆನಲು, ಶೃಣು-ಕೇಳು, ಆದೌ-ಮೊದಲಲ್ಲಿ, ಕೇವಲಕುಂಭಕೇ-ಕೆ
ಲಕುಂಭಕವೆಂಬ ಪೂರ್ಣಕುಂಭದಲ್ಲಿಯು, ಪ್ರಾಣಾಯಾಮಜಲೇನೈವ-ಮುಂದ
ಪ್ರಾಣಾಯಾಮವೆಂಬ ಮಂತ್ರೋದಕದಿಂದವೇ, ಚಿನ್ಮಯಂ-ಜ್ಞಾನರೂಪನಾದ, ಶಿ
ಶಿವನನು, ಸ್ನಾಪಯೇತ್-ಸ್ನಾನಮಂಮಾಡಿಪುದು. ||

ಸೂ|| ಆ ಪ್ರಾಣಾಯಾಮವು ಉತ್ತರೋತ್ತರ ವಿಶಿಷ್ಟತೆಯಿಂ ಮೂರುಪ್ರ
ರವೆಂದು ಪೇಳ್ದಪಂ:—

ಶ್ಲೋ|| ಪ್ರಾಣಾಯಾಮಸ್ತ್ರಿಧಾಪ್ರೋಕ್ತಃಪ್ರಾಕೃತೋವೈಕೃತಸ್ತ
ತಾಭ್ಯಾಂವಿನಾಜೃಂಭತೇಽಸೌಕೇವಲಃಕುಂಭಕಸ್ಸ್ವಯಂ

ಟೀ|| ಪ್ರಾಣಾಯಾಮಃ- ಪ್ರಾಣವಾಯುವಿನ ನಿರೋಧವು, ತ್ರಿಧಾ-ಮೂರು
ಕಾರವೆಂದು, ಪ್ರೋಕ್ತಃ-ಹೇಳಲ್ಪಟ್ಟಿತು. ಪ್ರಾಕೃತಃ-ಪ್ರಾಕೃತಪ್ರಾಣಾಯಾಮ
ದು, ತಥಾ-ಹಾಂಗೆ, ವೈಕೃತಃ-ವೈಕೃತಪ್ರಾಣಾಯಾಮವೆಂದು, ತಾಭ್ಯಾಂವಿನಾ-ಎ
ಡುಪ್ರಕಾರದಿಂ ಹೊರತಾಗಿ, ಅಸೌ-ಈಪೂರ್ವೋಕ್ತವಾದ, ಕೇವಲಕುಂಭಕಃ-ಕೆ
ಲಕುಂಭಕವು, ಸ್ವಯಂ-ತಾನೇ, ಜೃಂಭತೇ-ಪ್ರಕಾಶಿಸುತ್ತಿರ್ದುದು. (ತಾತ್ಪರ್ಯ
ಪ್ರಾಣವಾಯುವಿನ ವ್ಯಾಪಾರಾತ್ಮಕವಾದ ಪ್ರಾಣಾಯಾಮಕ್ಕೆ ವಾಮದಕ್ಷಿಣಭಾಗ
ಳಲ್ಲಿಯ ಚಂದ್ರಸೂರ್ಯನಾಡಿಗಳೇ ಆಧಾರವಪ್ಪುದರಿಂದಾ ನಾಡಿಗಳ ಸ್ವರೂಪಂಗಳಂ
ದೊಡೆ- ತೊಂಭತ್ತಾರಂಗುಲಪ್ರಮಾಣದ ದೇಹದೊಳ್ಪಾಯುಸ್ಥಾನದಿಂದಂಗುಲಿದ್ವಯ
ದಿಂ ಮೇಲೆ ಲಿಂಗಸ್ಥಾನದಿಂದಂಗುಲಿದ್ವಯದಿಂ ಕೆಳಗೆ ಮಧ್ಯಮಾದ ಏಕಾಂಗುಲ
ಮಾಣಸ್ಥಾನವೇ ದೇಹಮಧ್ಯವೆನಿಸುದು. ಆ ದೇಹಮಧ್ಯದಿಂ ಮೇಲೆ ನವಾಂಗುಲಪ್ರ
ಣದಲ್ಲಿ ಅಗಲದಿಂದುನ್ನತದಿಂ ಚತುರಂಗುಲಪ್ರಮಾಣವಾದ ಅಸ್ಥಿಚರ್ಮಂಗಳಿಂ ಕೂ
ತತ್ತಿಯಾಕಾರಮಪ್ಪಕಂದಮಿರ್ಪುದು. ಆಕಂದಮಧ್ಯವೇ ನಾಭಿಯೆನಿಪುದು.
ಕಂದದಿಂಪನ್ನೆರಡೆಸಳಿಂ ಕೂಡಿದ ಚಕ್ರಾಕಾರವಾದ ಕಮಲಂ ಪುಟ್ಟಿಲ್ಲ. ಕಮಲ
ಳಸಿವೆಂಟೆಸಳಿನಲ್ಲಿ ಜೀವಂ ತನ್ನಯ ಪ್ರಾರಬ್ಧಕರ್ಮಪರಿಪಾಕಾನುಸಾರದಿಂ ಲೋ

ತಂತುವುಯುವಾದ ತನ್ನ ಚಕ್ರದೊಳ್ತಿರುಗುವಂತೆ ಚರಿಸುತ್ತಿರ್ಪನಾಗಿ, ಆಕಂದವಂ ಬಳಸಿ, ಸುಪ್ತಸರ್ಪಾಕಾರವಾದ ಕುಂಡಲಿನೀಶಕ್ತಿಯೂನಾಭಿಕಂದ ದಧೋರಂಧ್ರದೊಳ್ತನ್ನ ಪೆಡೆಯುನಿಟ್ಟು ದೃಢವಾಗಿ ಬಂಧಿಸಿ, ಪಶ್ಚಿಮದ್ವಾರದ ವಾಯುವುಮಾರ್ಗವಂ ನಿಲಿಸಿ, ತನ್ನ ಪುಚ್ಛದಿಂ ಬ್ರಹ್ಮರಂಧ್ರಪರ್ಯಂತಂಪೊಕ್ಕು, ಪ್ರಕಾಶರೂಪದಿಂದಿರ್ಪುದಾಗಿ, ಆಕಂದದ ಪಲವು ತಾಣಂಗಳಲ್ಲಿವರ್ತಿಸುವ ಮೂವತ್ತೆರಡು ನಾಡಿಗಳೊಳಗೆ ಮಧ್ಯಸ್ಥಾನದ ಸುಷುಮ್ನಾನಾಡಿಯೇ ಬೆನ್ನೆಲುವಿನ ಮಧ್ಯದೊಳು ಬ್ರಹ್ಮರಂಧ್ರಾಂತಮಾಗಿರ್ಪುದು. ಅದರಲ್ಲಿ ದಕ್ಷಿಣನಾಸಾಪುಟಪರ್ಯಂತಮಾಗಿರ್ಪುದು ಪಿಂಗಳೆ. ಅದರೆಡದಲ್ಲಿ ವಾಮನಾಸಾಪುಟಾಂತಮಾಗಿರ್ಪುದು ಇಡೆ ಯೆನಿಪುದಾಗಿ, ಇವರೊಳ್ಚರಿಸುವ ಪ್ರಾಣವಾಯುವಿನ ಭೇದದಿಂ ಪ್ರಾಣಾಯಾಮವಂ ಮೂರುಪ್ರಕಾರವೆಂಬುದಭಿಪ್ರಾಯಂ.) ||೨೨||

ಸೂ || ಅನಂತರದಲ್ಲಿ ಮೊದಲ್ಪೇಳ್ದಪ್ರಾಕೃತಪ್ರಾಣಾಯಾಮದ ಲಕ್ಷಣವಂ ಪೇಳ್ದಪಂ:—

ಶ್ಲೋ|| ನಿಶ್ವಾಸೋಚ್ಛ್ವಾಸರೂಪೇಣರೇಚಕಪೂರಸ್ವಭಾವತಃ ।
ಪ್ರಾಣಾನಿಲೇವರ್ತಮಾನೇಪ್ರಾಕೃತಸ್ಸಉದೀರಿತಃ ||೨೩||

ನಿಶ್ವಾಸೋಚ್ಛ್ವಾಸರೂಪೇಣ-ನಿಶ್ವಾಸೋಚ್ಛ್ವಾಸರೂಪದಿಂದೆ, ರೇಚಪೂರಸ್ವಭಾವತಃ-ರೇಚಕಪೂರಕದ ಸ್ವಭಾವದದೆಸೆಯಿಂದ, ಪ್ರಾಣಾನಿಲೇ- ಹೃದಯಸ್ಥಾನದ ಪ್ರಾಣವಾಯುವು, ವರ್ತಮಾನೇಸತಿ- ವರ್ತಿಸುತ್ತಿರಲಾಗಿ, ಸಃ-ಅದು, ಪ್ರಾಕೃತಃ-ಪ್ರಾಕೃತಪ್ರಾಣಾಯಾಮವೆಂದು, ಉದೀರಿತಃ-ಹೇಳಲ್ಪಟ್ಟಿತು. ||೨೩||

ಸೂ|| ಅನಂತರದಲ್ಲಿ ವೈಕೃತಪ್ರಾಣಾಯಾಮದ ಲಕ್ಷಣವಂ ಪೇಳ್ದಪಂ:—

ಶ್ಲೋ|| ಆಗಮೋಕ್ತವಿಧಾನೇನರೇಚಪೂರಕಕುಂಭಕೈಃ ।
ಯದಿಪ್ರಾಣನಿರೋಧಶ್ಚೇದ್ವೈಕೃತಸ್ಸಉದೀರಿತಃ ||೨೪||

ಟೀ|| ಆಗಮೋಕ್ತವಿಧಾನೇನ-ಶಿವಾಗಮಂಗಳಲ್ಲಿ ಹೇಳಲ್ಪಟ್ಟ ವಿಧಿಯಿಂದೆ, ರೇಚಪೂರಕಕುಂಭಕೈಃ-ರೇಚಕಪೂರಕಕುಂಭಕಗಳಿಂದೆ, ಯದಿ-ಎತ್ತಲಾನು, ಪ್ರಾಣನಿರೋಧಶ್ಚೇತ್- ಪ್ರಾಣವಾಯುವಿನ ನಿರೋಧವಹುದೇ, ಸಃ-ಅದು, ವೈಕೃತಃ-ವೈಕೃತಪ್ರಾಣಾಯಾಮವೆಂದು, ಉದೀರಿತಃ-ಹೇಳಲ್ಪಟ್ಟಿತು. (ತಾತ್ಪರ್ಯ-ದೇಹಾಂತರ್ಗತವಾಯುವಂನಾಸಿಕದ್ವಾರದಿಂ, ಬಾಹ್ಯಕ್ಕೆಸೂಸುಪುದೇ ರೇಚಕ. ದೇಹದ ಬಾಹ್ಯಗತವಾದ ವಾಯುವನುದರಕ್ಕೆ ಪೂರಿಪುದು ಪೂರಕ. ಶ್ವಾಸೋಚ್ಛ್ವಾಸಂಗಳಿಲ್ಲದೆ ವಾಯುವು ನಿಶ್ಚಲವಾಗಿ ಪೂರ್ಣಕುಂಭದಂತಿರ್ಪುದೇ ಕುಂಭಕ. ಈ ಮೂರುಪ್ರಕಾರವಂ ಮಾಡಬೇಕಾದ ಯೋಗೀಶ್ವರನು ಶುಚಿರ್ಭೂತನಾಗಿ ಮೂಡಮುಖವಾಗಾಗಲಿ ಬಡಗಮುಖವಾಗಾಗಲಿ ಸ್ವಸ್ಥಾನದಲ್ಲಿ ನೇರಿತ್ತಾಗಿಕುಳಿತು, ದಂತಂಗಳಿಂ ದಂತಂಗಳಂಮುಟ್ಟದೆ, ಜಿಹ್ವೆಯಂ

ಚಲಿಸದೆ, ನಾಸಿಕಾಗ್ರದೃಷ್ಟಿಯಾಗಿ, ಮಂತ್ರಮಂ ಚರಿಸುತ್ತೆ, ಗುರುನಮಸ್ಕಾರ
ಮಾಡಿ, ಶಿವಧ್ಯಾನಮಂಮಾಡುತ್ತೆ, ಮೊದಲಲ್ಲಿ ಅಂಗುಲಿಯಿಂದೆ ಇಡಾನಾಡಿಯಂ
ದು, ಪಿಂಗಳಾನಾಡಿಯಿಂದೆ ದೇಹಗತವಾಯುವಂ ಹನ್ನೆರಡುಮಾತ್ರೆ ರೇಚಿಸಿ,
ಪಿಂಗಳಾನಾಡಿಯಂ ಬಲಿದು, ಇಡಾನಾಡಿಯಿಂ ಹನ್ನೆರಡು ಮಾತ್ರೆ ಪೂರಿಸಿ, ಹನ್ನೆ
ಮಾತ್ರೆ ಕುಂಭಿಸುವುದು. ಇದು ಕನಿಷ್ಠಪ್ರಾಣಾಯಾಮವೆನಿಸುವುದು. ಹನ್ನೆರ
ತ್ರೆಯಿಂ ಕೂಡಿ ಒಂದು ಉದ್ಘಾತವೆನಿಸುವುದು. ಈಪ್ರಕಾರದೆರಡು ಉದ್ಘಾತ
ಧ್ಯಮಪ್ರಾಣಾಯಾಮವೆನಿಸುವುದು. ಇದು ಇಪ್ಪತ್ತನಾಲ್ಕುಮಾತ್ರೆಯುಕ್ತಂ.
ರು ಉದ್ಘಾತವೇ ಉತ್ತಮಪ್ರಾಣಾಯಾಮವು, ಇದು ಮೂವತ್ತಾರು ಮಾತ್ರೆಯು
ವುದು. ಶೀಘ್ರವಲ್ಲದೆ ವಿಳಂಬವಲ್ಲದೆ ಜಾನುಪ್ರದಕ್ಷಿಣಮಂ ಮಾಡಿ ಅಂಗುಲಿಸ್ಫೋ
ಟಮಂ ಮಾಳ್ಪುದೇ ಮಾತ್ರೆಯೆನಿಪ್ಪುದು. ಉದ್ಘಾತಕ್ರಮದಿಂ ಸೂರ್ಯನಾಡಿಯಿಂ
ಸಿ, ಅನಂತರದಲ್ಲಿ ಕುಂಭಿಸಿ, ಚಂದ್ರನಾಡಿಯಿಂ ಮೆಲ್ಲನೆ ರೇಚಿಪ್ಪುದು. ಧ್ಯಾನ
ವಾಗಿ ಮಾಳ್ಪ ಪ್ರಾಣಾಯಾಮವು ಮಧ್ಯಮವೆನಿಸುವುದು. ಧ್ಯಾನಸಹಿತವಾಗಿ ಮಾ
ದೇ ಉತ್ತಮವೆನಿಸುವುದು. ಪ್ರಾಣಾಯಾಮಾಭ್ಯಾಸದಿಂ ಸ್ವೇದಂ ಪುಟ್ಟಲಧಮ
ಪುದು. ಕಂಪನಂಪುಟ್ಟಲ್ಮಧ್ಯಮವೆನಿಪುದು. ದೇಹಮುನ್ನತಕ್ಕೇಳಲುತ್ತ
ಣಾಯಾಮವೆನಿಸುವುದು. ಈಪ್ರಕಾರದಿಂಚತುರ್ಮಾಸಪರ್ಯಂತಂ ತ್ರಿಕಾಲದಲ್ಲಿ
ಣಾಯಾಮಾಭ್ಯಾಸಮಂ ಮಾಳ್ಪುದು. ಅಜೀರ್ಣ ಉದ್ಗಾರ ಮೂತ್ರದೋಷ
ತಿಸಾರ ಅತಿಭೋಜನ ಅತಿಕ್ಷುತ್ಪಿಪಾಸೆ ಗುರುಸೇವಾಸಮಯ ಮುಂತಾದ ಕಾ
ಲ್ಲಿ ಪ್ರಾಣಾಯಾಮಮಂ ಮಾಡಲಾಗದು. ಈಪ್ರಕಾರದಿಂ ಪ್ರಾಣಾಯಾಮಾಭ್ಯಾಸ
ಮಾಳ್ಪುದು ವೈಕೃತಪ್ರಾಣಾಯಾಮವೆಂಬುದಭಿಪ್ರಾಯಂ.)

ಸೂ॥ ಅನಂತರದಲ್ಲಿ ಕೇವಲಕುಂಭಕದ ಲಕ್ಷಣಮಂ ಪೇಳ್ದಪಂ:—

ಶ್ಲೋ॥ ಪ್ರಾಕೃತಂವೈಕೃತಂಚೇತಿದ್ವಯಮೇತನ್ಮಹಾತ್ಮನಾ ।
ಕ್ಷಣಾತ್ಸಂಸ್ತಂಭಯೇದ್ಯಸ್ತು ಸಹಿಕೇವಲಕುಂಭಕಃ ॥

ಟೀ॥ ಯಃ-ಆವುದಾನೊಂದುಪ್ರಾಣಾಯಾಮವು, ಪ್ರಾಕೃತಂವೈಕೃತಂ
ಪ್ರಾಕೃತವೈಕೃತವೆಂಬ, ಏತದ್ದ್ವಯಂ-ಈಎರಡು ಪ್ರಾಣಾಯಾಮವನು, ಮ
ನಾ-ಉಪದೇಶಸಿದ್ಧನಾದ ಮಹಾಪುರುಷಂಗೆ, ಕ್ಷಣಾತ್-ಒಂದುಕ್ಷಣಮಾತ್ರದವ
ದೆ, ಸಂಸ್ತಂಭಯೇತ್-ತಡೆವುದೋ, ಸಃ-ಆಪ್ರಾಣಾಯಾಮವು, ಕೇವಲಕುಂಭಕ
ವಲಕುಂಭಕವೆಂದು, ಹಿ-ಪ್ರಸಿದ್ಧವಲಾ.

ಸೂ॥ ಈ ಪ್ರಾಣಾಯಾಮಭೇದದಿಂ ಯೋಗವು ನಾಲ್ಕುಪ್ರಕಾರವಾಯಿತ
ಪೇಳ್ದಪಂ:—

ಶ್ಲೋ॥ ಪ್ರಾಕೃತೋಽಮಂತ್ರಯೋಗಸ್ಸ್ಯಾದ್ವೈಕೃತೋಽಲಯಏವಹಿ।
ಹಠಃಕೇವಲಕುಂಭಾಖ್ಯೋರಾಜಯೋಗೋಽಮನಾಸ್ಮೃತಃ॥

ಟೀ॥ ಪ್ರಾಕೃತಃ- ಹಂಸರೂಪದಿಂಚರಿಸುವ ಪ್ರಾಕೃತಪ್ರಾಣಾಯಾಮವೇ, ಮಂತ್ರಃ- ಮಂತ್ರಯೋಗವು, ಸ್ಯಾತ್-ಅಹುದು. ವೈಕೃತಏವ-ಸೋಽಹಂಎಂದು ಚರಿಸುವ ವೈಕೃತಪ್ರಾಣಾಯಾಮವೆ, ಲಯಃ-ಲಯಯೋಗವಪ್ಪುದೆಂದು, ಹಿ ಪ್ರಸಿದ್ಧವಲಾ, ಕೇವಲಕುಂಭಾಖ್ಯಃ-ಕೇವಲಕುಂಭಕವೆಂಬ ಪ್ರಾಣಾಯಾಮವು, ಹಠಃ-ಹಠಯೋಗವಪ್ಪುದು. ಅಮನಾಃ-ಅಮನಸ್ಕವು, ರಾಜಯೋಗಃ-ರಾಜಯೋಗವೆಂದು, ಸ್ಮೃತಃ-ನೆನೆಯಲ್ಪಟ್ಟಿತು. ॥೩೬॥

ಸೂ॥ ಪ್ರಾಕೃತಾದಿ ಪ್ರಾಣಾಯಾಮಂಗಳು ಉತ್ತರೋತ್ತರ ವಿಶಿಷ್ಟತೆಯಿಂ ಮಂತ್ರಾದಿ ಯೋಗಂಗಳಾದುವಕ್ಕೆ ಕಾರಣಂಗಳಂ ಪೇಳ್ದಪಂ—

ಶ್ಲೋ॥ ಪ್ರಥಮಸ್ತ್ವಜಪಾಯೋಗೋನಾದೇವಾಯೋರ್ಲಯಸ್ತತಃ।
ಮನಸ್ಸ್ಥಿರಸ್ತತಃಪಶ್ಚಾದ್ವೃತ್ತಿಶೂನ್ಯಶ್ಚತುರ್ಥಕಃ ॥೩೭॥

ಟೀ॥ ಪ್ರಥಮಸ್ತು-ಮೊದಲಪ್ರಾಣಾಯಾಮವಾದೊಡೆ, ಅಜಪಾಯೋಗಃ ಗುರೂಪದೇಶದಿಂ ಹಂಸವರ್ಣದ್ವಯಾತ್ಮಕವಾದ ಅಜಪಾಮಂತ್ರಯೋಗವಪ್ಪುದು, ತತಃ-ಆಅಜಪಾಮಂತ್ರಯೋಗದ ದೆಸೆಯಿಂದ, ನಾದೇ-ಆವರ್ಣದ್ವಯಾತ್ಮಕವಳಿದುಳಿದ ನಾದದಲ್ಲಿ, ವಾಯೋಃ-ಪ್ರಾಣವಾಯುವಿನ, ಲಯಃ-ಲಯವಪ್ಪುದು. ತತಃ-ಆಲಯಯೋಗದದೆಸೆಯಿಂದ, ಮನಸ್ಥಿರಃ--ಕೇವಲಕುಂಭಕದಿಂ ಮನಸ್ಥಿರವಪ್ಪುದು: ಪಶ್ಚಾತ್-ಅನಂತರದಲ್ಲಿ, ವೃತ್ತಿಶೂನ್ಯಃ-ಮನೋವ್ಯಾಪಾರದಿಂ ತೊಲಗಿದಂಥ, ಚತುರ್ಥಕಃ-ನಾಲ್ಕನೆಯದಾದ ಅಮನಸ್ಕವಪ್ಪುದು. ॥೩೭॥

ಸೂ॥ ಅದು ನಿಮಿತ್ತದಿಂ ಯೋಗೀಶ್ವರಂಗೆ ಪ್ರಾಣಾಯಾಮಾಭ್ಯಾಸವೇ ಮುಖ್ಯವೆಂದು ಪೇಳ್ದಪಂ—

ಶ್ಲೋ॥ ಪ್ರಾಣವಾಯೋರ್ನಿರೋಧೇನಲಭತೇತಚ್ಚತುಷ್ಟಯಂ।
ತಸ್ಮಾದಭ್ಯಾಸಶೂರಸ್ತ್ವಂಪ್ರಾಣಾಯಾಮಪರೋಭವ॥೩೮

ಟೀ॥ ಪ್ರಾಣವಾಯೋಃ-ಪ್ರಾಣವಾಯುವಿನ, ನಿರೋಧೇನ-ತಡೆವುದರಿಂದ, ತಚ್ಚತುಷ್ಟಯಂ-ಆನಾಲ್ಕುತೆರದ ಯೋಗವನು, ಲಭತೇ-ಪಡೆವುತ್ತಿರ್ಪನು. ತಸ್ಮಾತ್-ಅದುನಿಮಿತ್ತವಾಗಿ, ಅಭ್ಯಾಸಶೂರಃ-ಯೋಗಾಭ್ಯಾಸದಲ್ಲಿ ಸಮರ್ಥನಾಗಿರ್ಪಂಥ, ತ್ವಂ-ನೀನು, ಪ್ರಾಣಾಯಾಮಪರಃ-ಪ್ರಾಣಾಯಾಮದಲ್ಲಿ ತಾತ್ಪರ್ಯವುಳ್ಳಾತನು, ಭವ-ಆಗು. ॥೩೮॥

ಸೂ॥ ಅನಂತರದಲ್ಲಿ ಪ್ರಾಕೃತಪ್ರಾಣಾಯಾಮದಲ್ಲಿಯ ಅಜಪಾಮಂತ್ರದ
ಗದ ಸ್ವರೂಪವಮಂ ವ್ಯಕ್ತವಾಗಿ ಪೇಳ್ದಪಂ—

ಶ್ಲೋ॥ ಸಕಾರಾಂತಮಿದಂಬೀಜಂಬಹಿರ್ಯಾತಿಸಬಿಂದುಕಂ ।
ಸವಿಸರ್ಗಂಷಕಾರಾಂತಂತದ್ಬೀಜಂಪ್ರವಿಶತ್ಯಧಃ ॥

ಟೀ॥ ಸಕಾರಾಂತಂ-ಸಕಾರಕ್ಕೆಕಡೆಯಾಗಿರ್ಪಂಥ, ಇದಂಬೀಜಂ-ಈಹಕಾ
ವೆಂಬ ಮಂತ್ರಬೀಜವು, ಸಬಿಂದುಕಂ--ಬಿಂದುಸಮೇತವಾಗಿ, ಬಹಿಃ-ಹೊರಗ
ಯಾತಿ-ಪ್ರಾಣವಾಯುವಿನ ರೇಚಕವದೊಡನೆ ಎಯ್ದುತ್ತಿದ್ದೀತು. ಸವಿಸರ್ಗಂ-ವಿಸ
ದೊಡನೆ ಕೂಡಿರ್ಪಂಥ, ಷಕಾರಾಂತಂ-ಷಕಾರಕ್ಕೆಕಡೆಯಾಗಿರ್ಪಂಥ, ತದ್ಬೀಜ
ಅಪ್ರಸಿದ್ಧವಾದ ಸಕಾರವೆಂಬ ಮಂತ್ರಬೀಜವು, ಅಧಃ-ಪೂರಕದೊಡನೆಕೂಡಿ ಒ
ನು, ಪ್ರವಿಶತಿ-ಪ್ರವೇಶಿಸುತ್ತಿದ್ದೀತು ॥

ಸೂ॥ ಈಮಂತ್ರವರ್ಣದ್ವಯವು ಸಕಲಪ್ರಾಣಿಗಳ ಪ್ರಾಣದಕೂಡ ಸದಾ
ಬಂಧವಾಗಿರ್ಪುದೆಂದು ಪೇಳ್ದಪಂ—

ಶ್ಲೋ॥ ಪ್ರಾಣಾನಿಲಶ್ಚಸರ್ವೇಷಾಂಪ್ರವರ್ತಕನಿವರ್ತಕಃ ।
ಏವಂಜೀವಜಪೋನಾಮಗಾಯತ್ರೀಜಪತೇಽನ್ವಹಂ ॥

ಟೀ॥ ಸರ್ವೇಷಾಂ-ಸಕಲಪ್ರಾಣಿಗಳ್ಗೆ, ಪ್ರವರ್ತಕನಿವರ್ತಕಃ- ಇಷ್ಟದಲ್ಲಿ
ಪ್ರವೃತ್ತಿಅನಿಷ್ಟದಲ್ಲಿಯ ನಿವೃತ್ತಿಯುಂಮಾಡುವಂಥ, ಪ್ರಾಣಾನಿಲಶ್ಚ– ಜೀವನ
ಕಾರದಿಂದೆ ಆತ್ಮಚೈತನ್ಯವೊಡಗೂಡಿದ ಪ್ರಾಣವಾಯುವೂ, ಜೀವಜಪೋನಾ
ಜೀವಜಪವೆನಿಸುವ, ಗಾಯತ್ರೀ-ಗಾಯತ್ರಿಯಊಕೂಡಿ, ಏವಂ-ಪೂರ್ವೋಕ್ತಪ್ರ
ರದಿಂದೆ, ಅನ್ವಹಂ-ಜಾಗ್ರತ್ಸ್ವಪ್ನಾದ್ಯವಸ್ಥೆಗಳಲ್ಲಿ ಅನವರತವೂ, ಜಪತೇ-ಹಂಸಃ
ಎಂದು ಜಪಿಸುತ್ತಿರ್ಪುದು ॥

ಸೂ॥ ಅನಂತರದಲ್ಲಿ ಈ ಅಜಪಾಗಾಯತ್ರಿಯ ಜಪದ ಸಂಖ್ಯಾಪ್ರಮಾಣ
ಪೇಳ್ದಪಂ—

ಶ್ಲೋ॥ ಏಕವಿಂಶತಿಸಹಸ್ರಸಂಖ್ಯಯಾ ಷಟ್ಛತಾಧಿಕಮಹರ್ನಿಶಂ
ನರಃ । ಶ್ರೀಗುರೂಕ್ತವಿಧಿನಾಽರುಣೋದಯೇಸಂಸ್ಮರನ್ಸ
ಹತಿತಜ್ಜಪೇಫಲಂ ॥

ಟೀ॥ ನರಃ-ಮಂತ್ರಯೋಗೋಪದೇಶವಂ ಪಡೆದ ಪುರುಷನು, ಅಹರ್ನಿಶಂ
ವಾರಾತ್ರಿಯೂ, ಷಟ್ಛತಾಧಿಕಂ-ಆರುನೂರಧಿಕವಾಗಿ,ಏಕವಿಂಶತಿಸಹಸ್ರಸಂಖ್ಯ
ಇಪ್ಪತ್ತೊಂದುಸಾವಿರದಿಂದ, ಶ್ರೀಗುರೂಕ್ತವಿಧಿನಾ- ಶ್ರೀಗುರೂಪದೇಶವಿಧಿಯ
ಅರುಣೋದಯೇ-ಸೂರ್ಯೋದಯದಲ್ಲಿ, ಸಂಸ್ಮರನ್- ಅನುಸಂಧಾನದಿಂ ಸ್ಮರಿಸು

ನಾಗುತವೂ, ತಜ್ಜಪೇ-ಆ ಅಜಪಾಮಂತ್ರದಲ್ಲಿಯು, ಫಲಂ-ಆನಂದಸಿದ್ಧಿ ಮುಂತಾದ ಫಲವನು, ವಹತಿ-ಎಯ್ದುತ್ತಿರ್ಪನು ॥೩೧॥

ಸೂ॥ ಅನಂತರದಲ್ಲಿ ಈಮಂತ್ರಯೋಗದಿಂದಪ್ಪ ಫಲಮಂ ಪೇಳ್ದಪಂ—

ಶ್ಲೋ॥ ಅಜಪಾನಾಮಸಂಕಲ್ಪ್ಯನರಃಪಾಪೈಃಪ್ರಮುಚ್ಯತೇ ।
ಶಿವಯೋಗಮವಾಪ್ನೋತಿಶೀಘ್ರಮೇವನಸಂಶಯಃ ॥೩೨॥

ಟೀ॥ ನರಃ-ಯೋಗಿಯಾದಪುರುಷನು, ಅಜಪಾನಾಮ-ಹಂಸ ಎಂಬ ಅಜಪಾನಾಮವನು, ಸಂಕಲ್ಪ್ಯ-ಸ್ಮರಿಸಿ, ಪಾಪೈಃ-ಸಕಲಪಾಪಂಗಳಿಂದೆ, ಪ್ರಮುಚ್ಯತೆ-ವಿಶೇಷವಾಗಿಬಿಡಲ್ಪಡುತ್ತಿರ್ಪನ್, ಶಿವಯೋಗಂ-ಶಿವಯೋಗವನು, ಶೀಘ್ರಮೇವ-ಶೀಘ್ರದಲ್ಲಿಯೇ, ಅವಾಪ್ನೋತಿ-ಪಡೆವುತ್ತಿರ್ಪನು, ಸಂಶಯಃ-ಸಂದೇಹವು, ನ-ಇಲ್ಲ. ॥೩೨॥

ಸೂ॥ ಮಂತ್ರಯೋಗಾನಂತರದಲ್ಲಿಯು ಲಯಯೋಗದ ಸ್ವರೂಪಮಂ ಪೇಳ್ದಪಂ —

ಶ್ಲೋ॥ ಅಜಪಾನಾಮಗಾಯತ್ರೀಮಂತ್ರವರ್ಣದ್ವಯಂಯದಾ ।
ತ್ರಿವೇಣೀಸಂಗಮೇಲೀನಂಸಶಬ್ದಃಪ್ರಣವೋಭವೇತ್ ॥೩೩॥

ಟೀ॥ ಅಜಪಾನಾಮಗಾಯತ್ರೀಮಂತ್ರವರ್ಣದ್ವಯಂ- ಅಜಪೆಯೆಂದುಪ್ರಸಿದ್ಧವಾದ ಗಾಯತ್ರೀಮಂತ್ರದ, "ಹಂಸ" ಎಂಬಕ್ಷರಂಗಳೆರಡು, ಯದಾ-ಆವಕಾಲದಲ್ಲಿ, ತ್ರಿವೇಣೀಸಂಗಮೇ-ತ್ರಿವೇಣೀಸಂಗಮವೆನಿಸುವಭ್ರೂಮಧ್ಯಸ್ಥಾನದಲ್ಲಿ, ಲೀನಂ-ವರ್ಣಾಕಾರವಳಿದಿರ್ಪುದೋ, ತದಾ-ಆ ಕಾಲದಲ್ಲಿ, ಸಶಬ್ದಃ-ಆಮಂತ್ರಶಬ್ದವೇ, ಪ್ರಣವಃ-ನಾದಾತ್ಮಕವಾದ ಓಂಕಾರವು, ಭವೇತ್-ಅಹುದು, (ನಿವೃತ್ತಿಮುಖದಿಂ ಕಾರ್ಯರೂಪವಳಿದು, ಕಾರಣರೂಪವಪ್ಪುದಾಗಿ "ಸೋಹಂ" ಎಂಬ ವರ್ಣದ್ವಯದಲ್ಲಿ "ಸ್ ಹ್" ಎಂಬೆರಡೂ ಅಳಿಯಲಾಗಿ, ಓಂಕಾರವೇ ಉಳಿವುದೆಂಬುದರ್ಥಂ.) ॥೩೩॥

ಶ್ಲೋ॥ ಸೋಹಂಕೃತ್ವಾಚಿತ್ರಮಂತ್ರಂಸ್ವಪದಪರಪದಂವ್ಯಕ್ತವರ್ಣ
ದ್ವಯಂತದ್ವ್ಯಾಲುಂಪೇದ್ವ್ಯಂಜನೇದ್ವೇ ಪುನರಪಿರಚ
ಯೇದ್ದಿವ್ಯಮೋಂಕಾರಮಂತ್ರಂ । ಕೃತ್ವಾಚಿನುಸ್ವಾರ
ಯುಕ್ತಂಸಕಲಮನುವರಂಬ್ರಹ್ಮನಾಡೀಂನಯೇದ್ಯಃ ಪೂ
ರ್ಣಾನಂದಸ್ಸಕುಂಡಲ್ಯನುಭವವಿಕಲಃಕರ್ಮಣೋಮುಕ್ತಿ
ಮೇತಿ ॥೩೪॥

ಟೀ॥ ಯಃ-ಮುಮುಕ್ಷುವಾದ ಯೋಗೀಶ್ವರನಾದ ಆವನಾನೊರ್ವನು, ಸ್ವಪದಪರಪದಂ-ಸ್ವಪದ-ಪ್ರಾಕೃತಪ್ರಾಣಾಯಾಮರೂಪದಿಂದ್ಧಾತ್ಮವಾಚಕವಾಗಿ ರೇಚಕದ

ಲ್ಲಿ ಚರಿಸುವ ಸಕಾರವುಳ್ಳಂಥ, ಪರಪದಂ-ಪರಮಾತ್ಮವಾಚಕವಾಗಿ ಪೂರಕದಲ್ಲಿ ರಿಸುವ ಹಕಾರವುಳ್ಳಂಥ, ವ್ಯಕ್ತವರ್ಣದ್ವಯಂ-ಸಕಲಜೀವರುಗಳ ಪ್ರಾಣವಾಯುವಿ ಲ್ಲಿ ವ್ಯಕ್ತವಾದ ಅಕ್ಷರದ್ವಯವುಳ್ಳಂಥ, ತತ್-ಆಪ್ರಸಿದ್ಧವಾಗಿರ್ಪಂಥ, ಆತ್ಮಮಂತ್ರ ಹಂಸಮಂತ್ರವನು, ಸೋಽಹಾಕೃತ್ವಾ-ಗುರೂಪದೇಶದಿಂ ಸೋಽಹವೆಂದು ವ್ಯಕ್ತ ಸಾಯುಮರೂಪವಂಮಾಡಿ, ದ್ವೇ-ಎರಡಾಗಿರ್ಪಂಥ, ವ್ಯಂಜನೇ-ಸಕಾರ ಹಕಾರ ಬವ್ಯಂಜನಗಳನು, ವ್ಯಾಲುಂಪೇತ್-ಲೋಪವಂಮಾಡುವುದು. ಪುನರಪಿ-ಮರಳಿ ನುಸ್ವಾರಯುಕ್ತಂ-ಬಿಂದುವಿನೊಡನೆ ಕೂಡಿರ್ಪಂತಹುದನ್ನಾಗಿ, ಕೃತ್ವಾ-ಮಾ ದಿವ್ಯಂ-ಜ್ಯೋತಿರ್ಮಯವಾಗಿರ್ಪಂಥ, ಓಂಕಾರಮಂತ್ರಂ-ಓಂಕಾರವೆಂಬ ಮಂತ್ರ ಸು, ರಚಯೇತ್-ಮಾಡುವುದು. ಸಕಲಮನುವರಂ-ಸಕಲಮಂತ್ರಂಗಳಿಗೆ ಶಿರೋ ತ್ನವಾದ ಆಪ್ರಣವವನು, ಬ್ರಹ್ಮನಾಡೀಂ-ಭ್ರೂಮಧ್ಯಸ್ಥಾನದ ಸುಷುಮ್ನೆಯೆಂಬ ಡಿಯನು, ನಯೇತ್-ಎಯ್ದಿಸುವನೋ, ಸಃ-ಆತನು, ಪೂರ್ಣಾನಂದಃ-ಅಖಂಡಾ ನಂದಸ್ವರೂಪನಾಗಿ, ಕುಂಡಲ್ಯನುಭವಪಿಕಲಃ-ಬೈಂದವಾನಂದಕ್ಕೆ ವಿಲಕ್ಷಣನಾಗಿ, ರ್ಮಣಃ-ಕರ್ಮಾದಿಪಾಶದವೆಸೆಯಿಂದ, ಮುಕ್ತಿಂ-ಬಿಡುಗಡೆಯೆನಿಸುವ ಮೋಕ್ಷವ ಯಾತಿ-ಎಯ್ದುತ್ತಿಹನು. ॥

ಸೂ॥ ಅನಂತರದಲ್ಲಿ ಹಂಸವರ್ಣದ್ವಯವಳಿದು ಪ್ರಣವರೂಪವಾಗುವ ಹೃದಯಕ್ಕೆ ತ್ರಿವೇಣೀಸಾಮವಾದ ಪ್ರಕಾರಮಂ ಪೇಳ್ವಪಂ—.

ಶ್ಲೋ॥ ಇಡಾಸ್ಮೃತೇಂದುರಿತಿ ಸೂರ್ಯಸುತೇತಿಯೋಗಾತ್ಸಾ ಪಿಂಗ
ಲೇನ ಇತಿ ವಿಷ್ಣುಪದೀತಿ ತಾಸಾಂ ।ಸಾಮಧ್ಯಮಾಗ್ನಿರಿತಿ
ಯೋನಿರಿತಿ ತ್ರಿವೇಣೀಯೋಗಸ್ಥಲಂ ತದಿದಮೇವ ಭವೇ
ತ್ತ್ರಿಕೂಟಂ ॥

ಟೀ॥ ಇಡಾ-ವಾಮಭಾಗದ ಇಡಾನಾಡಿಯೇ,ಇಂದುರಿತಿ-ಚಂದ್ರನಾಡಿಯೆಂದು ಸೂರ್ಯಸುತೇತಿ-ಯಮುನಾನದಿಯೆಂದು, ಸ್ಮೃತಾ-ನೆನೆಯಲ್ಪಟ್ಟಿತು. ಸಾಪಿಂಗಳಾ ಆದಕ್ಷಿಣಭಾಗದ ಪಿಂಗಳಾನಾಡಿಯು, ಇನಇತಿ-ಸೂರ್ಯನಾಡಿಯೆಂದು, ವಿಷ್ಣುಪದೀ ಗಂಗಾನದಿಯೆಂದು, ಸ್ಮೃತಾ-ನೆನೆಯಲ್ಪಟ್ಟಿತು. ಸಾಮಧ್ಯಮಾ-ಆಸುಷುಮ್ನೆ ಬ ಮಧ್ಯನಾಡಿಯೇ, ಅಗ್ನಿರಿತಿ-ಅಗ್ನಿಯೆಂದು, ಯೋನಿರಿತಿ-ಉತ್ಪತ್ತಿ ಕಾರಣವ ಸರಸ್ವತೀನದಿಯೆಂದು, ಸ್ಮೃತಾ-ನೆನೆಯಲ್ಪಟ್ಟಿತು. ತಾಸಾಂ-ಆನಾಡಿಗಳ, ಯೋ ತ್-ಸಂಬಂಧವದೆಸೆಯಿಂದ, ತ್ರಿವೇಣೀಯೋಗಸ್ಥಲಂ-ತ್ರಿವೇಣೀಯೋಗವೆಂಬ ಸ್ಥ ಭವೇತ್-ಅಹುದು. ತದಿದಮೇವ-ಆ ಈ ಸ್ಥಲವೇ, ತ್ರಿಕೂಟಂ-ತ್ರಿಕೂಟವೆ ಸಂಜ್ಞೆಯುಳ್ಳಂತಹುದು, ಭವೇತ್-ಅಹುದು. ॥

ಸೂ॥ ಶಿವಧ್ಯಾನಕ್ಕೆ ರಹಸ್ಯವಾದೀ ತ್ರಿಕೂಟಸ್ಥಾನಕ್ಕೆ ಅನ್ವರ್ಥದಿಂ ಸಲ್ವ ನಾಮಾಂತರಂಗಳಂ ಪೇಳ್ದಪಂ—

ಶ್ಲೋ॥ ಶಬ್ದದ್ವಾರೇಗತೇಯತ್ರ ಗಂಧದ್ವಾರೇತಥೈವಚ ।
ಸಮಾಯೋಗೇಚತುಃಪೀಠಂ ಶೃಂಗಾಟಕಸುಸಂಜ್ಞಿತಂ॥೩೬॥

ಟೀ॥ ಯತ್ರ-ಆವುದಾನೊಂದು ತ್ರಿಕೂಟಸ್ಥಾನದಲ್ಲಿ, ಶಬ್ದದ್ವಾರೇ-ಶಬ್ದಗ್ರಾಹಕಂಗಳಾದ ಶ್ರೋತ್ರದ್ವಾರಂಗಳೆರಡು, ಗತೇ-ಎಯ್ದಲ್ಪಟ್ಟುವೋ, ತಥೈವಚ-ಹಾಂಗೆಯೇ, ಗಂಧದ್ವಾರೇ-ಗಂಧಗ್ರಾಹಕಂಗಳಾದ ನಾಸಿಕಾದ್ವಾರಂಗಳೆರಡು,ಗತೇ-ಎಯ್ದಲ್ಪಟ್ಟುವೋ, ಸಮಾಯೋಗೇ-ಈನಾಲ್ಕುದ್ವಾರಂಗಳ ಕೂಟದ ಭ್ರೂಮಧ್ಯಸ್ಥಾನದಲ್ಲಿಯು, ಚತುಃಪೀಠಂ-ಚತುಃಪೀಠವು, ಶೃಂಗಾಟಕಸುಸಂಜ್ಞಿತಂ-ಶೃಂಗಾಟಕವೆಂದುಲೇಸಾಗಿ ಹೆಸರಿಡಲ್ಪಟ್ಟಂತಹುದು. ॥೩೬॥

ಸೂ॥ ಯೋಗೀಶ್ವರರಿಂ ಪೇಳ್ದ ನಾಮಂಗಳ್ಭಿನ್ನವಾದರೂ ಸ್ಥಾನವೊಂದೇಯೆಂದು ಪೇಳ್ದಪಂ —

ಶ್ಲೋ॥ ತಸ್ಮಾತ್ತ್ರಿಕೂಟನಾಮಾಪಿ ತ್ರಿವೇಣೀಸಂಗಮಸ್ಥಲಂ ।
ಶೃಂಗಾಟಕಚತುಃಪೀಠನಾಮನ್ಯೇಕಸ್ಥಲಸ್ಯಹಿ ॥೩೭॥

ಟೀ॥ ತಸ್ಮಾತ್-ಹಿಂದೆ ಹೇಳಿದಕಾರಣಗಳಿಂದೆ, ತ್ರಿಕೂಟನಾಮಾಪಿ-ತ್ರಿಕೂಟವೆಂಬಹೆಸರೂ, ತ್ರಿವೇಣೀಸಂಗಮಸ್ಥಲಂ-ತ್ರಿವೇಣೀಸಂಗಮಸ್ಥಲವೆಂಬ ಹೆಸರೂ, ಶೃಂಗಾಟಕಚತುಃಪೀಠನಾಮನೀ-ಶೃಂಗಾಟಕ ಚತುಃಪೀಠವೆಂಬ ಹೆಸರುಗಳೂ, ಏಕಸ್ಥಲಸ್ಯ-ಭ್ರೂಮಧ್ಯವೆಂಬೊಂದು ಸ್ಥಲಕ್ಕೇ ವರ್ತಿಸುವುವೆಂದು, ಹಿ-ಪ್ರಸಿದ್ಧವಲ್ಲಾ ॥೩೭॥

ಸೂ॥ ವಾಯುವಿಂಗಾಕಾಶವೇ ಲಯಸ್ಥಾನವಪ್ಪುದರಿಂ ಶಬ್ದಕ್ಕೆ ಸುಷುಮ್ನೆಯೇ ಲಯಭೂಮಿಯಪ್ಪುದರಿಂದೀ ತ್ರಿಕೂಟಸ್ಥಾನದಲ್ಲಿ ಮನೋಮಾರುತಂಗಳನ್ನು ಎಯ್ದಿಸಿ, ಯೋಗಮಂ ಸಾಧಿಪುದೆಂದು ಪೇಳ್ದಪಂ—

ಶ್ಲೋ॥ ಉಚ್ಛ್ವಾಸನಿಶ್ವಾಸಕೃತಾಽಸುವಾಯುನಾತ್ರಿಕೂಟದೇಶೇ
ಮನಸಾಸಹಾಂಗ । ಸ್ಥಿತ್ವಾಸುಷುಮ್ನಾಖ್ಯತದೂರ್ಧ್ವನಾ
ಸಿಕಾತ್ರಿಕೋಣಮಾರ್ಗೇಗಮನಂಕುರುಷ್ವ ॥೩೮॥

ಟೀ॥ ಅಂಗ-ಎಲೆಶಿಷ್ಯನೆ, ಉಚ್ಛ್ವಾಸನಿಶ್ವಾಸಕೃತಾ-ರೇಚಕಪೂರಕಂಗಳಂ ಮಾಡುತ್ತಿರ್ಪಂಥ, ಅಸುವಾಯುನಾ-ಮಂತ್ರಸಂಸ್ಕಾರವಾದ ಪ್ರಾಣವಾಯುವಿನಿಂದ ಮನಸಾಸಹ-ವಿಷಯವಿಮುಖವಾದ ಮನಸ್ಸಿನೊಡನೆ ಕೂಡಿ. ತ್ರಿಕೂಟದೇಶೇ-ತ್ರಿಕೂಟಸ್ಥಾನದಲ್ಲಿ, ಸ್ಥಿತ್ವಾ-ಇರ್ದು, ಸುಷುಮ್ನಾಖ್ಯತದೂರ್ಧ್ವನಾಸಿಕಾತ್ರಿಕೋಣ

ಮಾರ್ಗೇ-ಸುಷುಮ್ನೆಯೆಂಬ ಹೆಸರುಳ್ಳ ಪ್ರಸಿದ್ಧವಾದ ನಾಸಿಕೋರ್ಧ್ವದ ತ್ರಿಕೋ ಮಾರ್ಗದಲ್ಲಿ, ಗಮನಂ-ಎಯ್ದುವುದನು, ಕುರುಷ್ವ-ಮಾಡು

ಸೂ॥ ಆ ಮನೋಮಾರುತಂಗಳು ತ್ರಿಕೋಣಮಾರ್ಗವನೆಯ್ದುವುದಕ್ಕುಪಾ ಯಮಂ ಪೇಳ್ದಪಂ—

ಶ್ಲೋ॥ ಪ್ರಾಣಾನಿಲಸ್ಯೋದ್ಗಮನೇ ನಿರೋಧನೇ ನಿಪಾತಿತಾಚೋ
ರ್ಧ್ವಸುಸೂಕ್ಷ್ಮಶಕ್ತಿಃ। ಪ್ರತ್ಯಾಹತೇಮಧ್ಯಗತಾಪ್ರಬೋ
ಧಿನೀಹ್ಯಧೋಗತೇಮೂಲನಿಕುಂಚನೀಸ್ಯಾತ್ ॥

ಟೀ॥ ಪ್ರಾಣಾನಿಲಸ್ಯ-ಪ್ರಾಣವಾಯುವಿನ, ಉದ್ಗಮನೇ-ರೇಚಕದಿಂ ಹೊ ಸೂಸುವತನವು, ನಿರೋಧನೇ-ಮುಂದೆಪೇಳ್ವ ಜಾಲಂಧರಬಂಧದಿಂದ ತಡೆಯಲ್ಪ ಊರ್ಧ್ವಸುಸೂಕ್ಷ್ಮಶಕ್ತಿಃ- ಅತಿಸೂಕ್ಷ್ಮವಾದ ಕುಂಡಲಿನಿಯು, ನಿಪಾತಿತಾಚ ಧೋಮುಖವಹುದರಿಂ ಧ್ಯಾನಕ್ಕೆ ಅಭಿಮುಖವಾಗಲ್ಪಟ್ಟಂತಹುದು. ಪ್ರತ್ಯಾಹತೇ- ಣವಾಯುವು ತಿರಿಗಿ ತನ್ನಸ್ಥಾನವನೆಯ್ದಲಾಗಿ, ಮಧ್ಯಗತಾ-ಮಧ್ಯಕುಂಡಲಿನಿ ಪ್ರಬೋಧಿತಾ-ಕುಟಿಲತೆಯುಂಬಿಟ್ಟು ನೇರಿತ್ತಹುದು. ಅಧೋಗತೇ- ಪ್ರಾಣವಾ ವು ಮೂಲಾಧಾರಾಭಿಮುಖವಾಗಲಾಗಿ, ಮೂಲನಿಕುಂಚನೀ--ಮೂಲಾಧಾರದ ಯ ನಾಕುಂಚನವಂ ಮಾಡುವಂತಹುದು, ಸ್ಯಾತ್-ಅಹುದು.

ಸೂ॥ ಈಪ್ರಕಾರದಿಂ ತ್ರಿಸ್ಥಾನದಲ್ಲಿಯು ತ್ರಿವಿಧಶಕ್ತಿ ವ್ಯಾಪಾರದಿಂ ಪ ಪ್ರಾಪ್ತಿಯುಳ್ಳುದೆಂದು ಪೇಳ್ದಪಂ--

ಶ್ಲೋ॥ ತಸ್ಮಾತ್ತ್ರಿವಿಧಶಕ್ತೀನಾಂ ಪಾತೇನಪ್ರವಿಬೋಧನಾತ್ ।
ಆಕುಂಚನೇನಯೋಗೀಂದ್ರಾಃ ಯಾಂತ್ಯಮಿಾಪರಮಂಪದ

ಟೀ॥ ತಸ್ಮಾತ್-ಅದುಕಾರಣವಾಗಿ, ಅಮಿಾಯೋಗೀಂದ್ರಾಃ-ಈಯೋಗೀ ರುಗಳು, ತ್ರಿವಿಧಶಕ್ತೀನಾಂ- ಊರ್ಧ್ವಕುಂಡಲಿನಿ ಮಧ್ಯಕುಂಡಲಿನಿ ಅಧಃಕುಂ ನಿಯೆಂಬ ಮೂರುಪ್ರಕಾರವಾದ ಶಕ್ತಿಗಳ, ಪಾತೇನ-ಅಭಿಮುಖವಹುದರಿಂದೆ, ಪ್ರ ಬೋಧನಾತ್--ಋಜುವಹುದರಿಂದೆ, ಆಕುಂಚನೇನ--ಸಂಕೋಚನದಿಂದೆ, ಪ ಮಂ-ಶ್ರೇಷ್ಠವಾದಂಥ, ಪದಂ-ತ್ರಿಕೂಟಸ್ಥಾನವನು, ಯಾಂತಿ-ಎಯ್ದುತ್ತಿರ್ಪ

ಸೂ॥ ಈ ಪರಮಪದ ಪ್ರಾಪ್ತಿಸಾಧನವಾದ ತ್ರಿವಿಧಶಕ್ತಿ ವ್ಯಾಪಾರಾರ್ಥವಾ ಬಂಧತ್ರಯಂಗಳಂ ಮಾಳ್ಪುದೆಂದು ಪೇಳ್ದಪಂ—

ಶ್ಲೋ॥ ಅತಏವಮಹಾಶ್ಚರ್ಯಂ ಚಂದ್ರಸೂರ್ಯಾಗ್ನಿಸದ್ಮನಿ ।
ಬಂಧನಂಕುರು ತದ್ಭಾಜ್ಞಾತ್ವಾ ಪ್ರಣವಧ್ವನಿನಾಸಹ ॥೪೮

ಟೀ॥ ಅತಏವ-ಪರಪದಪ್ರಾಪ್ತಿಗೆ ತ್ರಿವಿಧಶಕ್ತಿವ್ಯಾಪಾರವೇ ಕಾರಣವಹುದಾಗಿ, ಮಹಾಶ್ಚರ್ಯಂ-ಅತ್ಯಾಶ್ಚರ್ಯವಾಗಿಪ್ಪಂಥ,ತತ್-ಆತ್ರಿವಿಧಶಕ್ತಿವ್ಯಾಪಾರವನು, ಜ್ಞಾತ್ವಾ-ಅರಿದು, ಪ್ರಣವಧ್ವನಿನಾಸಹ-ನಾದದೊಡನೆಕೂಡಿ, ಚಂದ್ರಸೂರ್ಯಾಗ್ನಿಸದ್ಮನಿ-ಕ್ರಮದಿಂವಿಶುದ್ಧಿಮಣಿಪೂರಕ ಆಧಾರವೆಂಬ ಚಂದ್ರಸೂರ್ಯಾಗ್ನಿಗಳಾಶ್ರಯದಲ್ಲಿ, ಬಂಧನಂ-ಜಾಳಂಧರಬಂಧ ಉಡ್ಯಾಣಬಂಧ ಆಧಾರಬಂಧವೆಂಬ ಬಂಧತ್ರಯವನು, ಕುರು--ಮಾಡು. ॥೪೧॥

ಸೂ॥ ಆ ಬಂಧನತ್ರಯಾನಂತರದಲ್ಲಿ ತ್ರಿಕೋಣಸ್ಥಾನದೊಳಿರ್ಪ್ಪುತಿರುವ ಪ್ರಣವದ ಸ್ವರೂಪಮಂ ಪೇಳ್ದಪಂ—

ಶ್ಲೋ॥ ತ್ರಯೋವೇದಾಸ್ತ್ರಯೋದೇವಾ ಸ್ತ್ರಯೋಲೋಕಾಸ್ತ್ರ
ಯೋಗುಣಾಃ । ಓಮಿತ್ಯೇಕಾಕ್ಷರೇಮಂತ್ರೇ ಪರಬ್ರಹ್ಮ
ಣಿ ಸಂತಿವೈ ॥೪೨॥

ಟೀ॥ ತ್ರಯಃ-ಮೂರಾಗಿರ್ಪಂಥ, ವೇದಾಃ-ಋಗ್ಯಜುಸ್ಸಾಮಂಗಳೆಂಬ ವೇದಗಳು, ತ್ರಯಃ- ಮೂರಾಗಿರ್ಪಂಥ, ದೇವಾಃ-ಭವ ಹರ ಮೃಡರೆಂಬ ದೇವತೆಗಳು,ತ್ರಯಃ-ಮೂರಾಗಿರ್ಪಂಥ, ಲೋಕಾಃ-ಲೋಕಂಗಳು, ತ್ರಯಃ-ಮೂರಾಗಿರ್ಪಂಥ, ಗುಣಾಃ-ಶುದ್ಧಂಗಳಾದ ಸತ್ವರಜಸ್ತಮೋಗುಣಂಗಳು, ಪರೇ- ಸರ್ವೋತ್ಕೃಷ್ಟವಾಗಿರ್ಪಂಥ, ಬ್ರಹ್ಮಣಿ-ಬ್ರಹ್ಮರೂಪದಿಂ ಷಡಧ್ವೋಪಧಾನವಾಗಿರ್ಪಂಥ, ಓಮಿತಿ-ಓಂ ಎಂಬ, ಏಕಾಕ್ಷರೇ-ಏಕಾಕ್ಷರರೂಪವಾಗಿರ್ಪಂಥ, ಮಂತ್ರೇ-ಮಂತ್ರದಲ್ಲಿ, ಸಂತಿವೈ-ಉಂಟಲಾ.

ಸೂ॥ ಅನಂತರದಲ್ಲಿ ಹಠಯೋಗವೆನಿಸುವ ಕೇವಲಕುಂಭಕದ ಸ್ವರೂಪಮಂ ಪೇಳ್ದಪಂ: --

ಶ್ಲೋ॥ ಇತಿಸರ್ವೇಚತಂಸಿದ್ಧಾವಿದುಃಕೇವಲಕುಂಭಕಂ ।
ಹಠೇಷ್ವೇಕಮಿದಂಶ್ರೇಷ್ಠಂಗೋಪಿತಂಪರಮಾದ್ಭುತಂ ॥೪೩॥

ಟೀ॥ ಇತಿ-ಈಪ್ರಕಾರದಿಂದೆ, ಸರ್ವೇ-ಸಮಸ್ತರಾಗಿರ್ಪಂಥ, ಸಿದ್ಧಾಃ-ಯೋಗಸಿದ್ಧರುಗಳು, ತಂ_ಆಲಯಯೋಗದಿಂದಾದಪ್ರಣವದಲ್ಲಿಯ ವಾಯುಲಯವನೇ, ಕೇವಲಕುಂಭಕಂ-ಕೇವಲ ಕುಂಭಕವನಾಗಿ, ವಿದುಃ-ಅರಿವುತ್ತಿಹರು, ಹಠೇಷು-ಹಠಯೋಗಂಗಳಲ್ಲಿ, ಶ್ರೇಷ್ಠಂ-ವಿಶಿಷ್ಟವಾಗಿಪ್ಪಂಥ, ಪರಮಾದ್ಭುತಂ-ಅತ್ಯಂತಾಶ್ಚರ್ಯವಾಗಿರ್ಪಂಥ, ಇದಮೇಕಂ-ಈ ಕೇವಲಕುಂಭಕವೊಂದೇ, ಗೋಪಿತಂ-ಮರಸಲ್ಪಟ್ಟುದು. ॥೪೩॥

ಸೂ॥ ಈ ಕೇವಲ ಕುಂಭಕಾಭ್ಯಾಸದಿಂ ಪ್ರಾಣವಾಯುವಂ ನಿಲ್ಲಿಸಿದಾತಂಗೆ ಜನನ ಮರಣಾದಿಗಳ್ಬಿಡುವುವೆಂದು ಪೇಳ್ದಪಂ:—

ಶ್ಲೋ॥ ಗಮಾಗಮೌಪ್ರಾಣವಾಯೋರ್ವಿಧಾನೇನನಗಚ್ಛತಃ ।
ಯಥಾತಸ್ಯಶರೀರಸ್ಯ ಗಮಾಗಮವಿಧಿಸ್ತಥಾ ॥೪೪

ಟೀ॥ ಪ್ರಾಣವಾಯೋಃ-ಪ್ರಾಣವಾಯುವಿನ, ಗಮಾಗಮೌ-ರೇಚಕಪೂರಕಂ ಳು, ವಿಧಾನೇನ-ಪೂರ್ವೋಕ್ತವಾದ ಲಯಯೋಗವಿಧಾನದಿಂದ, ಯಥಾ-ಹೇಂ, ನ ಚ್ಛತಃ-ಎಯ್ದುತ್ತಿರವೋ, ತಸ್ಯ-ಆತನ, ಶರೀರಸ್ಯ-ದೇಹಕ್ಕೆ, ಗಮಾಗಮವಿಧಿಃ-ಪ್ ಣೋತ್ಪತ್ತಿಗಳು, ತಥಾ ಹಾಂಗೆ, ತೊಲಗುತ್ತಿಪ್ಪುವೆಂಬುದರ್ಥಂ ॥೪೪

ಸೂ॥ ಯೋಗಶಾಸ್ತ್ರದಲ್ಲಿ ಕೇವಲಕುಂಭಕ ವತಿರಹಸ್ಯವಪ್ಪುದರಿಂ ಮಂದಬು ದ್ಧಿಗಳ್ಗೆ ಗೋಚರಿಸದೆಂದು ಪೇಳ್ದಪಂ—

ಶ್ಲೋ॥ ಸಿದ್ಧಸಂಮತಶಾಸ್ತ್ರೇಷು ಸ್ಥಿತಃಕೇವಲಕುಂಭಕಃ ।
ತಥಾಪ್ಯತಿರಹಸ್ಯತ್ವಾನ್ನವಿಜಾನಾತಿಮೂಢಧೀಃ ॥೪೫

ಟೀ॥ ಸಿದ್ಧಸಂಮತಶಾಸ್ತ್ರೇಷು-ಯೋಗಸಿದ್ಧರ್ಗೆ ಸಮ್ಮತವಾದ ಯೋಗಶಾ ಸ್ತ್ರಂಗಳಲ್ಲಿ, ಕೇವಲಕುಂಭಕಃ-ಕೇವಲಕುಂಭಕವು, ಸ್ಥಿತಃ-ಇರಲ್ಪಟ್ಟಿತು, ತಥಾಪಿ- ಹಾಂಗಾಯಿತ್ತಾದರೂ, ಅತಿರಹಸ್ಯತ್ವಾತ್-ಅತಿಗೋಪ್ಯವಾದ ಕಾರಣದಿಂದೆ, ಮೂ ಢಧೀಃ-ಮಂದಬುದ್ಧಿಯುಳ್ಳಂಥಾತನು, ನವಿಜಾನಾತಿ-ಅರಿವುತ್ತಿರನು. ॥೪೫

ಸೂ॥ ಗುರುಪ್ರಸಾದದಿಂದ ಕೇವಲಕುಂಭಕ ಸಿದ್ಧನಾದಾತಂಗೆ ಪೂರ್ವಯೋ ಗಾಭ್ಯಾಸದಿಂ ಪ್ರಯೋಜನವಿಲ್ಲವೆಂದು ಪೇಳ್ದಪಂ—

ಶ್ಲೋ॥ ಗುರೋರ್ಯಸ್ಯಪ್ರಸಾದಾಚ್ಚ ಸಿದ್ಧ್ಯೇತ್ಕೇವಲಕುಂಭಕಃ ।
ಯದಿಕಿಂಕರಣೈರ್ಮುದ್ರಾ ಬಂಧನೈರೇವಮಾದಿಭಿಃ ॥೪೬

ಟೀ॥ ಯಸ್ಯ-ಆವನಾನೊರ್ವ ಯೋಗೀಶ್ವರಂಗೆ, ಗುರೋಃ-ಆಚಾರ್ಯನ, ಪ್ರಸಾ ದಾತ್-ಪ್ರಸನ್ನತೆಯಿಂದೆ, ಕೇವಲಕುಂಭಕಃ-ಕೇವಲಕುಂಭಕವು, ಯದಿ-ಎತ್ತಲಾನು ಸಿದ್ಧ್ಯೇತ್--ಸಿದ್ಧಿಸುವುದೋ, ( ತಸ್ಯ-ಆತಂಗೆ, ) ಕರಣೈಃ--ಭುಜಂಗಿ ಶೀತಳಿಮೊ ದಲಾದ ಕರಣಗಳಿಂದವೂ, ಮುದ್ರಾಬಂಧನೈಃ-ಮಹಾಮುದ್ರೆ ಜಾಳಂಧರಬಂಧ ಮೊ ದಲಾದ ಮುದ್ರಾಬಂಧಂಗಳಿಂದವೂ, ಏವಮಾದಿಭಿಃ--ಇವುಮೊದಲಾದ ಪೂರ್ವಯೋಗಂ ಗಳಿಂದ, ಕಿಂ-ಏನು ? ॥೪೬

ಸೂ॥ ಈಕೇವಲ ಕುಂಭಕವೇ ಮೋಕ್ಷಸಾಧನವೆಂದು ಪೇಳ್ದಪಂ —

ಶ್ಲೋ॥ ನಿಶ್ಚಬ್ದೇ ಕೇವಲೇ ಕುಂಭೇ ಪ್ರಾಪ್ತೋವಿಷ್ಣುಪದಂಮರುತ್ ।
ತಥಾಖಲುತಯೋರೈಕ್ಯಂ ಜೀವಾತ್ಮಪರಮಾತ್ಮನೋಃ ॥೪೭

ಟೀ॥ ಯದಾ-ಆವಾಗ, ನಿಶ್ಶಬ್ದೇ-ವೈಖರ್ಯಾದಿಶಬ್ದಂಗಳಿಲ್ಲದಿರ್ಪಂಥ, ಕೇವಲಕುಂಭೇ-ಕೇವಲಕುಂಭಕದಲ್ಲಿ, ಮರುತ್-ಪ್ರಾಣವಾಯುವು, ವಿಷ್ಣುಪದಂ-ಬಿಂದ್ವಾಕಾಶಸ್ಥಾನವನು, ಪ್ರಾಪ್ತಃ- ಎಯ್ದಲ್ಪಟ್ಟತೊ. ತದಾ-ಆಕಾಲದಲ್ಲಿ, ತಯೋಃ-ಆ ಪ್ರಸಿದ್ಧರಾಗಿರ್ಪಂಥ, ಜೀವಾತ್ಮಪರಮಾತ್ಮನೋಃ- ಹಂಸರೂಪರಾದ ಜೀವಾತ್ಮಪರಮಾತ್ಮರ್ಗೆ, ಐಕ್ಯಂಖಲು-ಸಾಮರಸ್ಯವಾ ॥೪೭॥

ಸೂ॥ ಕೇವಲಕುಂಭಕದಲ್ಲಿಯು ನಿಶ್ಶಬ್ದಾತ್ಮಕವಾದ ಪರನಾದವೇ ಶಿವತತ್ತ್ವವೆಂದು ಪೇಳ್ದಪಂ:—

ಶ್ಲೋ॥ ನಿಶ್ಶಬ್ದಂತತ್ತ್ವಮಿತ್ಯಾಹುರನಿರ್ವಾಚ್ಯಂ ಪರಂಪದಂ ।
ಭೂತೇಂದ್ರಿಯಾದಿಪ್ರಕೃತೇಸ್ತತ್ತ್ವಾನಾಂಚಲಯಾತ್ಮಕಂ॥೪೮

ನಿಶ್ಶಬ್ದಂ-ಶಬ್ದಾತ್ಮಕವಲ್ಲದ ನಾದಬ್ರಹ್ಮವನೆ, ಅನಿರ್ವಾಚ್ಯಂ-ನುಡಿಯಿಂದ ಪೇಳಲು ಶಕ್ಯವಲ್ಲವೆಯಿರ್ಪಂಥ, ಪರಂಪದಂ-ಮುಖ್ಯಸ್ಥಾನವಾಗಿರ್ಪಂಥ, ಭೂತೇಂದ್ರಿಯಾದಿಪ್ರಕೃತೇಃ-ಭೂತ- ಪಂಚಮಹಾಭೂತಂಗಳಿಗೆ, ಇಂದ್ರಿಯ-ಕರ್ಮೇಂದ್ರಿಯಜ್ಞಾನೇಂದ್ರಿಯಂಗಳಿಗೆ, ಆದಿಶಬ್ದದಿಂ-ಮನೋಬುದ್ಧ್ಯಾದಿಗಳಿಗೆ, ಪ್ರಕೃತೇಃ ಕಾರಣರೂಪವಾದ ಪ್ರಕೃತಿಗೂ, ತತ್ತ್ವಾನಾಂಚ-ಪಂಚಕಂಚುಕಶುದ್ಧವಿದ್ಯೆ ಮೊದಲಾದ ತತ್ತ್ವಂಗಳಿಗೆಯೂ, ಲಯಾತ್ಮಕಂ-ಲಯಸ್ಥಾನರೂಪವಾಗಿರ್ಪಂಥ, ತತ್ತ್ವಮಿತಿ-ಶಿವತತ್ತ್ವವನಾಗಿ, ಆಹುಃ-ಪೇಳುತ್ತಿಹರು. ॥೪೮॥

ಸೂ॥ ಅನಂತರದಲ್ಲಿ ಕೇವಲ ಕುಂಭಕಾಭ್ಯಾಸಕ್ಕುಪಾಯವಂ ಪೇಳ್ದಪಂ:—

ಶ್ಲೋ॥ಮೂಲೋಡ್ಡೀಯಣಜಾಲಬಂಧನವಿಧಾವಭ್ಯಾಸತೋಯೋ
ಗಿನೋವಾಯೋರುದ್ಗಮನಂ ನಿರಂಕುಶವಿಧೇಸ್ತದ್ವ್ಯೋ
ಮ್ನಿಸಂರೋಧನಾತ್ ॥ ಭೂತಾನೀಂದ್ರಿಯವರ್ಗತದ್ಗುಣ
ಮನೋಹಂಚಿತ್ತಬುದ್ಧ್ಯಾದಯ ಸ್ಸರ್ವಂಲೀನಮುಪೈತಿವೃ
ತ್ತಿರಹಿತಂ ಸಾಮ್ಯಂ ತದಾಕಸ್ಯನ · ॥೪೯॥

ಟೀ॥ ಮೂಲೋಡ್ಡೀಯಣಜಾಲಬಂಧನವಿಧೌ-ಆಧಾರಬಂಧ ಉಡ್ಯಾಣಬಂಧ ಜಾಲಂಧರಬಂಧವೆಂಬ ಬಂಧತ್ರಯಂಗಳ ವಿಧಾನದಲ್ಲಿಯು, ಅಭ್ಯಾಸತಃ-ಅಭ್ಯಾಸದ ವೆಸೆಯಿಂದೆ, ಯೋಗಿನಃ-ಯೋಗೀಶ್ವರಂಗೆ, ನಿರಂಕುಶವಿಧೇಃ-ನಿರಂಕುಶ-ತಡೆಯಿಲ್ಲವೆಯಿರ್ಪಂಥ, ವಿಧೇಃ-ರೇಚಕಪೂರಕವಿಧಿಯುಳ್ಳಂಥ, ವಾಯೋಃ-ಹೃದಯಸ್ಥಾನದಪ್ರಾಣವಾಯುವಿನ, ಉದ್ಗಮನಂ-ಹೃದಯಸ್ಥಾನದಿಂದೂರ್ಧ್ವಗತಿಯನು, ತದ್ವ್ಯೋಮ್ನಿ-ಆಪ್ರಸಿದ್ಧವಾದ ಆಕಾಶವೆಂಬ ಸುಷುಮ್ನಸ್ಥಾನದ, ಸಂರೋಧನಾತ್-ನಾಸಿಕದ್ವಾರದಲ್ಲಿ ರೇಚಿಸದೆ ತಡೆವುದರ ದೆಸೆಯಿಂದೆ, ಭೂತಾನಿ-ಪೃಥಿವ್ಯಾದಿಭೂತಂಗಳು, ಇಂದ್ರಿ

ಯವರ್ಗ ತದ್ಗುಣಮನೋಹಂಚಿತ್ತಬುದ್ಧ್ಯಾದಯಃ-ಇಂದ್ರಿಯವರ್ಗ-ಕರ್ಮೇಂದ್ರಿ ಜ್ಞಾನೇಂದ್ರಿಯಂಗಳ ಸಮೂಹವು, ತದ್ಗುಣ-ಆ ಇಂದ್ರಿಯಂಗಳ ವಚನಾದಿ ಕ್ರಿಯೆ, ಶಬ್ದಗ್ರಹಣಾದಿಜ್ಞಾನಂಗಳು, ಮನೋಹಂಚಿತ್ತಬುದ್ಧ್ಯಾದಯಃ-ಮನೋಹಂಕಾರ ತ್ತಬುದ್ಧ್ಯಾದಿಗಳು, (ಆದಿಶಬ್ದದಿಂ ಸತ್ವಾದಿಗುಣಂಗಳೆಂಬ) ಸರ್ವಂ-ಸಮಸ್ತವೂ, ತ್ತಿರಹಿತಂ-ತಮ್ಮತಮ್ಮ ವ್ಯಾಪಾರದಿಂ ತೊಲಗಲುಪಟ್ಟುದಾಗಿ, ಲೀನಂ-ಲಯ ಉಪ್ಪೈತಿ ಎಯ್ದುತ್ತಿಹುದೊ, ತದಾ-ಆಕಾಲದಲ್ಲಿ, ಕಸ್ಯ-ಆವಾತಂಗೆ, ಸೌಖ್ಯಂ-ಸು ದವು, ನ-ಇಲ್ಲ? (ಕೇವಲಕುಂಭಕದಿಂದೆ ಬಾಹ್ಯಾಂತಃಕರಣ ಲಯದಿಂದೆ ಸಕಲರ್ಗೆ ಆನಂದವೆಂಬುದರ್ಥಂ.) ॥

ಸೂ॥ ಅನಂತರದಲ್ಲಿ ಕೇವಲಕುಂಭಕಕ್ಕೆ ಬಂಧತ್ರಯವೇ ಕಾರಣವಪ್ಪುದ ಮೊದಲಲ್ಲಿ ಆಧಾರಬಂಧಸ್ವರೂಪಮಂ ಪೇಳ್ದಪಂ-—

ಶ್ಲೋ॥ ಯೋಽಯಂಪಾನಸೂರ್ಯಮಥವಾಯುನಿರೋಧನೇನಪ್ರಾಣೇಂ
ದುನಾಸಹತದೂರ್ಧ್ವಗತಂಪ್ರಕೃತ್ಯ । ಯೋಗೈಕಸಿದ್ಧಿಮ
ಸಿತಂಕುರುತೇಸಮಸ್ತಪ್ರಜ್ಞಾವತಾಂಭುವಿಸಏವಹಿಮೂ
ಲಬಂಧಃ ॥

ಟೀ॥ ಯಃ-ಆವುದಾನೊಂದುಬಂಧವು, ವಾಯುನಿರೋಧನೇನ- ಆ ಕುಂಭ ದಿಂ ವಾಯುವಂತಪೆವುದರಿಂದ, ಅಥ-ಅನಂತರಲ್ಲಿ, ಅಪಾನಸೂರ್ಯಂ-ಅಪಾನವಾ ವೆಂಬಸೂರ್ಯನನು,ಪ್ರಾಣೇಂದುನಾ-ಹೃದಯಸ್ಥಾನದಪ್ರಾಣವಾಯುವೆಂಬಚಂದ್ರನ ಡನೆ, ಸಹ-ಕೂಡಿ, ತದೂರ್ಧ್ವಗತಂ-ಆಊರ್ಧ್ವಮಾದ ಸುಷುಮ್ನಸ್ಥಾನವನೆಯ್ದು ಟ್ಟಂತಹುದನ್ನಾಗಿ, ಪ್ರಕೃತ್ಯ-ಚೆನ್ನಾಗಿಮಾಡಿ, ಯೋಗೈಕಸಿದ್ಧಿಂ-ಯೋಗವೆಂಬ ಖ್ಯಸಿದ್ಧಿಯನು, ಅಸಿತಂ-ಶಿವಾಗವೂ, ಕುರುತೇ-ಮಾಡುತ್ತಿದ್ದೀತೊ, ಸಏವ ಆಬ ವೇ, ಭುವಿ-ಭೂಲೋಕದಲ್ಲಿ, ಸಮಸ್ತಪ್ರಜ್ಞಾವತಾಂ-ಸಕಲ ಬುದ್ಧಿವಂತರ್ಗೆ, ಮೂ ಲಬಂಧೋಹಿ-ಮೂಲಬಂಧವಲಾ ॥

ಸೂ॥ ಅನಂತರದಲ್ಲಿ ಉಡ್ಡಿಯಾಣ (ಉಡ್ಡೀಯಣ) ಬಂಧಮಂ ಪೇಳ್ದಪಂ-

ಶ್ಲೋ॥ ಅಧಶ್ಚೋರ್ಧ್ವಂಚನಾಭೇರ್ಯೋಬಂಧನಂಕುರುತೇಬಲಾತ್
ಉಡ್ಡೀಯಣಮಸೌಬಂಧೋರುಗ್ಜರಾಮೃತ್ಯುನಾಶನಂ॥

ಟೀ॥ ಯಃ-ಆವುದಾನೊಂದುಬಂಧವು, ನಾಭೇಃ-ನಾಭಿಯ, ಅಧಶ್ಚ-ಅಧೋ ಗವನೂ, ಊರ್ಧ್ವಂಚ-ಮೇಲಣಪ್ರದೇಶವನೂ, ಬಲಾತ್-ಬಲಾತ್ಕಾರದದೆಸೆಯಿಂ ಬಂಧನಂ-ಬಂಧನವನು, ಕುರುತೇ-ಮಾಡುತ್ತಿದ್ದೀತೋ. ಅಸೌಬಂಧಃ-ಈಬಂಧ ಉಡ್ಡೀಯಣಂ-ಉಡ್ಡಿಯಾಣಬಂಧವೆನಿಪುದು. ರುಗ್ಜರಾಮೃತ್ಯುನಾಶನಂ-ವ್ಯಾಧ ರೆಮರಣಂಗಳನು ಕೆಡಿಸುವಂತಹುದು. ॥

ಸೂ॥ ಅನಂತರದಲ್ಲಿ ಜಾಲಂಧರ ಬಂಧವಂ ಪೇಳ್ದಪಂ:—

ಶ್ಲೋ॥ ಕಂಠಮಾಕುಂಚ್ಯಹೃದಯೇಸ್ಥಾಪಯೇಚ್ಚುಬುಕಂದೃಢಂ ।
ಏಷಜಾಲಂಧರೋಬಂಧಊರ್ಧ್ವಾಮೃತನಿಬಂಧಕಃ ॥೫೦॥

ಟೀ॥ ಕಂಠಂ-ಕೊರಳನು, ಆಕುಂಚ್ಯ-ಸಂಕೋಚನಂಮಾಡಿ, ಹೃದಯೇ-ಹೃದಯಸ್ಥಾನದಲ್ಲಿ, ಚುಬುಕಂ-ಚುಬುಕವನು, ದೃಢಂ-ದೃಢವಾಗಿ, ಸ್ಥಾಪಯೇತ್-ಇರಿಸುವುದು. ಏಷಃ-ಇದು, ಜಾಲಂಧರಃ-ಜಾಲಂಧರವೆಂಬ, ಬಂಧಃ-ಬಂಧವು, ಊರ್ಧ್ವಾಮೃತನಿಬಂಧಕಃ-ಊರ್ಧ್ವಭಾಗದ ಅಮೃತವು ಸ್ರವಿಸುವುದಕ್ಕೆ ಕಾರಣವಾಗಿರ್ಪಂತಹುದು ॥೫೦॥

ಸೂ॥ ಈಬಂಧತ್ರಯಾಭ್ಯಾಸದಿಂಕೇವಲಕುಂಭಕಸಿದ್ಧಿಯಪ್ಪುದೆಂದು ಪೇಳ್ದಪಂ-

ಶ್ಲೋ॥ ಅಥೋರ್ಧ್ವಮಧ್ಯಸ್ಥಿರಬಂಧನಾಭ್ಯಾಮಾಕುಂಚನಾದೂ
ರ್ಧ್ವಮಪಾನವಾಯೋಃ । ಘ್ರಾಣೈಕರಂಧ್ರೇಮರುತಃಪ್ರ
ವೇಶಾಚ್ಛೀಘ್ರಂಭವೇತ್ಕೇವಲಕುಂಭಸಿದ್ಧಿಃ ॥೫೧॥

ಟೀ॥ ಅಥ-ಅನಂತರದಲ್ಲಿ, ಊರ್ಧ್ವಮಧ್ಯಸ್ಥಿರಬಂಧನಾಭ್ಯಾಂ- ಊರ್ಧ್ವ-ಕಂಠಸ್ಥಾನದಲ್ಲಿಯು, ಮಧ್ಯ-ನಾಭಿಸ್ಥಾನದಲ್ಲಿಯು, ಸ್ಥಿರ-ಸ್ಥಿರಂಗಳಾದ, ಬಂಧನಾಭ್ಯಾಂ-ಜಾಲಂಧರಬಂಧ ಉಡ್ಡಿಯಾಣಬಂಧಂಗಳಿಂದ, ಊರ್ಧ್ವಂ-ಊರ್ಧ್ವವಾಗಿ, ಅಪಾನವಾಯೋಃ-ಅಪಾನವಾಯುವಿನ, ಆಕುಂಚನಾತ್-ಆಕುಂಚನದ ದೆಸೆಯಿಂದ, ಘ್ರಾಣೈಕರಂಧ್ರೇ-ನಾಸಿಕದೊಂದು ರಂಧ್ರದಲ್ಲಿ, ಮರುತಃ-ಪ್ರಾಣವಾಯುವಿನ, ಪ್ರವೇಶಾತ್-ಪೂರಕದದೆಸೆಯಿಂದ, ಕೇವಲಕುಂಭಸಿದ್ಧಿಃ-ಕೇವಲ ಕುಂಭಕದ ಸಿದ್ಧಿಯು, ಶೀಘ್ರಂ-ಶೀಘ್ರವಾಗಿ, ಭವೇತ್-ಅಹುದು. ॥೫೧॥

ಸೂ॥ ಅನಂತರದಲ್ಲಿ ಈ ಕೇವಲಕುಂಭಕಸಿದ್ಧನೇ ಸಕಲಲೋಕಪ್ರಸಿದ್ಧನೆಂದು ಪೇಳ್ದಪಂ:—

ಶ್ಲೋ॥ ಅಯಂಕೇವಲಕುಂಭಾಖ್ಯೋಯಸ್ಯಾವಶ್ಯಂವಶೋಭವೇತ್ ।
ಸದಾಭವತಿವಿಖ್ಯಾತಸ್ಸಏವಪ್ರಾಣಸಂಯಮೀ ॥೫೨॥

ಟೀ॥ ಯಸ್ಯ-ಆವಾತಂಗೆ, ಕೇವಲಕುಂಭಾಖ್ಯಃ-ಕೇವಲಕುಂಭಕವೆಂಬ ಹೆಸರುಳ್ಳಂಥ, ಅಯಂ-ಈಯೋಗವು, ಅವಶ್ಯಂ-ಅವಶ್ಯಕವಾಗಿ, ವಶಃ-ಅಧೀನವು, ಭವೇತ್-ಆಗುವುದೋ, ಸಏವ-ಆತನೇ, ಸದಾ-ಅನವರತವೂ, ವಿಖ್ಯಾತಃ-ಲೋಕಪ್ರಸಿದ್ಧನಾಗಿರ್ಪಂಥ, ಪ್ರಾಣಸಂಯಮೀ-- ಪ್ರಾಣಾಯಾಮವುಳ್ಳಂಥ ಯೋಗೀಶ್ವರನು, ಭವತಿ-ಆಗುತ್ತಿರ್ಪನು. ॥೫೨॥

ಸೂ॥ ಈಪ್ರಕಾರದಿಂ ಪ್ರಾಣಾಯಾಮಾಭ್ಯಾಸಮಂ ಮಾಡಿದಾತಂಗೆ ಪ್ರಾಣಸ್ಥಾನಗಳ ನಿಯಮದಿಂ ಫಲಮಂ ಪೇಳ್ದಪಂ:—

ಶ್ಲೋ॥ ಪ್ರಾಣಾಯಾಮವಿಧಾನಂ ಮಾಸತ್ರಯಮಪಿ ಸಮಾಚರೇನ್ನಿ-
ತ್ಯ । ತನುಲಘುತಾದೀಪನತಾನಾಡೀಶುದ್ಧಿರ್ಧ್ವನಿಶ್ಚ ಭವೇತ್

ಟೀ॥ ನಿಯತಃ-ನಿಯಮಗುಣಸಂಪನ್ನನಾದ ಯೋಗೀಶ್ವರನು, ಪ್ರಾಣಾಯಾಮ ವಿಧಾನಂ-ಪೂರ್ವೋಕ್ತವಾದ ಪ್ರಾಣಾಯಾಮವಿಧಿಯನು, ಮಾಸತ್ರಯಮಪಿ-ಮೂರು ತಿಂಗಳಾದರೂ, ಸಮಾಚರೇತ್-ಲೇಸಾಗಾಚರಿಸುವುದು. ಅದರಿಂದ, ತನುಲಘುತಾ-ದೇಹಕ್ಕೆ ಲಘುತ್ವವು, ದೀಪನತಾ-ಉದರಾಗ್ನಿ ಪಟುತ್ವವು, ನಾಡೀಶುದ್ಧಿಃ-ಸಕಲ ನಾಡಿಗಳ ಶುದ್ಧತೆಯು, ಧ್ವನಿಶ್ಚ-ನಾದೋತ್ಪತ್ತಿಯೂ, ಭವೇತ್-ಅಹುದು. ॥

ಸೂ॥ ಈಪ್ರಕಾರದಿಂ ಸಾಮಾನ್ಯಪ್ರಾಣಾಯಾಮಫಲವಂ ಪೇಳ್ದು ಆ ಪ್ರಾಣಾಯಾಮದಿಂ ಮುಖ್ಯವಪ್ಪ ಕೇವಲಕುಂಭಕಾಭ್ಯಾಸಕ್ಕೆ ಅವಧಿಯಫಲವಂ ಪೇಳ್ದಪ:

ಶ್ಲೋ॥ ಗಗನೇ ಪವನೇ ಪ್ರಾಪ್ತೇ ತತ್ಕ್ಷಣಾದುನ್ಮನೀ ಭವೇತ್ ।
ಕೇವಲೇ ಕುಂಭಕೇ ಪ್ರಾಜ್ಞಸ್ತಾವದೇವ ಸಮಭ್ಯಸೇತ್ ॥

ಟೀ॥ ಗಗನೇ-ಗಗನವೆನಿಸುವ ಸುಷುಮ್ನಸ್ಥಾನದಲ್ಲಿ, ಪವನೇ-ಪ್ರಾಣವಾಯುವು, ಪ್ರಾಪ್ತೇ-ಬಂಧತ್ರಯದಿಂದೆಯ್ದಲಾಗಿ, ತತ್ಕ್ಷಣಾತ್-ಆಕ್ಷಣದತ್ತಣಿಂದೆ, ಉನ್ಮನೀ-ಉನ್ಮನೀಜ್ಯೋತಿಸ್ಸಿದ್ಧಿಯು, ಭವೇತ್-ಅಹುದು. ಕೇವಲೇ-ಕೇವಲವಾದ, ಕುಂಭಕೇ-ಕುಂಭಕದಲ್ಲಿ, ಪ್ರಾಜ್ಞಃ-ಬಲ್ಲಾತನು, ತಾವದೇವ-ಆಉನ್ಮನ್ಯವಸ್ಥಾಸಿದ್ಧಿಪ ತವೇ, ಸಮಭ್ಯಸೇತ್-ಕೇವಲಕುಂಭಕವಂ ಚೆನ್ನಾಗಿ ಅಭ್ಯಾಸವಂ ಮಾಳ್ಪು ॥

ಸೂ॥ ಮುಮುಕ್ಷುವಾದ ಯೋಗೀಶ್ವರಂಗೆ ಮುಖ್ಯವಪ್ಪುದರಿಂ ಕೇವಲ ಕುಂಭಕಾಭ್ಯಾಸಸ್ವರೂಪವಂ ವಿಸ್ತರದಿಂ ಪೇಳ್ದು, ಮರೆಯುದಂತೆ ಮರಳಿ ಸೂತ್ರಾಭಿಪ್ರಾಯದಿಂ ಶ್ಲೋಕತ್ರಯದಿಂ ಕ್ರಮದಿಂ ಪೇಳ್ದಪ:—

ಶ್ಲೋ॥ ನತ್ವಾ ಗುರುಂ ಬ್ರಹ್ಮವಿದಾಂ ವರೇಣ್ಯಂ ಜಿತ್ವಾಂತರಸ್ಥಂ ಷಡಮಿತ್ರವರ್ಗಂ । ಸ್ಥಿತ್ವಾ ಸದೈಕಾಂತವಿಶುದ್ಧದೇಶೇ ಧ್ಯಾತ್ವಾ ಶಿವಂ ಭ್ರೂಯುಗಮಧ್ಯಪದ್ಮೇ ॥

ಟೀ॥ ಬ್ರಹ್ಮವಿದಾಂ-ಬ್ರಹ್ಮಸ್ವರೂಪಸಾಕ್ಷಾತ್ಕಾರವುಳ್ಳವರ್ಗೆ, ವರೇಣ್ಯಂ-ಮುಖ್ಯನಾಗಿರ್ಪಂಥ, ಗುರುಂ-ಆಚಾರ್ಯನನು, ನತ್ವಾ-ನಮಸ್ಕರಿಸಿ, ಅಂತರಸ್ಥಂ-ಸೂಕ್ಷ್ಮದೇಹಮಧ್ಯಸ್ಥಿತವಾಗಿರ್ಪಂಥ, ಷಡಮಿತ್ರವರ್ಗಂ-ಕಾಮಕ್ರೋಧಾದ್ಯರಿಷಡ್ವರ್ಗವಂ ಜಿತ್ವಾ-ಗೆಲಿದು, ಸದಾ-ಅನವರತವೂ, ಏಕಾಂತವಿಶುದ್ಧದೇಶೇ- ಜನಸಂಚಾರವಿಲ್ಲದೆ ಮನೋರಮ್ಯವಾದ ಸ್ಥಲದಲ್ಲಿ, ಸ್ಥಿತ್ವಾ-ಇದ್ದು, ಭ್ರೂಯುಗಮಧ್ಯಪದ್ಮೇ-ಹೃದಯಕಮಲದಲ್ಲಿ, ಶಿವಂ-ನಿತ್ಯನಿರ್ಮಲನಪ್ಪ ಶಿವನನು, ಧ್ಯಾತ್ವಾ-ಚಿಂತಿಸಿ ॥

ಶ್ಲೋ|| ಶ್ರುತ್ವಾತದಾನಾಹತದಿವ್ಯನಾದಂ ಧೃತ್ವಾವಿಭಿನ್ನಾಮಲಬಿಂ
ದುರತ್ನಂ। ಪೀತ್ವಾಸುಧಾಂಚಂದ್ರಮಸಃಪತಂತೀಂಛಿತ್ವಾ
ಚಸಂಕಲ್ಪವಿಕಲ್ಪಜಾಲಂ ||೫೪||

ಟೀ|| ತದಾ-ಆಶಿವಧ್ಯಾನಾನಂತರಕಾಲದಲ್ಲಿ, ಅನಾಹತದಿವ್ಯನಾದಂ-ಅಜಪೆಯಳಿ ವಿನಿಂ ತಾನೇ ಘೋಷಿಸುತ್ತಿರ್ಪ ದಿವ್ಯನಾದವನು, ಶ್ರುತ್ವಾ-ಕೇಳಿ, ವಿಭಿನ್ನಾಮಲಬಿಂ ದುರತ್ನಂ-ಶ್ವೇತರಕ್ತಾದಿರೂಪದಿಂ ವಿಚಿತ್ರವಾದ ಬಿಂದುವೆಂಬರತ್ನವನು, ಧೃತ್ವಾ-ಧ ರಿಸಿ, ಚಂದ್ರಮಸಃ-ಚಂದ್ರನದೆಸೆಯಿಂದ, ಪತಂತೀಂ-ಸ್ರವಿಸುತ್ತಿರ್ಪಂಥ, ಸುಧಾಂ- ಅಮೃತವನು, ಪೀತ್ವಾ-ಪಾನವಂಮಾಡಿ, ಸಂಕಲ್ಪವಿಕಲ್ಪಜಾಲಂಚ- " ಅಭಾವೇಭಾ ವಮಾಸಾದ್ಯಸ್ಯಸ್ಥಾನೇಸ್ಥಾನವಮಾದಿಶೇತ್ " ಎಂಬಂತೆ ಭಾವದಿಂ ಸ್ವರೂಪಿಸುವ ಸಂ ಕಲ್ಪಸಮೂಹವನೂ ಅಸ್ವರೂಪವ ನರಿವ ವಿಕಲ್ಪಸಮೂಹವನೂ, ಛಿತ್ವಾ-ಛೇದಿಸಿ||

ಶ್ಲೋ|| ಕೃತ್ವಾತ್ರಿಕೂಟೇದೃಢಬಂಧನಂತಥಾ ಗತ್ವಾತ್ರಿಕೋಣೇ
ಮನಸಾಽನಿಲೈಸ್ಸಹ। ಭಿತ್ವಾ ತಥೈವೋಪರಿಸೂಕ್ಷ್ಮಕುಂ
ಡಲೀಂ ಸ್ಥಿತ್ವಾ ಸಖೇ ವಿಷ್ಣುಪದೇ ಸುಖೀಭವ ||೫೫||

ಟೀ|| ತ್ರಿಕೂಟೇ-ತ್ರಿಕೂಟಸ್ಥಾನದಲ್ಲಿ, ದೃಢಬಂಧನಂ-ದೃಢವಾದ ಬಂಧನವನು, ಕೃತ್ವಾ-ಮಾಡಿ, ತಥಾ-ಹಾಂಗೆ, ತ್ರಿಕೋಣೇ-ತ್ರಿಕೋಣಸ್ಥಾನದಲ್ಲಿ, ಮನಸಾ-ಮನ ಸ್ಸಿನಿಂದ, ಅನಿಲೈಸ್ಸಹ-ಪ್ರಾಣವಾಯುಗಳೊಡನೆ ಕೂಡಿ, ಗತ್ವಾ-ಎಯ್ದಿ, ತಥೈವ- ಹಾಂಗೇ, ಉಪರಿ ನಾಸಿಕಾಗ್ರದಲ್ಲಿಯು, ಸೂಕ್ಷ್ಮಕುಂಡಲೀಂ-ನಾದಬ್ರಹ್ಮಾತ್ಮಕವಾದ ಸೂಕ್ಷ್ಮಕುಂಡಲಿಯನು, ಭಿತ್ವಾ, ಭೇದಿಸಿ, ವಿಷ್ಣುಪದೇ-ಸುಷುಮ್ನಸ್ಥಾನದಲ್ಲಿ, ಸ ಖೇ-ಎಲೈಸ್ನೇಹಿತನಾದ ಶಿಷ್ಯನೆ, ಸುಖೀ-ಆನಂದವುಳ್ಳಾತನು, ಭವ-ಆಗು ||೫೫||

ಸೂ|| ಈ ಪ್ರಕಾರದಿಂ ಪ್ರಾಣಾಯಾಮಜಲದಿಂದೀಶ್ವರಂಗಭಿಷೇಕವಂ ಮಾಳ್ಪ ದೆಂದು ಪೇಳುತ್ತೆ ಬಾಹ್ಯಾಂತರ ಪೂಜಾವಿಧಿಯುಂ ಮುಗಿಸುತ್ತಿರ್ದಪಂ:—

ಶ್ಲೋ|| ಇತ್ಥಂ ಶಿವಂ ವಿಷ್ಣುಪದಸ್ವರೂಪಂ ವಿಷ್ಣುಂಸದಾಭಾವಿತವಿ
ಷ್ಣುಮೂರ್ತಿಂ। ವಿಷ್ಣೋಃಪರಂಕೇವಲಕುಂಭಶುದ್ಧಪ್ರಾ
ಣಾಂಬುನಾ ಸ್ನಾನವಿಧೌ ಭಜಸ್ವ ||೬೦||

ಟೀ|| ಇತ್ಥಂ-ಈ ಪೂರ್ವೋಕ್ತಪ್ರಕಾರದಿಂದೆ, ವಿಷ್ಣುಪದಸ್ವರೂಪಂ-ವಿಷ್ಣು- ವ್ಯಾಪಕವಾದನಾದಕ್ಕೆ,ಪದ-ಆಶ್ರಯವಾದ ಹಂಸವರ್ಣದ್ವಯವೇ, ಸ್ವರೂಪಂ-ಸ್ವರೂ ಪವಾಗಿ ವುಳ್ಳಂಥ, ವಿಷ್ಣುಂ-ವ್ಯಾಪಕವಾದ ದಿವ್ಯನಾದದ ಸ್ವರೂಪವಾಗಿರ್ಪಂಥ, ಸ ದಾ-ಅನವರತವೂ, ಭಾವಿತ ವಿಷ್ಣುಮೂರ್ತಿಂ-ಭಾವಿಸಲ್ಪಟ್ಟ ನಿತ್ಯಾಧಿಷ್ಠಾನವಾದಕುಂ ಡಲಿನಿಯೇ ಸ್ವರೂಪವಾಗಿವುಳ್ಳಂಥ, ವಿಷ್ಣೋಃ-ಆಮೂಲಪ್ರಕೃತಿಯಾದ ಮಹಾಮಾ

ಯೆಗೆ,-ಪರಂ-ಉತ್ತರವಾಗಿರ್ಪಂಥ, ಶಿವಂ-ನಿತ್ಯನಿರ್ಮಲನಾದ ಶಿವನನು, ಸ್ನಾನ
ಅಭಿಷೇಕವಿಧಿಯಲ್ಲಿ, ಕೇವಲಕುಂಭಶುದ್ಧಪ್ರಾಣಾಂಬುನಾ-ಕೇವಲಕುಂಭಕದಿ
ರ್ಮಲವಾದ ಪ್ರಾಣವೆಂಬ ಜಲದಿಂದೆ, ಭಜಸ್ವ-ಭಜಿಸು.

ಇತಿ ಶ್ರೀಮದ್ವೇದವೇದಾಂತಾಗಮ ಪುರಾಣಸ್ಮೃತೀತಿಹಾಸಪ್ರತಿಪಾದಿತ ಶ್ರೀ
ವೀರಶೈವಮಾರ್ಗಸ್ಥಾಪನಾಚಾರ್ಯ ಶ್ರೀಬಸವಾರಾಧ್ಯವಿರಚಿತ ಕರ್ನಾಟಕ
ಟೀಕಾವಿರಾಜಿತಾಯಾಂ-ಶ್ರೀಚೆನ್ನಸದಾಶಿವ ಯೋಗೀಶ್ವರ ವಿರ
ಚಿತಾಯಾಂ-ಶಿವಯೋಗಪ್ರದೀಪಿಕಾಯಾಂ-ಯಮಾದಿಬಾಹ್ಯ
ಚತುರಂಗಪೂಜಾವಿಧಾನಂನಾಮ ದ್ವಿತೀಯಃ ಪಟಲಃ.

ಶ್ರೀಶಿವಾಯ ಪರಬ್ರಹ್ಮಣೇ ನಮಃ.

## (ಅಥತೃತೀಯಃ ಪಟಲಃ.)

ಸೂ॥ ಈಪ್ರಕಾರದಿಂ ಯಮಾದಿಪ್ರಾಣಾಯಾಮಾಂತವಾದ ಬಾಹ್ಯಚತು
ವಿಧಾನಮಂ ಪೇಳ್ದು, ಅನಂತರದಲ್ಲಿ ಪ್ರತ್ಯಾಹಾರಾದಿಯಾದಂತರಂಗಚತುರಂಗ
ನಮಂ ಪೇಳ್ವೆನೆಂದು ಪ್ರತಿಜ್ಞೆಯಂ ಮಾಡುತ್ತಿರ್ದಪಂ:—

ಶ್ಲೋ॥ ಇತಿಯಮಾದಿಚತುರಂಗವಿಧಾನಂಬಾಹ್ಯಮುಕ್ತಮಭಿರಂ
ಜಿತವಾಕ್ಯೈಃ।ಅಥಶಿವಾರ್ಪಿತಮನಾಶ್ಶೃಣುವಕ್ಷ್ಯೇಚಾಂ
ತರಂಗಚತುರಂಗವಿಧಾನಂ ।

ಟೀ॥ ಇತಿ—ಈಪ್ರಕಾರದಿಂದೆ, ಬಾಹ್ಯಂ-ಬಹಿರಂಗವಾಗಿರ್ಪಂಥ, ಯಮಾ
ತುರಂಗವಿಧಾನಂ-ಯಮಾದಿಪ್ರಾಣಾಯಾಮಾಂತವಾದ ಚತುರಂಗವಿಧಾನವು, ಅಭಿ
ತವಾಕ್ಯೈಃ-ಯುಕ್ತಿಪೂರ್ವಕದಿಂದೊಪ್ಪುವ ವಾಕ್ಯಂಗಳಿಂದೆ, ಉಕ್ತಂ-ಪೇಳಲ್ಪಟ್ಟಿ
ಅಥ-ಬಳಿಕ, ಅಂತರಂಗಚತುರಂಗವಿಧಾನಂ- ಮಾನಸಗತವ್ಯಾಪಾರವಹತನ
ತರಂಗವಾದಪ್ರತ್ಯಾಹಾರಾದಿಚತುರಂಗವಿಧಾನವನು, ವಕ್ಷ್ಯೇ-ಪೇಳ್ವೆನು, ಶಿವಾ
ಮನಾಃ-ಶಿವನಲ್ಲಿರಿಸಲ್ಪಟ್ಟಮನವುಳ್ಳಾತನಾಗಿ, ಶೃಣು-ಕೇಳು.

ಸೂ॥ ಶಿವಯೋಗೀಶ್ವರನ ತ್ರಿಕೂಟಸ್ಥಾನದ ಶಿವಲಿಂಗಕ್ಕೆ ಪ್ರಾಣಾಯಾಮ
ದಿಂದಭಿಷೇಕವಂ ಮಾಡಿದ ಸಮನಂತರದಲ್ಲಿ ಪ್ರತ್ಯಾಹಾರದಿಂದೊದವಿದ ಸದ್ಭಾ
ಯೆಂಬ ಗಂಧಾನುಲೇಪನವಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ॥ ಸನ್ಮನೋವಿಹಿತಶಾಣತಲೇಽಸ್ಮಿನ್ ಶ್ರೋತ್ರಮುಖ್ಯವಿಜಿ
ತೇಂದ್ರಿಯವರ್ಗಾತ್ । ಜಾತಘೃಷ್ಟವಿಷಯಾಮಲಗಂಧೈ
ರ್ಲೇಪನಂಕುರುಸದಾಶಿವಲಿಂಗೇ ॥೨॥

ಟೀ॥ ಅಸ್ಮಿನ್-ಈ ಕೇವಲಕುಂಭಕದಿಂದೆ ತ್ರಿಕೂಟಸ್ಥಾನವನ್ನೈದಿದಂಥ, ಸನ್ಮನೋವಿಹಿತಶಾಣತಲೇ-ಉನ್ಮನ್ಯವಸ್ಥೆಯಿಂ ದೃಢವಾದ ಲೇಸನಿಸುವ ಮನಸ್ಸೆಂಬ ವಿಧಿಸಲ್ಪಟ್ಟ ಸಾಣೆಗಲ್ಲಿನಲ್ಲಿ, ಶ್ರೋತ್ರಮುಖ್ಯವಿಜಿತೇಂದ್ರಿಯವರ್ಗಾತ್-ಶ್ರೋತ್ರಮುಂತಾದ ಗೆಲ್ಲಲ್ಪಟ್ಟ ಇಂದ್ರಿಯಂಗಳ ಸಮೂಹದತ್ತಣಿಂ, ಜಾತಘೃಷ್ಟವಿಷಯಾಮಲಗಂಧೈಃ-ಜಾತ-ಪುಟ್ಟಿದ, ಘೃಷ್ಟವಿಷಯ-ನಿವೃತ್ತಿಮುಖದ ವೈರಾಗ್ಯದಿಂದೊರಸಿ ಕಳೆದ ವಿಷಯಂಗಳ ವಾಸನೆಯಿಲ್ಲದಿಹುದರಿಂದೆ, ಅಮಲ-ನಿರ್ಮಲವಾದ, ಗಂಧೈಃ-ಸದ್ವಾಸನೆಯೆಂಬ ಗಂಧಂಗಳಿಂದೆ, ಸದಾಶಿವಲಿಂಗೇ-ಸಕಲನಿಷ್ಕಲಾತ್ಮಕವಾದ ಲಿಂಗದಲ್ಲಿ, ಲೇಪನಂ-ಗಂಧಾನುಲೇಪನವನು, ಕುರು-ಮಾಡು. ॥೭॥

ಸೂ॥ ಇಂದ್ರಿಯದ್ವಾರದಿಂ ಪ್ರಕೃತಿಮುಖವಾದ ಮನದ ವಿಶಾಲವ್ಯಾಪಾರವೇ ಸಂಸಾರಬೀಜವಪ್ಪುದರಿಂ, ನಿವೃತ್ತಿಮುಖದಿಂ ಜ್ಞಾನವೈರಾಗ್ಯಮುದ್ರಾಬಂಧಂಗಳಿಂದೆ ಇಂದ್ರಿಯಂಗಳು ವಿಷಯವಿಮುಖತೆಯಿಂ ಮನದೊಡನೆ ಸಂಕೋಚಿಸುವ ಪ್ರತ್ಯಾಹಾರಯೋಗವುಳ್ಳಾತನೇ ವಿಶಿಷ್ಟನೆಂಬುದನು ಲೌಕಿಕದೃಷ್ಟಾಂತಪೂರ್ವಕವಾಗಿ ಪೇಳ್ದಪಂ-

ಶ್ಲೋ॥ ಸಂಕೋಚ ಮಾಚರತಿ ತತ್ಕಮಠೋಽಂಗಕಾನಾ ಮಂ
ಗೇಯಥಾ ಭುವಿ ತಥಾನಿಖಿಲೇಂದ್ರಿಯಾಣಿ। ಪ್ರತ್ಯಾಹರತ್ಯ
ನಿಶಮಾತ್ಮನಿ ಸಂಯತಾತ್ಮಾ ಮನ್ಯಾಮಹೇ ಪರಮತತ್ತ್ವ
ವಿದಂತಮೇವ ॥೩॥

ಟೀ॥ ಭುವಿ-ಭೂಲೋಕದಲ್ಲಿ, ತತ್ಕಮಠಃ-ಪ್ರಸಿದ್ಧವಾದ ಕೂರ್ಮನು, ಅಂಗಕಾನಾಂ-ತನ್ನ ಶಿರಃಕಂಠಪಾದಾದ್ಯವಯವಂಗಳ, ಸಂಕೋಚನಂ-ಅಡಗಿಸುವುದನು, ಅಂಗೇ-ತನ್ನ ಶರೀರದಲ್ಲಿ, ಯಥಾ-ಹೇಂಗೆ, ಆಚರತಿ-ಆಚರಿಸುತ್ತಿರ್ದ್ದೀತೋ, ತಥಾ-ಹಾಂಗೆ, ಸಂಯತಾತ್ಮಾ-ನಿಯತಾತ್ಮನಾದ ಯೋಗೀಶ್ವರನು, ನಿಖಿಲೇಂದ್ರಿಯಾಣಿ-ಸಕಲೇಂದ್ರಿಯಂಗಳನು, ಅನಿಶಂ-ಅವಾಗವೂ, ಆತ್ಮನಿ- ತನ್ನ ಹೃದಯಕಮಲಕರ್ಣಿಕಾಮಧ್ಯದಲ್ಲಿ, ಪ್ರತ್ಯಾಹರತಿ-ಸಂಕೋಚಿಸುತ್ತಿರ್ದ್ದನೋ, ತಮೇವ-ಆಯೋಗೀಶ್ವರನನ್ನೇ, ಪರಮತತ್ತ್ವವಿದಂ-ವಿಶಿಷ್ಟತತ್ತ್ವಜ್ಞಾನಿಯನ್ನಾಗಿ, ಮನ್ಯಾಮಹೇ-ತಿಳಿವುತ್ತಿರ್ದ್ದೇವೆ ॥

ತಾತ್ಪರ್ಯಂ—ಮತ್ತೆ ಕೆಲವು ಶಾಸ್ತ್ರಾಂತರಂಗಳಿಂ ಪೇಳ್ದ ಪ್ರತ್ಯಾಹಾರವೆಂತೆಂದೊಡೆ-ಬಾಹ್ಯಾರ್ಥಂಗಳಲ್ಲೆರಗುವ ಚಿತ್ತವಂ ಹೃದಯಾಕಾಶದಲ್ಲಿ ನಿಲಿಸುವುದು ಪ್ರತ್ಯಾಹಾರ. ಹೃದಯಸ್ಥಾನದಿಂ ಚಲಿಸುವ ಚಿತ್ತವಂ ಮರಳಿ ಹೃದಯಸ್ಥಾನದಲ್ಲಿ ನಿಲಿಸುವುದೂ ಪ್ರತ್ಯಾಹಾರ. ಅನಾತ್ಮಸ್ವರೂಪವಾದ ದೇಹೇಂದ್ರಿಯಾದಿಕದಲ್ಲಿಯು ಆ

ತ್ಮಾಭಿಮಾನವಮಂಬಿಡಿಸಿ, ಸ್ವಸ್ವರೂಪಸಾಕ್ಷಾತ್ಕಾರವಮಂ ಮಾಳ್ಪುದೊ ಪ್ರತ್ಯಾಹಾರ, ಎಂದು ಪೇಳ್ವ ಪ್ರತ್ಯಾಹಾರಂಗಳ್ ಈಪ್ರತ್ಯಾಹಾರದೊಳಂತರ್ಭಾವವೆಂದು ತಿಳಿವುದು.

ಸೂ ॥ ಈಪ್ರಕಾರದ ಪ್ರತ್ಯಾಹಾರದಿಂದೊದವಿದ ಸದ್ವಾಸನಾಗಂಧಾನುಲೇಪನಾನಂತರದಲ್ಲಿ ಶಿವಲಿಂಗವಂ ಧ್ಯಾನಕುಸುಮಂಗಳಿಂ ಪೂಜಿಪುದೆಂದು ಪೇಳ್ದಪಂ—

ಶ್ಲೋ॥ ಆಧಾರಮುಖ್ಯನಳಿನೈರ್ವಿವಿಧೈಸ್ಸುವರ್ಣೈಸ್ತನ್ಮಧ್ಯಭಾಸುರತರೈಸ್ಸುಮನೋಭಿರಂಗ। ನಾನಾವಿಧೈಸ್ಸಗುಣನಿರ್ಗುಣಭಾವಪುಷ್ಪೈಶ್ಶ್ರೀಲಿಂಗಮೂರ್ತಿಮನಿಶಂಹೃದಿಪೂಜಯಸ್ವ॥

ಟೀ॥ ಅಂಗ-ಎಲೆವಂಗನೆ, ವಿವಿಧೈಃ-ಚತುರ್ದಳಾದಿಭೇದದಿಂ ಪಲವು ಪ್ರಕಾರವಾಗಿರ್ಪಂಥ, ಆಧಾರಮುಖ್ಯನಳಿನೈಃ-ಆಧಾರಸ್ಥಾನದ ಕಮಲಮುಂತಾದ ಕಮಲಂಗಳಿಂದವೂ, ತನ್ಮಧ್ಯಭಾಸುರತರೈಃ-ಆಕಮಲಂಗಳ ಮಧ್ಯಂಗಳಲ್ಲಿ ಅತಿ ಪ್ರಕಾಶರೂಪವಾಗಿರ್ಪಂಥ, ಸುವರ್ಣೈಃ-ಲೇಸಾದ ನಕಾರ ಮಕಾರ ಶಿಕಾರ ವಾಕಾರ ಯಕಾರ ಅಕಾರ ಉಕಾರ ಬಿಂದುಗಳೆಂಬ ವರ್ಣಂಗಳಾಗಿರ್ಪಂಥ, ಸುಮನೋಭಿಃ-ಪುಷ್ಪಂಗಳಿಂದವೂ, ನಾನಾವಿಧೈಃ-ನಾನಾಪ್ರಕಾರವಾಗಿರ್ಪಂಥ, ಸಗುಣ ನಿರ್ಗುಣಭಾವಪುಷ್ಪೈಃ-ಸಾಲಂಬನಿರಾಲಂಬ ವಿಷಯಂಗಳಾದ ಭಾವಕುಸುಮಂಗಳಿಂದವೂ, ಶ್ರೀಲಿಂಗಮೂರ್ತಿಂ-ಒಪ್ಪುವಲಿಂಗಮೂರ್ತಿಯನ್ನು,ಹೃದಿ-ಹೃದಯಕಮಲದಲ್ಲಿ, ಅನಿಶಂ-ಅನವರತವೂ, ಪೂಜಯಸ್ವ- ಪೂಜಿಸು. (" ಆಧಾರೇಲಿಂಗನಾಭೌಹೃದಯಸರಸಿಜೇತಾಲುಮೂಲೇ ಲಲಾಟೇ ದ್ವೇಪತ್ರೇಷೋಡಶಾರೇದ್ವಿದಶದಶದಳೇ ದ್ವಾದಶಾರ್ಧೇಚತುಷ್ಕೇ। ವಾಸಾಂತೇಬಾದಿಲಾಂತೇಡಫಕಠಸಹಿತೇ ಕಂಠದೇಶೇಸ್ವರಾಣಾಂ ಹಂಕ್ಷಂ ತತ್ವಾರ್ಥಯುಕ್ತಂ ಸಕಲದಳಗತಂ ವರ್ಣರೂಪಂ ನಮಾಮಿ " ಎಂಬ ಕಮಲಂಗಳಿಂದವೂ ಪೂಜಿಸೆಂಬುದರ್ಥಂ.)॥

ಸೂ॥ ಯೋಗೀಶ್ವರರ ಧ್ಯಾನಯೋಗಕ್ಕೆ ಸ್ಥಾನಂಗಳಾದ ನವವಿಧಾಧಾರಂಗಳಂ ಪೇಳ್ದಪಂ—

ಶ್ಲೋ॥ ಆಧಾರಲಿಂಗಮಣಿಪೂರಕಹೃದ್ವಿಶುದ್ಧಿ ಭ್ರೂಮಧ್ಯಮಸ್ತಕನಭೋಬಿಲಸಂಜ್ಞಕಾನಿ। ಏತಾನಿತಾನಿಯಮಿನಾಂಸುಖದಾಯಕಾನಿ ಧ್ಯಾನಸ್ಥಲಾನಿಸುವಿಚಿತ್ರತರಾಣಿ ನೂನಂ ॥೫॥

ಟೀ ॥ ಆಧಾರ......ಸಂಜ್ಞಕಾನಿ- ಆಧಾರ-ಆಧಾರಸ್ಥಾನ, ಲಿಂಗ-ಸ್ವಾಧಿಷ್ಠಾನಸ್ಥಾನ, ಮಣಿಪೂರಕ-ನಾಭಿಸ್ಥಾನ, ಹೃತ್-ಹೃದಯಸ್ಥಾನ, ವಿಶುದ್ಧಿ-ಕಂಠಸ್ಥಾನ, ಭ್ರೂಮಧ್ಯ-ಕೂರ್ಚಸ್ಥಾನ, ಮಸ್ತಕ-ಶಿರಸ್ಸ್ಥಾನ, ನಭಃ-ಬ್ರಹ್ಮರಂಧ್ರಸ್ಥಾನ, ಬಿಲ-ಚಿದಾಕಾಶಸ್ಥಾನ, ಎಂಬ, ಸಂಜ್ಞಕಾನಿ-ಪೆಸರುಳ್ಳಂಥ, ಏತಾನಿ-ಈಪ್ರತ್ಯಕ್ಷರೂಪವಾಗಿರ್ಪಂಥ, ತಾನಿ-ಆಲೋಕಪ್ರಸಿದ್ಧಂಗಳಾಗಿರ್ಪಂಥ, ಸುವಿಚಿತ್ರತರಾಣಿ- ಅತ್ಯಾಶ್ಚರ್ಯ

ರೂಪಂಗಳಾಗಿರ್ಪಂಥ, ಧ್ಯಾನಸ್ಥಲಾನಿ- ಧ್ಯಾನಸ್ಥಲಂಗಳು, ಯಮಿನಾಂ- ಯತೀಶ್ವರರ್ಗೆ, ಸುಖದಾಯಕಾನಿ-ಆನಂದವಂಕೊಡುವಂಥುವು. ನೂನಂ-ಸತ್ಯವು ||೫||

ಸೂ|| ಈಸ್ಥಲಂಗಳಲ್ಲಿ ಧ್ಯಾನವಂ ಮಾಳ್ಪುದಕ್ಕೆ ಧ್ಯಾನಮುದ್ರೆಯಂ ಪೇಳ್ದಪಂ-

ಶ್ಲೋ|| ಅಂತರ್ಲಕ್ಷ್ಯೋಽನಿಯಮಿತಬಹಿಶ್ಚಕ್ಷುರಿಷ್ಟಾಸನಸ್ಥೋಯತ್ರಾಕಾ
ಯಾವಕೃತ್ಯಸ್ತ್ವಮನಿಶಮಹೋಧ್ಯಾನಮುದ್ರೇಯಮಸ್ಯಾಂ ।
ಸ್ವಾತ್ಮಾಂತಸ್ಥಂಧ್ರುವಮವಿಚಲಂಶಾಂತಮದ್ವೈತರೂಪಂ
ಶೈವಂಧ್ಯಾನಂಕುರುಸನುಸಖೇತ್ವದ್ಯೈವಮುಕ್ತಸ್ತ್ವಮೇವ||೬||

ಟೀ|| ಅಂತರ್ಲಕ್ಷ್ಯಃ-ಲಕ್ಷ್ಯದಂತರ್ಮುಖವಾದ ಚಿತ್ತವು, ನಿಯಮಿತಬಹಿಶ್ಚಕ್ಷುಃ-ನಿಯಮದಿಂ ಸ್ಥಿರವಾಗಲ್ಪಟ್ಟ ಬಾಹ್ಯದೃಷ್ಟಿಯು, ಇಷ್ಟಾಸನಃ-ಪದ್ಮಾಸನಾದಿಕವೊಳಗೆ ತನಗಿಷ್ಟವಾದಾಸನವು, ಯತ್ರ-ಆವುದಾನೊಂದು, ಕಾಯಾವಕೃತ್ಯಂ-ಶರೀರದ ರುಜುತ್ವವು, ಅನಿಶಂ ಅನವರತವೂ, ಅಹೋ-ಆಶ್ಚರ್ಯವಾದುಥ, ಇಯಂ-ಇದು, ಧ್ಯಾನಮುದ್ರಾ-ಧ್ಯಾನಮುದ್ರೆಯು, ಸನುಸಖೇ-ಎಲೆ ಸ್ನೇಹಿತನೆ, ಅಸ್ಯಾಂ-ಈಧ್ಯಾನಮುದ್ರೆಯಲ್ಲಿ, ಸ್ವಾತ್ಮಾಂತಸ್ಥಂ-ತನ್ನ ಹೃತ್ಕಮಲವಾಸಿಯಾಗಿರ್ಪಂಥ, ಧ್ರುವಂ-ನಿತ್ಯವಾಗಿರ್ಪಂಥ, ಅವಿಚಲಂ-ಪೂರ್ಣಮಪ್ಪುದರಿಂ ಚಲನಲ್ಲದಿರ್ಪಂಥ, ಶಾಂತಂ-ನಿಷ್ಕಲಮಪ್ಪುದರಿಂ ಶಾಂತಸಂಜ್ಞೆಯುಳ್ಳಂಥ, ಅದ್ವೈತರೂಪಂ-ಏಕಾತ್ಮವಾದಿಗಳ್ಪೇಳ್ವಂತೆ ತಾನೇ ಜೀವಪರಮಾದಿನ್ನೈತರೂಪವಂತಾಳದಿರ್ಪಂಥ,ಶೈವಂ-ಶಿವಸಂಬಂಧವಾದಂಥ, ಧ್ಯಾನಂ-ಧ್ಯಾನವನು, ಕುರು-ಮಾಡು. ಅದ್ಯೈವ-ಈಗಲೇ, ತ್ವಂ-ನೀನು, ಮುಕ್ತೋಽಸಿ-ಮುಕ್ತನಲಾ. ||೬||

ಸೂ|| ಈ ಧ್ಯಾನಮುದ್ರಾಪೂರ್ವಕದಿಂ ಧ್ಯಾನಿಸುವ ಧ್ಯಾನಸ್ಥಲಂಗಳಲ್ಲಿ ಯೋಗೀಶ್ವರರು ನವಚಕ್ರಮಂ ಪೇಳ್ವರೆಂದು ಪೇಳ್ದಪಂ:—

ಶ್ಲೋ|| ಧ್ಯಾನಸ್ಥಲೇಷುಸರ್ವೇಷುನವಚಕ್ರಾಣಿಯೋಗಿಭಿಃ । ಶ್ರೇ
ಷ್ಠಾನಿತಾನಿಕಥ್ಯಂತೇವಕ್ಷ್ಯಾಮಶ್ಶೃಣುತೇವಯಂ ||೭||

ಟೀ|| ಸರ್ವೇಷು-ಸಮಸ್ತವಾಗಿರ್ಪಂಥ, ಧ್ಯಾನಸ್ಥಲೇಷು-ಆಧಾರಾದಿಧ್ಯಾನಸ್ಥಲಂಗಳಲ್ಲಿ, ಯೋಗಿಭಿಃ-ಯೋಗೀಶ್ವರರಿಂದೆ, ಶ್ರೇಷ್ಠಾನಿ-ಶ್ರೇಷ್ಠಂಗಳಾಗಿರ್ಪಂಥ, ನವಚಕ್ರಾಣಿ-ನವಚಕ್ರಂಗಳು, ಕಥ್ಯಂತೇ-ಪೇಳಲ್ಪಡುತ್ತಿಹವು, ತಾನಿ-ಆನವಚಕ್ರಂಗಳನು, ತೇ-ನಿನಗೆ, ವಯಂ-ನಾವು, ವಕ್ಷ್ಯಾಮಃ-ಪೇಳ್ವೆವು, ಶೃಣು-ಕೇಳು. ||೭||

ಸೂ|| ಈನವಚಕ್ರಂಗಳೊಳ್ ಸಕಲಾಧಾರಮಪ್ಪುದರಿಂ ಮೂಲಾಧಾರಸಂಜ್ಞೆಯುಳ್ಳ ಆಧಾರಸ್ಥಾನದ ಚಕ್ರಮಂ ಪೇಳ್ದಪಂ:—

ಶ್ಲೋ|| ಮೂಲಾಧಾರೇತ್ರಿಧಾವರ್ತ್ತಂ ಬ್ರಹ್ಮಚಕ್ರಂಭಗೋಪಮಂ ।
ತತ್ರಹೇಮನಿಭಂಧ್ಯಾಯೇದಥಶ್ಶಕ್ತಿಮಭೀಷ್ಟದಾಂ ||೮||

ಟೀ॥ ಮೂಲಾಧಾರೇ-ಮೂಲಾಧಾರಸ್ಥಾನದಲ್ಲಿ, ತ್ರಿಧಾವರ್ತಂ-ಮೂರುಬಳಸನು ಳ್ಳಂಥ, ಭಗೋಪಮಂ- ತ್ರಿಕೋಣಾಕಾರವಾಗಿರ್ಪಂಥ, ಬ್ರಹ್ಮಚಕ್ರಂ- ಬ್ರಹ್ಮಚಕ್ರ ವಿರ್ಪುದು. ತತ್ರ-ಆಬ್ರಹ್ಮಚಕ್ರಮಧ್ಯದಲ್ಲಿ, ಹೇಮನಿಭಾಂ-ಸುವರ್ಣಕಾಂತಿಗೆ ಸಮಾ ನವಾಗಿರ್ಪಂಥ, ಅಭೀಷ್ಟದಾಂ-ಇಷ್ಟಾರ್ಥವಂಕೊಡುವಂಥ, ಅನಶ್ಶಕ್ತಿಂ-ಆಧಾರ ಶಕ್ತಿಯನು, ಧ್ಯಾಯೇತ್-ಧ್ಯಾನಿಪುದು. (" ದ್ವ್ಯಂಗುಲಾದೂರ್ಧ್ವ-ಕಂಪಾಯೋ ಸ್ತ್ರೀಘನ್ಯದ್ವ್ಯಂಗುಲಾವನಃ । ಸ್ಥಾನಮಾಧಾರಚಕ್ರಂಸ್ಯಾತ್ಕೀರ್ತಿತಂಶಿವಶಾಸನೇ " ಎಂದುದಾಗಿ.) ॥೮॥

ಸೂ॥ ಲಿಂಗಸ್ಥಾನದಲ್ಲಿಸು ಸ್ವಾಧಿಷ್ಠಾನಚಕ್ರವಂಪೇಳ್ದಪಂ:—

ಶ್ಲೋ॥ ಸ್ವಾಧಿಷ್ಠಾಸಂತತಶ್ಚಕ್ರಂತತ್ರಚಾತುರ್ದಳಾಂಬುಜಂ ।
ತದೇವೋಡ್ಡೀಯಣಂಧ್ಯಾಯೇತ್ಪಶ್ಚಿಮಾಭಿಮುಖಂ ಶಿವಂ॥೯॥

ಟೀ॥ ತತಃ.ಅನಂತರದ ಲಿಂಗಸ್ಥಾನದಲ್ಲಿ, ಸ್ವಾಧಿಷ್ಠಾಸಂ-ಆತ್ಮಂ.ಗಾಶ್ರಯವಹ ತನದಿಂ ಸ್ವಾಧಿಷ್ಠಾನಸಂಜ್ಞೆಯುಳ್ಳ, ಚಕ್ರಂ-ಚಕ್ರವು, ತತ್ರ-ಆ ಚಕ್ರದಲ್ಲಿ, ಚಾತು ರ್ದಳಾಂಬುಜಂ-ನಾಲ್ಕೆಸಳಕಮಲವು, ತದೇವ-ಆ ಸ್ವಾಧಿಷ್ಠಾನಚಕ್ರವೇ, ಉಡ್ಡೀಯ ಣಂ-ಉಡ್ಡಿಯಾಣಪೀಠವು. ("ಉಡ್ಯಾಣಂ ಕುರುತೇಯಸ್ಮಾದವಿಶ್ರಾಂತಂಮಹಾಖಗಃ। ಉಡ್ಯಾಣಂಚತದೇವಸ್ಯಾದತ್ರಬಂಧೋಽಭಿಧೀಯತೇ " ಎಂದುದಾಗಿ, ಪ್ರಾಣರೂಪಿನಿಂ ಪರಮಹಂಸಾತ್ಮಕನಾದ ಶಿವನು ಪಶ್ಚಿಮದ್ವಾರದಿಂದೂರ್ಧ್ವಕ್ಕೆಯುದ್ದುವತಾಣವೆಂಬುದ ರ್ಥಂ.) ತತ್ರ-ಆ ಪೀಠದಲ್ಲಿ, ಪಶ್ಚಿಮಾಭಿಮುಖಂ-ಪಶ್ಚಿಮದ್ವಾರದತ್ತಲಭಿಮುಖನಾಗಿ ರ್ಪಂಥ, ಶಿವಂ-ಸಕಲವರ್ಣಾಧಾರದಿಂ ಲಿಂಗರೂಪನಾದ ಶಿವನನು, ಧ್ಯಾಯೇತ್-ಧ್ಯಾ ನಿಪುದು. ॥೯॥

ಸೂ॥ ಅನಂತರದಲ್ಲಿ ವರ್ಣಂಗಳೆಂಬ ಮಣಿಗಳ ಕಾಂತಿಪ್ರವಾಹಕ್ಕೂ ರತ್ನ ಕಾಂತಿಪ್ರವಾಹಕ್ಕೂ ಕಾರಣವಪ್ಪುದರಿಂ ಮಣಿಪೂರಕಸಂಜ್ಞೆಯನುಳ್ಳ ನಾಭಿಸ್ಥಾನದ ಚಕ್ರವಂ ಪೇಳ್ದಪಂ:—

ಶ್ಲೋ॥ ಪಂಚಾವರ್ತಂನಾಭಿಚಕ್ರಂಸರ್ಪಾಕಾರಾಂತಟಿನ್ನಿಭಾಂ ।
ತತ್ರಕುಂಡಲಿನೀಂಶಕ್ತಿಂ ಸರ್ವಸಿದ್ಧಿಪ್ರದಾಂಸ್ಮರೇತ್ ॥೧೦॥

ಟೀ॥ನಾಭಿಚಕ್ರಂ-ನಾಭಿಸ್ಥಾನದಮಣಿಪೂರಕಚಕ್ರವು, ಪಂಚಾವರ್ತಂ-ಐದು ವಲಯಮುಳ್ಳಂತಹುದು, ತತ್ರ-ಆಚಕ್ರದಲ್ಲಿ, ಸರ್ಪಾಕಾರಾಂ-ಸುಪ್ತಸರ್ಪನಾಕಾರವು ಳ್ಳಂಥ, ತಟಿನ್ನಿಭಾಂ-ಮಿಂಚಿಗೆಸಮಾನವಾದ ಕಾಂತಿಯುಳ್ಳಂಥ, ಸರ್ವಸಿದ್ಧಿಪ್ರದಾಂ-ಸ ಕಲಸಿದ್ಧಿಗಳಂ ಕೊಡುವಂಥ, ಕುಂಡಲಿನೀಂಶಕ್ತಿಂ-ಸರ್ಪಾಕಾರವಪ್ಪುದರಿಂ ಕುಂಡಲಿನಿ ಯೆಂಬಪೆಸರುಳ್ಳ ಶಕ್ತಿಯನು, ಸ್ಮರೇತ್-ಧ್ಯಾನಿಸುವುದು. ॥೧೦॥

ಸೂ॥ ಅನಂತರದಲ್ಲಿ ಅನಾಹತನಾದಕ್ಕೆ ಕಾರಣವಹುದರಿಂದನಾಹತವೆನಿಸುವ ಹೃದಯಸ್ಥಾನದ ಚಕ್ರಮಂ ಪೇಳ್ದಪಂ:—

ಶ್ಲೋ॥ ಅಧೋಮುಖಾಷ್ಟಪತ್ರಾಬ್ಜಯುಕ್ತಂಹೃಚ್ಚಕ್ರಮಿಷ್ಟ
ದಂ । ತನ್ಮಧ್ಯಕರ್ಣಿಕಾಂಜ್ಯೋತಿರ್ಲಿಂಗಾಕಾರಾಮಿ
ಮಾಂಸ್ಮರೇತ್ ॥೧೧॥

ಟೀ॥ ಹೃಚ್ಚಕ್ರಂ-ಹೃದಯಚಕ್ರವು, ಅಧೋಮುಖಾಷ್ಟಪತ್ರಾಬ್ಜಯುಕ್ತಂ-ಕ ದಳೀಕುಸುಮದಂತಧೋಮುಖವಾದೆಂಟುಸಿಸಳಕಮಲದಿಂದೆ ಕೂಡಲ್ಪಟ್ಟಂತಹುದು. (ವಿಕಾಸವಾದ ಬಾಹ್ಯದಳಂಗಳೆಂಟು, ತನ್ಮಧ್ಯದಲ್ಲಿ ಗೋಪ್ಯವಾದ ದಳಂಗಳ್ನಾಲ್ಕೆಂ ಬುದರ್ಥಂ) ಇಷ್ಟದಂ- ಇಷ್ಟಾರ್ಥಮಂಕೊಡುವಂತಹುದು. ಇಮಾಂ-ಈಪ್ರತ್ಯಕ್ಷರೂ ಪವಾಗಿರ್ಪಂಥ, ತನ್ಮಧ್ಯಕರ್ಣಿಕಾಂ-ಆ ಕಮಲಮಧ್ಯಕರ್ಣಿಕೆಯನು, ಜ್ಯೋತಿರ್ಲಿಂ ಗಾಕಾರಾಂ-ಜ್ಯೋತಿರ್ಮಯವಾದ ಲಿಂಗಾಕಾರವನ್ನಾಗಿ, ಸ್ಮರೇತ್-ಧ್ಯಾನಿಸುವುದು. ॥

ಸೂ॥ ವಿಮಲರೂಪವಪ್ಪುದರಿಂ ವಿಶುದ್ಧಿಸಂಜ್ಞೆಯುಳ್ಳ ಕಂಠಸ್ಥಾನದ ಚಕ್ರ ಮಂ ಪೇಳ್ದಪಂ:—

ಶ್ಲೋ॥ ಪಂಚಮಂಕಂಠಚಕ್ರಂಚತತ್ರಾಂಗುಲಚತುರ್ಥಕೇ ।
ಇಡಾಪಿಂಗಳಯೋರ್ಮಧ್ಯೇಸುಷುಮ್ನಾಂಸುಸ್ಥಿರಾಂಸ್ಮರೇತ್॥

ಟೀ॥ ಕಂಠಚಕ್ರಂಚ-ಕಂಠಚಕ್ರವು, ಪಂಚಮಂ-ಅಯ್ದನೆಯದು, ತತ್ರ-ಆ ಚಕ್ರದಲ್ಲಿ, ಅಂಗುಲಚತುರ್ಥಕೇ-ನಾಲ್ಕಂಗುಲಪ್ರಮಾಣದಲ್ಲಿ, ಇಡಾಪಿಂಗಳಯೋಃ- ಇಡಾಪಿಂಗಳನಾಡಿಗಳ, ಮಧ್ಯೇ-ಮಧ್ಯದಲ್ಲಿ, ಸುಸ್ಥಿರಾಂ-ಅತ್ಯಂತಸ್ಥಿರವಾಗಿರ್ಪಂಥ, ಸುಷುಮ್ನಾಂ-ಸುಷುಮ್ನೆಯನು, ಸ್ಮರೇತ್-ಧ್ಯಾನಿಸುವುದು. ("ಇಡಾವಹತಿವಾಮೇ ಚಪಿಂಗಳಾಯಾತಿದಕ್ಷಿಣೇ । ಇಡಾಪಿಂಗಳಯೋರ್ಮಧ್ಯೇ ಸುಷುಮ್ನಾಸುಖರೂಪಿಣೀ" ಎಂದುದಾಗಿ, ಆನಂದಸ್ವರೂಪಿಣಿಯಾದ ಸುಷುಮ್ನೆಯಲ್ಲಿ ಧ್ಯಾನಿಪುದೆಂಬುದರ್ಥಂ.)

ಸೂ॥ ಅನಂತರದೊಳಾರನೆಯ ಚಕ್ರಮಂ ಪೇಳ್ದಪಂ:—

ಶ್ಲೋ॥ ಷಷ್ಠಂಚಘಂಟಿಕಾಲಿಂಗಮೂಲಂತದ್ರಾಜದಂತಕಂ ।
ಧ್ಯಾಯೇತ್ತದ್ದಶನಾದ್ವಾರಂ ತತ್ರಶೂನ್ಯಂಸುಸಿದ್ಧಯೇ ॥೧೩॥

ಟೀ॥ ಘಂಟಿಕಾಲಿಂಗಮೂಲಂಚ-ಜಿಹ್ವೆಯ ಅಧೋಭಾಗವಾದ ಘಂಟಿಕಾಲಿಂ ಗಮೂಲವು, ತದ್ರಾಜದಂತಕಂ-ಪ್ರಸಿದ್ಧವಾದ ದಂತಂಗಳ ಊರ್ಧ್ವಭಾಗವಾದ ರಾಜ ದಂತಕವು, ತದ್ದಶನಾದ್ವಾರಂ-ಪ್ರಸಿದ್ಧವಾದದಂತಪಙ್ತಿಗಳ ಮಧ್ಯದ್ವಾರವು, ಷಷ್ಠಂ- ಆರನೆಯಚಕ್ರವೆನಿಪುದು. ತತ್ರ- ಆ ಚಕ್ರದಲ್ಲಿ, ಸುಸಿದ್ಧಯೇ-ಅಮೃತಸಿದ್ಧಿಗೋ ಸ್ಕರ, ಶೂನ್ಯಂ-ಬಿಂದುಸ್ವರೂಪವನು, ಧ್ಯಾಯೇತ್-ಸ್ಮರಿಸುವುದು. ॥೧೩॥

ಸೂ॥ ಅನಂತರದೊಳೇಳನೆಯ ಚಕ್ರಮಂ ಪೇಳ್ದಪಂ:—

ಶ್ಲೋ॥ ಭ್ರೂಚಕ್ರಂಸಪ್ತಮಂತ್ವೇಕನಾಳಕಂದಂಸುವಾಕ್ಪ್ರದಂ।
ಧ್ಯಾಯೇದ್ದೀಪಶಿಖಾಕಾರಂತನ್ಮಧ್ಯೇಜ್ಞಾನಲೋಚನಂ ॥೧೪॥

ಟೀ॥ ಭ್ರೂಚಕ್ರಂತು-ಭ್ರೂಚಕ್ರವಾಯಿತ್ತಾದರೆ, ಸಪ್ತಮಂ-ಏಳನೆಯದು, ಏಕನಾಳಕಂದಂ-ಏಕನಾಳವಾದ ಸುಷುಮ್ನೆಗೆ ಮೂಲಸ್ಥಾನವಾದಂತಹುದು. ಸುವಾಕ್ಪ್ರದಂ-ಲೇಸಾದವಾಕ್ಸಿದ್ಧಿಯಂ ಕೊಡುವಂತಹುದು, ತನ್ಮಧ್ಯೇ-ಆಚಕ್ರಮಧ್ಯದಲ್ಲಿ, ದೀಪಶಿಖಾಕಾರಂ- ದೀಪಜ್ವಾಲೆಗೆ ಸಮಾನವಾದ, ಜ್ಞಾನಲೋಚನಂ-ಜ್ಞಾನನೇತ್ರವೆನಿಸುವ ಪ್ರಸಾದಜ್ಯೋತಿಯನು, ಧ್ಯಾಯೇತ್-ಧ್ಯಾನಿಪುದು.

ಸೂ॥ ಅನಂತರದೊಳೆಂಟನೆಯ ಚಕ್ರಮಂ ಪೇಳ್ದಪಂ:—

ಶ್ಲೋ॥ ಬ್ರಹ್ಮರಂಧ್ರೇಽಷ್ಟಮಂಚಕ್ರಂನಿರ್ವಾಣಾಖ್ಯಂಸುಷುಮ್ನಕಂ।
ತತ್ರಜಾಳಂಧರಂಧೂಮಶಿಖಾಭಂಮೋಕ್ಷದಂಭವೇತ್ ॥೧೫॥

ಟೀ॥ ಬ್ರಹ್ಮರಂಧ್ರೇ- ಪರಮನಾಪಬ್ರಹ್ಮದ್ವಾರವೆನಿಪ ಬ್ರಹ್ಮರಂಧ್ರಸ್ಥಾನದಲ್ಲಿ, ಸುಷುಮ್ನಕಂ-ಲೇಸಾದ ಸುಖಸ್ವರೂಪವಾಗಿರ್ಪ್ಪಂಥ, (ಸುಷುಮ್ನಕವೆಂದರೆ ಪರಮಾನಂದರೂಪವೆಂಬುದರ್ಥಂ, ಮೇಣು-ಸುಷುಮ್ನಕವೆಂದರೆ ಸಕಲಕಾಂತಿಗಳ್ಗೆ ಬೀಜರೂಪವಾದ ತರಣಿಯ ಪ್ರಥಮಕಿರಣಪ್ರಭೆಯುಳ್ಳುದೆಂಬುದರ್ಥಂ) ನಿರ್ವಾಣಾಖ್ಯಂ-ನಿರ್ವಾಣವೆಂಬಪೆಸರುಳ್ಳಂಥ, ಚಕ್ರಂ-ಚಕ್ರವು, ಅಷ್ಟಮಂ-ಎಂಟನೆಯದು. ತತ್ರ-ಆ ಚಕ್ರದಲ್ಲಿ, ಧೂಮಶಿಖಾಭಂ-ವಹ್ನಿಸಮಾನವಾಗಿರ್ಪಂಥ, ಜಾಳಂಧರಂ-ಜಾಳಂಧರವೆಂಬ ಪೀಠವು, ಮೋಕ್ಷದಂ-ಮೋಕ್ಷವಕೊಡುವಂತಹುದು. ಭವೇತ್-ಅಹುದು.॥

ಸೂ॥ ಅನಂತರದೊಳೊಂಭತ್ತನೆಯ ಚಕ್ರಮಂಪೇಳ್ದಪಂ:—

ಶ್ಲೋ॥ ಆಕಾಶಚಕ್ರಂನವಮಂಪ್ರಶಸ್ತಂತ್ರಿಕೂಟಕಂಪೂರ್ಣಗಿರೇಶ್ಚಪೀಠಂ। ತತ್ರೋರ್ಧ್ವಶಕ್ತಿಂಸುಖದಾಂಸುಶೂನ್ಯಾಂ
ಧ್ಯಾಯೇದ್ದ್ವಿಯಷ್ಟಾರಸರೋಜಮಧ್ಯೇ ॥೧೬॥

ಟೀ॥ ನವಮಂ-ಒಂಭತ್ತನೆಯದು, ಆಕಾಶಚಕ್ರಂ-ವ್ಯೋಮವಾಕಾಶಚಕ್ರವೆನಿಪುದು, ಪ್ರಶಸ್ತಂ-ಪೂಜ್ಯವಾಗಿರ್ಪಂಥ, ತ್ರಿಕೂಟಕಂ-ಮಂಡಲತ್ರಯಂಗಳೆಂಬ ನಾದಬಿಂದುಕಲೆಗಳೆಂಬ ವರ್ಣತ್ರಯಂಗಳ ಕೂಟದಿಂದೇಕಸ್ವರೂಪವಾಗಿರ್ಪಂತಹುದು, ಪೂರ್ಣಗಿರೇಃ- ಚಂದ್ರಸೂರ್ಯಸಂಚಾರದಿಂ ಮಹಾಮೇರುವೆನಿಸುವ ಪೂರ್ಣಗಿರಿಯ, ("ಪೂರ್ಣಾದ್ರಿಸ್ಸರಸ್ವಲೋಕಭ್ರೂಮಧ್ಯೋರ್ದ್ಧೇವಸದ್ಮ ಹೇಮನಗಃ" ಎಂದುದಾಗಿ,) ಆ ಗಿರಿಯಮೇಲಣ, ಪೀಠಂ-ದಿವ್ಯಪೀಠವಾಗಿರ್ಪಂತಹುದು, ತತ್ರ-ಆ ಚಕ್ರದಲ್ಲಿಯು, ದ್ವಿಯಷ್ಟಾರಸರೋಜಮಧ್ಯೇ-ಷೋಡಶದಳಾತ್ಮಕ ಕಮಲಮಧ್ಯದಲ್ಲಿ, ಸುಖದಾಂ-ನಿರ್ವಿಕಲ್ಪಕಾನಂದವಂಕೊಡುವಂಥ, ಸುಶೂನ್ಯಾಂ-ಸಕಲ ವ್ಯಾಪಾರವಿಮುಖತೆಯಿಂ ಪರ

ಮಶೂನ್ಯವಾಗಿರ್ಪಂಥ, ಊರ್ಧ್ವಶಕ್ತಿಂ-ಊರ್ಧ್ವಗೆಯೆಂಬ ಮಹಾಶಕ್ತಿಯನು, ಧ್ಯಾಯೇತ್-ಧ್ಯಾನಿಪುದು. (ನಿರಾಲಂಬಂಮಹಾಶೂನ್ಯಂ ವ್ಯೋಮಚಕ್ರೇವ್ಯವಸ್ಥಿತಂ। ನಿರಾಲಂಬಂಮನಃಕೃತ್ವಾನಕಿಂಚಿದಪಿಚಿಂತಯೇತ್'' ಎಂದುದಾಗಿ.) ॥೧೬॥

ಸೂ॥ ಇಂತು ನವಚಕ್ರಮಂಪೇಳ್ದು ಬಳಿಕ ಷೋಡಶಾಧಾರಮಂ ಷೋಡಶಗ್ರಂಥಂಗಳಿಂ ಪೇಳಲ್ಪ್ರತಿಜ್ಞೆಯಂ ಮಾಡುತ್ತಿರ್ದಪಂ:—

ಶ್ಲೋ॥ ಅಥತೇಷೋಡಶಾಧಾರಾನ್ಕಥಯಾಮಿವಿಶೇಷತಃ ।

ಟೀ॥ ಅಥ-ನವಚಕ್ರಸ್ವರೂಪಮಂ ನಿರೂಪಿಸಿದನಂತರದಲ್ಲಿ, ತೇ-ನಿನಗೆ, ಷೋಡಶಾಧಾರಾನ್-ಹದಿನಾರುಪ್ರಕಾರವಾದಾಧಾರಂಗಳನು, ವಿಶೇಷತಃ-ನವಚಕ್ರದಿಂ ವಿಶೇಷವಪ್ಪುದರದೆಸೆಯಿಂದೆ, ಕಥಯಾಮಿ-ಪೇಳ್ದಪೆನು.

ಸೂ॥ '' ಪಾದಮೂಲೇನವಾಮೇನಯೋನಿಂಸಂಪೀಡ್ಯದಕ್ಷಿಣಂ। ಪಾದಂಪ್ರಸಾರಿತಂಕೃತ್ವಾಕರಾಭ್ಯಾಂ ಧಾರಯೇನ್ಮುಖಂ '' ಎಂಬ ಮಹಾಮುದ್ರೆಯಲ್ಲಿ ಪ್ರಸಾರಿತವಾದ ದಕ್ಷಿಣಪಾದಾಂಗುಷ್ಠದಲ್ಲಿ ತೇಜೋಮೂರ್ತಿಧ್ಯಾನವೇ ಪ್ರಥಮಾಧಾರವೆಂದು ಪೇಳ್ದಪಂ:—

ಶ್ಲೋ॥ ತೇಜೋಧ್ಯಾನಂಪದಾಂಗುಷ್ಠೇ ಕುರ್ಯಾದ್ದೃಷ್ಟಿಸ್ಸ್ಥಿರಾ
ಭವೇತ್ ॥೧೭॥

ಟೀ॥ ಪದಾಂಗುಷ್ಠೇ-ಪ್ರಸಾರಿತವಾದ ದಕ್ಷಿಣಪಾದದಂಗುಷ್ಠದಲ್ಲಿ, ತೇಜೋಧ್ಯಾನಂ-ನಿವೃತ್ತಿಕಲಾತ್ಮಕವಾದ ತೇಜಸ್ಸಿನಧ್ಯಾನವನು, ಕುರ್ಯಾತ್-ಮಾಡುವುದು, ಆ ಧ್ಯಾನದಿಂ, ದೃಷ್ಟಿಃ-ಧ್ಯಾನಿಸುವಾತನದೃಷ್ಟಿಯು, ಸ್ಥಿರಾ- ಚಲಿಸದಿರ್ಪಂತಹುದು, ಭವೇತ್-ಅಹುದು. ಇದು ಪ್ರಥಮಾಧಾರವೆನಿಪುದು. ॥೧೭॥

ಶ್ಲೋ॥ ಪದಸ್ಯಪಾರ್ಷ್ಣಿನಾಮೂಲಂ ದ್ವಿತೀಯಾಧಾರಸಂಜ್ಞಕಂ ।
ಸಂಪೀಡ್ಯಸ್ಥಾಪಯೇದಗ್ನಿದೀಪಸಂಭವತಿಕ್ಷಣಾತ್ ॥೧೮॥

ಟೀ॥ ಪದಸ್ಯ-ವಾಮಪಾದದ, ಪಾರ್ಷ್ಣಿನಾ-ಮಡದಿಂದ, ದ್ವಿತೀಯಾಧಾರಸಂಜ್ಞಕಂ-ದ್ವಿತೀಯಾಧಾರವೆನಿಸುವ, ಮೂಲಂ-ಮೂಲಾಧಾರವನು, ಸಂಪೀಡ್ಯ-ಒತ್ತಿ, ಸ್ಥಾಪಯೇತ್-ಇರಿಸುವುದು. ಕ್ಷಣಾತ್-ಇರಿಸಿದ ಕ್ಷಣದದೆಸೆಯಿಂದ, ಅಗ್ನಿದೀಪನಂ-ಮೂಲಾಗ್ನಿಯವಿಶೇಷಸ್ಫುರಣವು, ಭವತಿ-ಆಗುತ್ತಿಹುದು. ॥೧೮॥

ಶ್ಲೋ॥ ಆಕುಂಚಯೇದ್ಗುದಾಧಾರಂಸದಾಸಂಕೋಚನೇನಚ ।
ಅಪಾನಮಾರುತಸ್ಸ್ಥಿರ್ಯಂಜಾಯತೇತತ್ತೃತೀಯಕಂ ॥೧೯॥

ಟೀ॥ ಗುದಾಧಾರಂ-ಗುದಾಧಾರವನು, ಸದಾ-ಅನವರತವೂ, ಸಂಕೋಚನೇನ ಚ-ಸಂಕೋಚಿಸುವುದರಿಂದವೂ, ಆಕುಂಚಯೇತ್- ಆಕುಂಚನವಂಮಾಡವುದು, ಆ ಆಕುಂಚನದಿಂದ, ಅಪಾನಮರುತಃ - ಅಪಾನವಾಯುವಿಗೆ, ಸ್ಥೈರ್ಯಂ- ಸ್ಥಿರತ್ವವು,ಜಾಯತೇ-ಹುಟ್ಟುತ್ತಿಹುದು. ತತ್-ಅದು, ತೃತೀಯಕಂ-ಮೂರನೆಯಾಧಾರವೆನಿಪುದು॥

ಶ್ಲೋ॥ ಮೇಢ್ರಾಧಾರೇ ದಂಡಸಂಕೋಚನೇನ ಬ್ರಹ್ಮಗ್ರಂಥೀನ್
ತ್ರೀನ್ ಸಮುತ್ಪಾಟ್ಯಪಶ್ಚಾತ್। ಚೇತೋವಾಯ್ವೋರ್ವಜ್ರ
ನಾಡ್ಯಾಂಪ್ರವೇಶಾದ್ಬಿಂದುಸ್ತಂಭಸ್ಸಂಭವತ್ಯೇವಸಿದ್ಧಃ ॥೨೦॥

ಟೀ॥ ಮೇಢ್ರಾಧಾರೇ-ಮೇಢ್ರವೆಂಬಾಧಾರದಲ್ಲಿ, ದಂಡಸಂಕೋಚನೇನ-ವೀರ್ಯಾದಿಕವನಧೋಮುಖವಂ ಮಾಡುವ ಅಪಾನವಾಯುವನೂರ್ಧ್ವಮುಖವಂಮಾಡುವ ಲಿಂಗಸ್ಥಾನದ ಸಂಕೋಚನದಿಂದ, ತ್ರೀನ್-ಮೂರಾಗಿರ್ಪಂಥ, ಬ್ರಹ್ಮಗ್ರಂಥೀನ್-ಬ್ರಹ್ಮಗ್ರಂಥಿಗಳನು, ಸಮುತ್ಪಾಟ್ಯ- ಒಡೆದು, ಪಶ್ಚಾತ್-ಅನಂತರದಲ್ಲಿ, ಚೇತೋವಾಯ್ವೋಃ-ಮನೋಮಾರುತಂಗಳ, ವಜ್ರನಾಡ್ಯಾಂ-ಪಶ್ಚಿಮನಾಡಿಯುಲ್ಲಿ, ಪ್ರವೇಶಾತ್-ಪ್ರವೇಶಿಸುವುದರದೆಸೆಯಿಂದ, ಬಿಂದುಸ್ತಂಭಃ-ಬಿಂದುವಿನನಿಶ್ಚಲತ್ವವು, ಸಂಭವತ್ಯೇವ-ಸಂಭವಿಪುದೇ, ಇತಿ-ಹೀಗೆಂಬುದು, ಸಿದ್ಧಃ-ಪ್ರಸಿದ್ಧವು. ("ಮರಣಂಬಿಂದುಪಾತೇನಜೀವಿತಂ ಬಿಂದುಧಾರಣಾತ್। ತಸ್ಮಾಚ್ಛುಕ್ಲಂ ಮನಶ್ಚೈವರಕ್ಷಣೀಯಂಪ್ರಯತ್ನತಃ" ಎಂದುದಾಗಿ)॥

ಶ್ಲೋ॥ ಪಂಚಮಾಧಾರಮುಡ್ಯಾಣಂನೌಲಿಂದದ್ಯಾನ್ಮುಹುರ್ಮುಹುಃ।
ಮಲಮೂತ್ರಕ್ರಿಮೀಣಾಂಚಚಾರಣಂಭವತಿಧ್ರುವಂ ॥೨೧॥

ಟೀ॥ ಉಡ್ಯಾಣಂ-ಉಡ್ಯಾಣವು, ಪಂಚಮಾಧಾರಂ-ಅಯ್ದನೆಯಾಧಾರವು. ಮುಹುರ್ಮುಹುಃ-ಅಡಿಗಡಿಗೆ, ನೌಲಿಂ-ಸವ್ಯಾಪಸವ್ಯದಿಂದುದರವಂ ಕ್ಷೋಭಿಸುವ ನೌಳಿಯನು, ದದ್ಯಾತ್-ಕೊಡುವುದು. ("ಅಮಂದಾವರ್ತವೇಗೇನ ತುಂದಂಸವ್ಯಾಪಸವ್ಯತಃ। ನತಾಂಸೋಭ್ರಾಮಯೇದೇಷಾನೌಳಿಃಸಿದ್ಧೈಃಪ್ರಶಸ್ಯತೇ" ಎಂದುದಾಗಿ) ಮಲಮೂತ್ರಕ್ರಿಮೀಣಾಂಚ-ಉದರಸ್ಥಾನದಮಲಮೂತ್ರಕ್ರಿಮಿಗಳ,ಚಾರಣಂಚ ವಿಮೋಚನವೂ, ಭವತಿ-ಆಗುತ್ತಿರ್ದ್ದೀತು. ಧ್ರುವಂ-ನಿಶ್ಚಯುವು. ॥೨೧॥

ಶ್ಲೋ॥ ನಾಭ್ಯಾಧಾರಂತತಸ್ತತ್ರಪ್ರಣವಂಯೋವದೇದ್ಬುಧಃ।
ಸಮಾಧಿಸ್ಥೈಕಚಿತ್ತೇನತಸ್ಯನಾದೋದಯೋಭವೇತ್ ॥೨೨॥

ಟೀ॥ ತತಃ-ಆ ಉಡ್ಯಾಣಾಧಾರಾನಂತರದಲ್ಲಿ ಆರನೆಯುದು, ನಾಭ್ಯಾಧಾರಂ-ನಾಭ್ಯಾಧಾರವೆನಿಪುದು, ತತ್ರ-ಆ ಸಕಲವರ್ಣೋತ್ಪತ್ತಿಗೆ ಮೂಲಕಾರಣವಾದ ಮಧ್ಯಕುಂಡಲಿಸ್ಥಾನವೆನಿಸುವ ಆಧಾರದಲ್ಲಿ, ಯಃ-ಆವನಾನೊರ್ವನು, ಬುಧಃ-ಬಲ್ಲಾತನು,

ಪ್ರಣವಂ-ಪ್ರಣವಾಕ್ಷರವನು, ವದೇತ್-ನುಡಿವುತ್ತಿರ್ಪನೋ, ತಸ್ಯ-ಆತನಿಗೆ, ಸವಾ ಧಿನಾ-ವ್ಯಾಪಾರರಹಿತವಾಗಿರ್ಪಂಥ, ಏಕಚಿತ್ತೇನ-ಏಕಾಗ್ರಚಿತ್ತದಿಂದ, ನಾದೋದಯಃ-ಅನಾಹತನಾದದಪ್ರಾದುರ್ಭಾವವು, ಭವೇತ್-ಅಹುದು. ||೨೧||

ಶ್ಲೋ|| ಸಪ್ತಮಂತುಹೃದಾಧಾರಂ ತತ್ರಪ್ರಾಣಾನ್ನಿರೋಧಯೇತ್ ।
ತದಾತನ್ಮಧ್ಯಕಮಲವಿಕಾಸೋಭವತಿಕ್ಷಣಾತ್ ||೨೨||

ಟೀ|| ಹೃದಾಧಾರಂತು-ಹೃದಯಾಧಾರವಾಯಿತ್ತಾದೊಡೆ, ಸಪ್ತಮಂ-ಏಳನೆಯದು, ತತ್ರ-ಅಲ್ಲಿ, ಪ್ರಾಣಾನ್-ಪೂರಿಸಿದ ಪ್ರಾಣವಾಯುವನ್ನು, ನಿರೋಧಯೇತ್-ತಡೆವುದು. ತದಾ-ಆಗ, ಕ್ಷಣಾತ್-ಕ್ಷಣಮಾತ್ರದಿಂ, ತನ್ಮಧ್ಯಕಮಲವಿಕಾಸಃ-ತನ್ಮಧ್ಯ-ಆ ಹೃದಯಕಮಲ ಮಧ್ಯದಲ್ಲಿಯ, ಕಮಲ-ಪ್ರಣವಪೀಠವಾದ ನಾಲ್ಕೆಸಳ ಕಮಲದ, ವಿಕಾಸಃ-ವಿಕಸನವು, ಭವತಿ-ಆಗುತ್ತಿಹುದು. ||೨೨||

ಶ್ಲೋ|| ಕಂಠಾಧಾರಂ ಕಂಠಮೂಲಂ ಪೀಡಯೇಚ್ಚುಬುಕೇನತು ।
ಇಡಾಪಿಂಗಳಯೋರ್ವಾಯುಪ್ರವಾಹಸ್ಸುಸ್ಥಿರೋಭವೇತ್||

ಟೀ|| ಕಂಠಾಧಾರಂ-ಎಂಟನೆಯದು ಕಂಠಾಧಾರವು, ಕಂಠಮೂಲಂತು-ಕಂಠಮೂಲವನಾಯಿತ್ತಾದೊಡೆ,ಚುಬುಕೇನ-ಚುಬುಕದಿಂದ, ಪೀಡಯೇತ್-ಒತ್ತುವುದು. ಅದರಿಂದೆ,ಇಡಾಪಿಂಗಳಯೋಃ-ಇಡಾಪಿಂಗಳಗಳಲ್ಲಿಯ, ವಾಯುಪ್ರವಾಹಃ-ರೇಚಕಪೂರಕವಾದ ವಾಯುಪ್ರವಾಹವು, ಸುಸ್ಥಿರಃ-ಅತ್ಯಂತಸ್ಥಿರವು,ಭವೇತ್-ಅಹುದು, ಇದೇ ಜಾಲಂಧರಬಂಧವೆನಿಸುವುದು. ||೨೪||

ಶ್ಲೋ|| ನವಮಂಘಂಟಿಕಾಧಾರಂಜಿಹ್ವಾಗ್ರಂತತ್ರದಾಪಯೇತ್।
ಸುಧಾಕಲಾಸ್ರವತ್ಯೇವಸಾಚಸಂತೃಪ್ತಿಕಾರಣಂ ||೨೫||

ಟೀ||ಘಂಟಿಕಾಧಾರಂ-ಘಂಟಿಕೆಯೆಂಬಾಧಾರವು,ನವಮಂ-ಒಂಭತ್ತನೆಯದು, ತತ್ರ-ಅಲ್ಲಿ, ಜಿಹ್ವಾಗ್ರಂ-ಜಿಹ್ವೆಯತುದಿಯನು, ದಾಪಯೇತ್- ಇರಿಸುವುದು. ಅದರಿಂದ, ಸುಧಾಕಲಾ-ಅಮೃತಕಳೆಯು, ಸ್ರವತ್ಯೇವ-ಸ್ರವಿಸುವುದೇ, ಸಾಚ-ಆ ಅಮೃತಕಳೆಯು, ಸಂತೃಪ್ತಿಕಾರಣಂ-ಸಮ್ಯಕ್ಕಾದತೃಪ್ತಿಗೆ ಕಾರಣವಾಗಿರ್ಪಂತಹುದು. ("ಚಿತ್ತಂಚರತಿಖೇಯಸ್ಯಜಿಹ್ವಾಚರತಿಖೇಗತಾ । ತೇನೈಷಾಖೇಚರೀನಾಮಮುದ್ರಾಸಿದ್ಧೈರ್ನಮಸ್ಕೃತಾ" ಎಂದುದಾಗಿ.) ||೨೫||

ಸೂ|| ಆಘಂಟಿಕಾಧಾರದಲ್ಲಿ ಜಿಹ್ವಾಪ್ರವೃತ್ತಿಯೋಲಂಬಿಕಾಯೋಗವೆಂದು ಪೇಳ್ದಪಂ:—

ಶ್ಲೋ॥ ಯಾಲಂಬಿಕಾಚಾಲನದೋಹನಾಭ್ಯಾಂ ದೀರ್ಘೀಕೃತಾ
ತಾಂವಿಪರೀತಮಾರ್ಗಾತ್ । ಯಸ್ತಾಲುಮೂಲಾಂತರಗ
ರ್ಭದೇಶೇಪ್ರವೇಶಯೇತ್ಸೋನ್ಮನತಾಂಪ್ರಯಾತಿ ॥೨೬॥

ಟೀ॥ ಯಾ-ಆವುದಾನೊಂದು, ಲಂಬಿಕಾ-ಯೋಗಸಾಧನವಾದ ಜಿಹ್ವೆಯು, ಚಾಲನದೋಹನಾಭ್ಯಾಂ-ಚಾಲನ-ಚಲಿಸುವುದು, ದೋಹನಾಭ್ಯಾಂ-ಕಡೆವುದು ಯೆಂಬ ಕರ್ಮದ್ವಯದಿಂದ, ದೀರ್ಘೀಕೃತಾ-ದೀರ್ಘವಾಗಿಮಾಡಲ್ಪಟ್ಟತೋ, ತಾಂ-ಆಜಿಹ್ವೆಯನ್ನು ವಿಪರೀತಮಾರ್ಗಾತ್- ವಿಪರೀತಮಾದೂರ್ಧ್ವಮಾರ್ಗದ ದೆಸೆಯಿಂದ, ಯಃ- ಆವನಾನೊರ್ವನು, ತಾಲುಮೂಲಾಂತರಗರ್ಭದೇಶೇ- ತಾಲುಮೂಲ-ತಾಲುಮೂಲಾಗ್ರ, ಅಂತರ-ಮಧ್ಯದ, ಗರ್ಭದೇಶೇ-ಗರ್ಭಸ್ಥಾನದಲ್ಲಿ, ಪ್ರವೇಶಯೇತ್-ಪ್ರವೇಶವಂಮಾಡಿಸುವನೋ, ಸಃ-ಆತನು,ಉನ್ಮನತಾಂ-ಉನ್ಮನ್ಯವಸ್ಥೆಯನ್ನು, ಪ್ರಯಾತಿ-ಎಯ್ದುತ್ತಿಹನು॥

ಶ್ಲೋ॥ ಜಿಹ್ವಾತೋರಸನಾಧಾರಂಕುರ್ಯಾದ್ಯೋಮಥನಂಯದಿ ।
ಸಿದ್ಧ್ಯೇತ್ತಸ್ಯಾಮೃತಾಸ್ವಾದಃಕವಿತಾಚಸ್ಫುಟಾಭವೇತ್ ॥

ಟೀ॥ ಯಃ-ಆವಾತನು, ರಸನಾಧಾರಂ-ರಸನೆಯೆಂಬಾಧಾರವನು, ಜಿಹ್ವಾತಃ-ಜಿಹ್ವೆಯದೆಸೆಯಿಂದೆ, ಮಥನಂ-ಘರ್ಷಣವನು, ಯದಿ-ಎತ್ತಲಾನೂ, ಕುರ್ಯಾತ್-ಮಾಡುವನೋ, ತೇನ-ಅದರಿಂದ, ತಸ್ಯ-ಆತಂಗೆ, ಅಮೃತಾಸ್ವಾದಃ-ಅಮೃತಸೇವನೆಯು, ಸಿದ್ಧ್ಯೇತ್-ಸಿದ್ಧಿಸುವುದು. ಕವಿತಾಚ-ಕವಿತ್ವವೂ, ಸ್ಫುಟಾ-ವ್ಯಕ್ತವಾಗಿರ್ಪಂತಹುದು, ಭವೇತ್-ಅಹುದು. ಇದು ಏಕಾದಶಾಧಾರವೆನಿಸುವುದು. ॥೬೭॥

ಶ್ಲೋ॥ ದ್ವಾದಶಂದಶನಾಧಾರಮೂರ್ಧ್ವಂತದ್ರಾಜದಂತಕಂ ।
ಷಣ್ಮಾಸಾದ್ದೃಶ್ಯತೇಜ್ಯೋತಿಸ್ತತ್ರಜಿಹ್ವಾಗ್ರಘಟ್ಟನಾತ್ ॥

ಟೀ ॥ ದಶನಾಧಾರಂ-ದಂತಾಧಾರವು, ದ್ವಾದಶಂ-ಹನ್ನೆರಡನೆಯದು, ತತ್-ಅದು, ಊರ್ಧ್ವಂ- ಮೇಲಾಗಿರ್ಪಂತಹುದು, ರಾಜದಂತಕಂ-ರಾಜದಂತಕವೆನಿಸಿಕೊಂಬಂತಹುದು, ತತ್ರ- ಅಲ್ಲಿ, ಜಿಹ್ವಾಗ್ರಘಟ್ಟನಾತ್- ಜಿಹ್ವಾಗ್ರ-ಜಿಹ್ವೆಯತುದಿಯನು, ಘಟ್ಟನಾತ್-ಘಟ್ಟಿಸುವುದರದೆಸೆಯಿಂದೆ, ಷಣ್ಮಾಸಾತ್-ಆರುತಿಂಗಳತ್ತಣಿಂದೆ, ಜ್ಯೋತಿಃ-ತೇಜಸ್ಸು, ದೃಶ್ಯತೇ-ಕಾಣಲ್ಪಡುತ್ತಿದ್ದೀತು. ॥೭೧॥

ಶ್ಲೋ॥ ತ್ರಯೋದಶಂಘ್ರಾಣಮೂಲಂತತ್ರದೃಷ್ಟಿಸ್ಸ್ಥಿರೀಕೃತಾ ।
ಯದಿಚೇನ್ಮನಸಾನಿತ್ಯಂವಾಯುಸ್ತತ್ರಸ್ಥಿರೋಭವೇತ್॥೭೯॥

ಟೀ॥ ಘ್ರಾಣಮೂಲಂ-ನಾಸಿಕಾಮೂಲವು, ತ್ರಯೋದಶಂ-ಹದಿಮೂರನೆಯಾಧಾರವು, ತತ್ರ-ಅಲ್ಲಿ, ದೃಷ್ಟಿಃ-ದೃಷ್ಟಿಯು, ಯದಿ-ಎತ್ತಲಾನೂ, ಸ್ಥಿರೀಕೃತಾಚೇತ್-ಸ್ಥಿ

ರವಾಗಿಮಾಡಲ್ಪಟ್ಟುದಾದೊಡೆ, ತತ್ರ-ಅಲ್ಲಿ, ಮನಸಾ-ಮನಸ್ಸಿನೊಡನೆ, ವಾಯುಃ-ಪವನವು, ನಿಶ್ಚಲಂ-ಅವಾಗವೂ, ಸ್ಥಿರಃ-ರೇಚಕಪೂರಕವ್ಯಾಪಾರವನುಳಿದು ಚಲನೆಯಿಲ್ಲದಂತಹುದು, ಭವೇತ್-ಅಹುದು. ॥೯॥

ಶ್ಲೋ॥ ಚತುರ್ದಶಂ ಲಲಾಟಾಖ್ಯಮಾಧಾರಂ ತತ್ರಯೋಗವಿತ್।
ಮನಸಾವಾಯುಮಾರೋಪ್ಯ ಸರ್ವಸಿದ್ಧಿಮವಾಪ್ನುಯಾತ್॥೧೦.

ಟೀ॥ ಲಲಾಟಾಖ್ಯಂ-ಲಲಾಟವೆಂಬ ಹೆಸರುಳ್ಳಂಥ, ಆಧಾರಃ-ಆಧಾರವು, ಚತುರ್ದಶಃ-ಹದಿನಾಲ್ಕನೆಯದು. ತತ್ರ-ಅಲ್ಲಿ, ಯೋಗವಿತ್-ಧ್ಯಾನಯೋಗವಂಬಲ್ಲಾತನು, ಮನಸಾ-ಮನಸ್ಸಿನೊಡನೆ, ವಾಯುಂ-ಪ್ರಾಣವಾಯುವನು, ಆರೋಪ್ಯ-ಎಯ್ದಿಸಿ, ಸರ್ವಸಿದ್ಧಿಂ-ಸಕಲಸಿದ್ಧಿಯನು, ಅವಾಪ್ನುಯಾತ್-ಎಯ್ದುವನು. ॥೧೦॥

ಶ್ಲೋ॥ ಭ್ರೂಕಾಧಾರಂ ಪಂಚದಶಂ ತದೂರ್ಧ್ವಂಚಕ್ಷುಷಾಬುಧಃ।
ಪಶ್ಯೇತ್ಸಕಿರಣಾಕಾರಂ ಶೀಘ್ರಮೇವಹಿಪಶ್ಯತಿ ॥೧೧॥

ಟೀ॥ ಭ್ರೂಕಾಧಾರಂ-ಭ್ರೂಕವೆಂಬಾಧಾರವು, ಪಂಚದಶಂ-ಹದಿನೈದನೆಯದು. ಊರ್ಧ್ವಂ-ಮೇಲಾಗಿರ್ಪಂಥ, ತತ್-ಅದನು, ಬುಧಃ-ಬಲ್ಲಾತನು, ಚಕ್ಷುಷಾ-ನೇತ್ರದಿಂದೆ, ಪಶ್ಯೇತ್-ನೋಡುವನು. ಸಃ-ಆನೋಡುವಾತನು, ಕಿರಣಾಕಾರಂ-ಮಂಡಲಂಗಳ ಕಿರಣಾಕೃತಿಯಾದ ಪ್ರಕಾಶವನು, ಶೀಘ್ರಮೇವ-ಶೀಘ್ರದಲ್ಲಿಯೇ, ಪಶ್ಯತಿಹಿ-ಕಾಣುತ್ತಿಹನಲಾ.

ಶ್ಲೋ॥ನೇತ್ರಾಧಾರಂ ಷೋಡಶಂತು ತದೂರ್ಧ್ವಂ ಚಾಲಯೇದ್ಬುಧಃ। ಜ್ಯೋತಿಃಪುಂಜಮಪಾಂಗೇತತ್ಪಶ್ಯತಿಕ್ಷಿಪ್ರಮೇವಹಿ ॥

ಟೀ॥ ನೇತ್ರಾಧಾರಂತು-ನೇತ್ರವೆಂಬಾಧಾರವಾಮಿತ್ತಾದೊಡೆ, ಷೋಡಶಂ-ಹದಿನಾರನೆಯದು. ತತ್-ಆ ನೇತ್ರಾಧಾರವನು, ಬುಧಃ-ಬಲ್ಲಾತನು, ಊರ್ಧ್ವಂ-ಮೇಲಾದ ತ್ರಿಕೂಟಸ್ಥಾನವಂ ಕುರಿತು, ಚಾಲಯೇತ್-ಚಲನೆಯನೆಯ್ದಿಸುವನು. ತತ್-ಆ ಆಧಾರವೆನಿಸುವನೇತ್ರವೇ, ಅಪಾಂಗೇ-ಕಡೆಗಣ್ಣಿನಲ್ಲಿ, ಜ್ಯೋತಿಃಪುಂಜಂ-ಬಿಂದುಕಾಂತಿಸಮೂಹವನು, ಕ್ಷಿಪ್ರಮೇವ-ಶೀಘ್ರದಲ್ಲಿಯೇ, ಪಶ್ಯತಿಹಿ-ಕಾಣುತ್ತಿಹುದಲಾ. (ತಾತ್ಪರ್ಯ—ಈ ಊರ್ಧ್ವಮುಖವಾದ ನೇತ್ರಾಧಾರ ಮಧ್ಯದ ಮಹಾಸುಷಿರವೇ ಬ್ರಹ್ಮರಂಧ್ರವೆನಿಪುದಾಗಿ, ಇದೇ ಮುಂದೆ ಪೇಳ್ವ ರಾಜಯೋಗಾಭ್ಯಾಸಕ್ಕೆ ಮುಖ್ಯಸಾಧನವೆನಿಸುವುದು.) ॥೧೨॥

ಸೂ॥ ಈ ಪ್ರಕಾರದಿಂ ಧ್ಯಾನಯೋಗಾಭ್ಯಾಸದಲ್ಲಿ ಪ್ರೀತನಾದಾತನ ಅಷ್ಟಾವಧಾನಸಂಪತ್ತಿಯೇ ಕ್ರಮದಿಂ ಪೂರ್ವೋದಿತವಾದ ಮಾತ್ರಾದಿಯಾದ ನಾಲ್ಕು ಯೋಗ

ಗಳ ಕ್ರಮಾಭ್ಯಾಸಮುಪ್ಪುದಾಗಿ ಅನವರತವೂ ಮೋಸವಿಲ್ಲದೆ ಧ್ಯಾನಾಷ್ಟಾವಧಾನಸಂಪ
ನ್ನನಾಗಿರಬೇಕೆಂದು ಪೇಳುತ್ತ, ಧ್ಯಾನಯೋಗಪರಿಸಮಾಪ್ತಿಯಂ ಮಾಡುತ್ತಿರ್ದಪಂ.

ಶ್ಲೋ॥ ಬಂಧತ್ರಯೇಣಾಸನಬಂಧನೇನ ಮಂತ್ರೇಣ ನಾದಶ್ರವಣೇನ
ಯೋಗೀ। ಭವೇತ್ತಥಾಕೇವಲಕುಂಭಕೇನಧ್ಯಾನೇನ ಚಿತ್ತಾಷ್ಟ
ವಿಧಾವಧಾನೀ ॥೩೩॥

ಟೀ॥ ಬಂಧತ್ರಯೇಣ-ಅಧಶ್ಯಕ್ತಿ ಮಧ್ಯಶಕ್ತಿ ಊರ್ಧ್ವಶಕ್ತಿಗಳಕ್ರಮದಿಂದುದ್ಭ
ವಿಸುವ ಆಧಾರ ಉಡ್ಯಾಣ ಜಾಳಂಧರಗಳೆಂಬ ಬಂಧತ್ರಯದಿಂದ, ಆಸನಬಂಧನೇನ-
ಪದ್ಮಾಸನ ಮೊದಲಾದಾಸನಂಗಳ ಕಟ್ಟುವುದರಿಂದ,ಮಂತ್ರೇಣ-ಪ್ರಾಕೃತಪ್ರಾಣಾಯಾ
ಮದ ಹಂಸಮಂತ್ರಾನುಸಂಧಾನದಿಂದ, ನಾದಶ್ರವಣೇನ-ವೈಕೃತಪ್ರಾಣಾಯಾಮದ
ಸೋಹಂಭಾವಫಲವಾದ ನಾದಶ್ರವಣವೆಂಬ ಲಯಯೋಗಾನುಸಂಧಾನದಿಂದ, ತಥಾ-
ಹಾಂಗೆ, ಕೇವಲಕುಂಭಕೇನ-ರೇಚಕಪೂರಕವ್ಯಾಪಾರಂಗಳನುಳಿದ ಕೇವಲಕುಂಭಕ
ವೆಂಬ ಹಠಯೋಗಾನುಸಂಧಾನದಿಂದ, ಧ್ಯಾನೇನ-ಸಾಲಂಬ ನಿರಾಲಂಬವೆಂಬ ವಸ್ತು
ಧ್ಯಾನದಿಂದ, ಚಿತ್ತಾಷ್ಟವಿಧಾವಧಾನೀ-ಚಿತ್ತದಲ್ಲಿ ಎಂಟುಪ್ರಕಾರವಾದ ಅವಧಾನವು
ಳ್ಳಂಥಾತನು, ಭವೇತ್-ಆಗುವುದು. (ಮೋಕ್ಷಮಂ ಸಾಧಿಸುವ ಯೋಗೀಶ್ವರಂಗೆ ಈ
ಅಷ್ಟಾವಧಾನವೇ ಮಹಾಸಾಧನವೆಂಬುದರ್ಥಂ) ॥೩೩॥

ಇತಿಧ್ಯಾನಯೋಗಃ.

ಸೂ॥ ಈ ಮರ್ಯಾದೆಯಿಂ ಪೇಳ್ದ ಧ್ಯಾನಯೋಗಾನಂತರದಲ್ಲಿಯು ಧಾರಣಾಯೋ
ಗವೇ ಲಿಂಗಕ್ಕೆ ಧೂಪಾರ್ಪಣವೆಂದು ಪೇಳ್ದಪಂ.

ಶ್ಲೋ॥ ದೇಹಪಾತ್ರೇಜ್ವಲದ್ಜ್ಞಾನವಹ್ನೌಭೂತಗುಣಾದಿಕಂ।
ಕ್ಷಿಪ್ತ್ವಾದಶಾಂಗವಲ್ಲಿಂಗಂ ಧೂಪಯೇದ್ಧಾರಣಾದ್ಬುಧಃ॥೩೪॥

ಟೀ॥ ದೇಹಪಾತ್ರೇ-ಯಮನಿಯಮಗಳಿಂ ಶುದ್ಧವಾದ ದೇಹವೆಂಬ ಪಾತ್ರೆಯ
ಲ್ಲಿ, ಜ್ವಲದ್ಜ್ಞಾನವಹ್ನೌ-ಜ್ವಲತಃ- ಪ್ರಾಣಾಯಾಮಪ್ರತ್ಯಾಹಾರಂಗಳಿಂ ಶುಷ್ಕವಾದ
ಮನೋಮಾರುತಗಳೆಂಬ ಕಾಷ್ಠಾಧಾರದಿಂ ಉರಿವುತ್ತಿರ್ಪ, ಜ್ಞಾನವಹ್ನೌ-ಧ್ಯಾನರೂಪ
ವಾದ ಜ್ಞಾನಾಗ್ನಿಯಲ್ಲಿ, ಭೂತಗುಣಾದಿಕಂ-ಭೂತ-ಸ್ಥೂಲಸೂಕ್ಷ್ಮರೂಪದಿಂ ದಶವಿ
ಧವಾದ ಪೃಥಿವ್ಯಾದಿಭೂತಂಗಳ, ಗುಣಾದಿಕಂ-ಧಾರಣ ಸಂಗ್ರಹಣ ಪಾಕ ವ್ಯೂಹನ
ಅವಕಾಶ ಮೊದಲಾದ ಗುಣಾದಿಗಳನು, ದಶಾಂಗವತ-ದಶಾಂಗಧೂಪದೋಪಾದಿಯ
ಲ್ಲಿ, ಕ್ಷಿಪ್ತ್ವಾ-ಹಾಕಿ, ಬುಧಃ-ವಿವೇಕಿಯಾದಾತನು, ಲಿಂಗಂ-ಶಿವಲಿಂಗವನು, ಧಾರಣಾ
ತ್-ಧರಿಸುವುದರದೆಸೆಯಿಂದೆ, ಧೂಪಯೇತ-ಸದ್ವಾಸನೆಯಿಂ ಪೊರೆಯಲ್ಪಟ್ಟಂತಹು
ದಂಮಾಳ್ಪುದು. (ತಾತ್ಪರ್ಯ— ಈ ಧಾರಣಯೋಗದಿಂ ಭೂತಶುದ್ಧಿಯಪ್ಪುದಾಗಿ,
ಜಾತಿಕುಲಾದ್ಯಭಿಮಾನಾಸ್ಪದವಾದ ಈ ಸ್ಥೂಲ ಶರೀರಕ್ಕೆ ಪುನರಾವೃತ್ತಿಯಿಲ್ಲವಾಗಿ,
ಚರಮದೇಹಿಯಪ್ಪನೆಂಬುದಭಿಪ್ರಾಯಂ.) ॥೩೪॥

ಸೂ॥ ಈ ಧಾರಣೆಗೆ ಲಕ್ಷಣವಮಂ ಪೇಳುತ್ತದರ ಭೇದವಮಂ ಪೇಳಲ್ಪ್ರತಿಜ್ಞೆಯಂ ಮಾಡುತ್ತಿರ್ದಪಂ.

ಶ್ಲೋ॥ ಧ್ಯಾನೈಕಗೋಚರಮನಸಿ ಸ್ಥಿರತಾ ಭವೇದ್ಯಾ ಸಾಧಾರಣೇತಿ ಶಿವಯೋಗವಿದೋ ವದಂತಿ। ಸೈವ ಕ್ರಮೇಣ ಗಚಿತೇಹ ಪುನಃ ಪ್ರಕಾರಾದ್ಭೂವ್ಯಾದಿಭೂತಧರಣೇನ ಪೃಥಕ್ಪೃಥಕ್ಚ॥

ಟೀ॥ ಯಾ-ಆವುದಾನೊಂದು, ಧ್ಯಾನೈಕಗೋಚರಮನಸಿ ಸ್ಥಿರತಾ-ಧ್ಯಾನೈಕ-ಪೂರ್ವೋಕ್ತವಾದ ಧ್ಯಾನವೊಂದೇ, ಗೋಚರ-ವಿಷಯವಾಗುಳ್ಳ, ಮನಃ-ಮನಸ್ಸಿನ, ಸ್ಥಿರತಾ-ಸ್ಥಿರತ್ವವು, ಭವೇತ್-ಆಗುತ್ತಿಹುದೋ, ಸಾ-ಆ ಸ್ಥಿರತೆಯೇ, ಧಾರಣೇತಿ-ಧಾರಣೆಯೆಂದು, ಶಿವಯೋಗವಿದಃ-ಶಿವಯೋಗವಂ ಬಲ್ಲವರ್ಗಳು, ವದಂತಿ-ಹೇಳುತ್ತಿಹರು. (ತಾತ್ಪರ್ಯ—ಸಂಕಲ್ಪರೂಪವಾದ ಮನಸ್ಸು ಕಾಕಾಕ್ಷಿಯೋಪಾದಿಯಲ್ಲಿ ಬಾಹ್ಯಾಭ್ಯಂತರವ್ಯಾಪಾರಗಳಿಗೆ ತಾನೇ ಕಾರಣವಪ್ಪುದರಿಂ ದಾಮನಮಂ ಮುದ್ರಾಕರಣ ಬಂಧಂಗಳಿಂ ದಂತರ್ಮುಖವಂ ಮಾಡಿ, ಅನವಚ್ಛಿನ್ನ ತೈಲಧಾರೆಯಂತೆ ಶಿವಧ್ಯಾನವಂ ಮಾಡುತ್ತಿರಲು, ಧ್ಯಾನಾನಂದದಿಂ ಕರಿಗೊಂಡ ಮೂರ್ತಿಯೊಳಾಮನಂ ನಿಶ್ಚಲವಾಗಲದೇ ಧಾರಣಯೋಗವೆಂಬುದ[illegible]ಭಿಪ್ರಾಯಂ. “ಧಾರಣಾನಾಮ ಚಿತ್ತಸ್ಯ ಸ್ಥಾನಬಂಧಸ್ಸಮಾಸತಃ। ಸ್ಥಾನಂಚ ಶಿವಯೋರೈಕ್ಯೋಹ್ಯನ್ಯದ್ದೋಷಾಶ್ರಯಂ ಯತಃ” ಎಂದುದಾಗಿ) ಸೈವ-ಆಧಾರಣಯೋಗವೇ, ಇಹ-ಈ ಯೋಗಪ್ರಕರಣದಲ್ಲಿ, ಪುನಃ-ಮರಳಿ, ಪ್ರಕಾರಾತ್-ಪ್ರಕಾರಾಂತರದಿಂದ, ಕ್ರಮೇಣ-ಕ್ರಮದಿಂದ, ಭೂವ್ಯಾದಿಭೂತಧರಣೇನ-ಭೂಮಿ ಮೊದಲಾದ ಭೂತಂಗಳ ಧರಿಸುವುದರಿಂದ, ಪೃಥಕ್‌ಪೃಥಕ್-ಬೇರೆಬೇರೆಯು, ರಚಿತಾ-ಹೇಳಲ್ಪಟ್ಟತು. (ಶಿವಧ್ಯಾನದಲ್ಲಿಯ ಮನಸ್ಸ್ಥಿರತೆಯೇ ಧಾರಣೆಯಾಯಿತ್ತಾದರೂ ಸ್ಥೂಲಮೂರ್ತಿಧ್ಯಾನವಮಂ ಪೇಳ್ವ ಯೋಗಮಾರ್ಗಾನುಸಾರದಿಂ ಪೃಥಿವ್ಯಾದಿತತ್ವಾಶ್ರಯವಾದ ದೇವತಾಂತರಧ್ಯಾನವಂ ಪೇಳ್ವೆನೆಂಬುದು “ಪುನಃಪ್ರಕಾರಾತ್” ಎಂಬ ಶಬ್ದಕ್ಕರ್ಥಂ.) “ಕ್ಷಿತ್ಯಾದಿ ತತ್ವವಿಷಯಂ ಧ್ಯಾತ್ವಾಯದ್ವೃಷವಾಂಛಿತಂ।ತತ್ತತ್ತತ್ವಾಧಿಪಾನೇನ ಮೂರ್ತಿಂಸ್ಥೂಲಾಂ ವಿಚಿಂತಯೇತ್” ಎಂದುದಾಗಿ)॥

ಸೂ॥ “ಸ್ಥಿತ್ಯರ್ಥಂ ಮನಸಃಕೇಚಿತ್ ಸ್ಥೂಲಧ್ಯಾನಂ ಪ್ರಕುರ್ವತೆ। ಸ್ಥೂಲೇಪಿನಿಶ್ಚಲಂ ಚೇತೋಭವೇತ್ಸೂಕ್ಷ್ಮೇಪಿನಿಶ್ಚಲಂ॥ ಎಂದುದಾಗಿ, ಮಂದಾಧಿಕಾರಿಗಳ್ಗೆ ಸ್ಥೂಲಮೂರ್ತಿಧ್ಯಾನದಿಂದಲ್ಲದೆ ಸೂಕ್ಷ್ಮಮೂರ್ತಿಧ್ಯಾನಮಾಗದಾಗಿ, ಸ್ಥೂಲಧಾರಣಾವಿಶೇಷವಮಂ ತತ್ವಕ್ರಮದಿಂ ಪೇಳ್ದಪಂ—

ಶ್ಲೋ॥ ಧಾರಣೀ ವಾರಿಣೀ ಚೈವ ಮಾಗ್ನೇಯೀ ಮಾರುತೀ ತಥಾ।
ನಭೋಮಯೀತಿ ಗದ್ಯಂತೇ ಸೂರಿಭಿಃ ಪಂಚಧಾರಣಾಃ॥ ೬೬॥

ಟೀ॥ ಧಾರಣೀ-ಧರಣೀಸಂಬಂಧವಾದ ಧರಣಿಯೆಂದು, ವಾರಿಣೀಚ-ವಾರಿಸಂಬಂಧವಾದ ವಾರಿಣಿಯೆಂದು, ಏವಂ-ಈಪ್ರಕಾರದಿಂದ, ಆಗ್ನೇಯೀ-ಅಗ್ನಿಸಂಬಂಧ

ವಾದ ಆಗ್ನೇಯಿ-ಯೆಂದು, ತಥಾ-ಹಾಂಗೆ, ಮಾರುತೀ-ಮರುತ್ಸಂಬಂಧವಾದ ಮಾರುತಿಯೆಂದು, ನಭೋಮಯೀತಿ-ಆಕಾಶಸಂಬಂಧವಾದ ನಭೋಮಯಿಯೆಂದು, ಪಂಚವಿದುಪ್ರಕಾರವಾದ, ಧಾರಣಾಃ-ಧಾರಣೆಗಳು, ಸೂರಿಭಿಃ-ಯೋಗವಂ ಬಲ್ಲವರಿಂದ, ಗದ್ಯಂತೇ-ಹೇಳಲ್ಪಡುತ್ತಿಹವು. ॥೬೧॥

ಸೂ ॥ ಈ ಧಾರಣಯೋಗದಿಂ ಮಹಾಪ್ರಯೋಜನಂಗಳಪ್ಪುವಾಗಿ, ಅದರ ಭ್ಯಾಸವುಂ ಮಾಳ್ಪುದೆಂದು ಪೇಳ್ದಪಂ—

ಶ್ಲೋ॥ ಅತಏವತಥಾಪ್ರೋಕ್ತಾಧಾರಣಾಯೋಗವಿತ್ತಮೈಃ।
ಸರ್ವಸಿದ್ಧಿಪ್ರದಾಸ್ತಾಶ್ಚಸದಾಭ್ಯಾಸರತಾತ್ಮನಾಂ॥ ॥೬೭॥

ಟೀ ॥ ಅತಏವ- ಈಪಂಚಭೂತಾತ್ಮಕವಾದ ಕಾರಣವಾಗಿ, ಯೋಗವಿತ್ತಮೈಃ-ನೆರೆಬಲ್ಲಯೋಗೀಶ್ವರರಿಂದ, ತಥಾ-ಆಪ್ರಕಾರದಿಂ, ಪ್ರೋಕ್ತಾಃ-ಹೇಳಲ್ಪಟ್ಟಂಥ, ತಾಃ ಧಾರಣಾಃ-ಆ ಪಂಚಧಾರಣೆಗಳು, ಸದಾ-ಅನವರತವೂ, ಅಭ್ಯಾಸರತಾತ್ಮನಾಂ-ಅಭ್ಯಾಸದಲ್ಲಿ ಪ್ರೀತರಾದವರ್ಗೆ, ಸರ್ವಸಿದ್ಧಿಪ್ರದಾಶ್ಚ-ಸಕಲಸಿದ್ಧಿಗಳಂ ಕೊಡುವಂಥವಾಗುತ್ತಿಹವು, (ಆ ಸಿದ್ಧಿಗಳೊಂದೊಂದಕ್ಕಂಟೆಂಟಾದ ಪಂಚಭೂತದ ನಾಲ್ವತ್ತೆಸಿದಿಗಳಂ ದೇವೀಕಾಲೋತ್ತರದ ಟೀಕಿನೊಳ್ವಿಚಾರಿಸಿಕೊಂಬುದು.) ॥೬೭॥

ಸೂ ॥ ಕ್ರಮದಿಂಧಾರಣೆಗಳಸ್ಥಾನವುಂ ಬೀಜಾಕ್ಷರಧ್ಯಾನಮೂರ್ತಿಯು ಪೇಳ್ದಪಂ

ಶ್ಲೋ॥ ಪಾದಾದಿಜಾನ್ವಂತಮಹೀತಲೇಸ್ಮಿನ್ವಾಯುಂಲಕಾರೇಣಸಮಾಧಿರೋಪ್ಯ । ಸ್ಮರೇಚ್ಚತುರ್ಬಾಹುಧರಂಚತುರ್ಮುಖಂತಂಧಾರಯೇದ್ಭೂವಿಜಯಂಸಮಾಪ್ನುಯಾತ್॥ ॥೬೮॥

ಟೀ॥ ಅಸ್ಮಿನ್-ಈ, ಪಾದಾದಿಜಾನ್ವಂತಮಹೀತಲೇ-ಪಾದಾದಿಜಾನ್ವಂತವಾದ ದೇಹಭಾಗವೇ ನಿಯತಸ್ಥಾನವಾಗುಳ್ಳ ಚತುರಶ್ರವಾದ ಗಂಧಾದಿಪಂಚಗುಣಾನ್ವಿತವಾದ ನಿವೃತ್ತಿಕಲಾವ್ಯಾಪ್ತವಾದ ಸುವರ್ಣವರ್ಣವಾದ ಹದಿನಾರು ಸ್ವರಂಗಳಿಂಕೂಡಿದ ಕಕಾರವೆಂಬ ಷೋಡಶದಳಕಮಲಮಧ್ಯವರ್ತಿಯಾದ ಏಕಮುಖ ದ್ವಿನೇತ್ರ ವರಾಭಯಕಲಶೋತ್ಪಲಹಸ್ತೆಯಾದ ಭೂದೇವತಾಸ್ವರೂಪಿಯಾದ ಮಹೀತಳದಲ್ಲಿ("ಷೋಡಶಸ್ವರಸಂಯುಕ್ತಾ ಕಕಾರಾಂಬುಜಮಧ್ಯಗಾ । ಏಕವಕ್ತ್ರಾದ್ವಿನೇತ್ರಾಚವರಾಭಯಕರಾನ್ವಿತಾ ॥ ಕಲಶೋತ್ಪಲಹಸ್ತಾಚ ಜಗದಾಧಾರರೂಪಿಣೀ ,, ಎಂದುದಾಗಿ) ವಾಯುಂ-ಪ್ರಾಣವಾಯುವನ್ನು, ಲಕಾರೇಣ-ಲಕಾರವೆಂಬ ಬೀಜಾಕ್ಷರದಿಂದೆ, ಸಮಾಧಿರೋಪ್ಯ-ಪೂರಕದಿಂಕುಂಭಿಸಿ, ಚತುರ್ಬಾಹುಧರಂ-ವರಾಭಯಕಲಶಾಕ್ಷಮಾಲೆಗಳಿಂ ಕೂಡಿದ ಚತುರ್ಭುಜಂಗಳಂ ಧರಿಸಿರ್ಪಂಥ, ತಂಚತುರ್ಮುಖಂ-ಆ ಬ್ರಹ್ಮನನು, ಸ್ಮರೇತ್-ಧ್ಯಾನಿಪುದು, ಧಾರಯೇತ್-ಧರಿಪುದು. ಈ ಧಾರಣೆಯಿಂ, ಭೂವಿಜಯಂ-ಪೃಥ್ವೀತತ್ವಜಯವನು, ಸಮಾಪ್ನುಯಾತ್- ಎಯ್ದುವುದು. ॥೬೮॥

ಸೂ॥ ಅನಂತರದಲ್ಲಿ ಜಲತತ್ವಧಾರಣೆಯಂ ಪೇಳ್ದಪ.

ಶ್ಲೋ॥ ವಕಾರೇಣೋಪೇತಂ ಸಲಿಲನಿಲಯೇ ಜಾನುನಾಭ್ಯಂತ
ದೇಶೇಸ್ಥಿರಂ ಕೃತ್ವಾವಾಯುಂ ಹರಿಮಥಸದಾಸಂಸ್ಮರನ್ಪೀ
ತಚೇಲಂ॥ ಪ್ರಸನ್ನಾಸ್ಯಂಶುದ್ಧಸ್ಫಟಿಕಮಣಿನಿಭಂ ಶಂಖ
ಚಕ್ರಾಂಕಬಾಹುಂಜಲಾದುತ್ಪನ್ನೋದ್ಯದ್ಭಯಜಯಮ
ಹಸ್ಸಂಭವೇದ್ಧಾರಯೇದ್ಯಃ॥ ॥೩೯॥

ಟೀ॥ ಜಾನುನಾಭ್ಯಂತದೇಶೇ-ಜಾನುವಾದಿಯಾಗಿ ನಾಭಿಯೇಕಡೆಯಾದ ನಿಯತ ಸ್ಥಾನವುಳ್ಳಂಥ, ಸಲಿಲನಿಲಯೇ-ಪ್ರತಿಷ್ಠಾಕಲಾವ್ಯಾಪ್ತವಾದ ಸ್ಫಟಿಕವರ್ಣವಾದ ಷೋಡಶಸ್ವರಂಗೂಡಿದ ಖಕಾರವೆಂಬ ಕಮಲಮಧ್ಯವರ್ತಿಯಾದ ("ಷೋಡಶಸ್ವರಸಂಯುಕ್ತಖಕಾರಾಂಬುಜಮಧ್ಯಗಂ" ಎಂದುದಾಗಿ) ಧನುಃಕೋಣವಾದ ರಸಾದಿ ಚತುರ್ಗುಣಾನ್ವಿತವಾದ ಜಲತತ್ವಸ್ಥಾನದಲ್ಲಿ, ವಕಾರೇಣ-ವಕಾರವೆಂಬ ಬೀಜಾಕ್ಷರದೊಡನೆ, ಉಪೇತಂ-ಕೂಡಿ ಧರಿಸಿದಂಥ, ವಾಯುಂ-ಪ್ರಾಣವಾಯುವನು, ಸ್ಥಿರಂ-ಕುಂಭಕದಿಂ ಸ್ಥಿರವನಾಗಿ, ಕೃತ್ವಾ-ಮಾಡಿ, ಅಥ-ಅನಂತರದಲ್ಲಿ, ಪೀತಚೇಲಂ-ಪೀತಾಂಬರನಾದಂಥ, ಪ್ರಸನ್ನಾಸ್ಯಂ-ಪ್ರಸನ್ನಮುಖನಾದಂಥ, ಶುದ್ಧಸ್ಫಟಿಕಮಣಿನಿಭಂ-ನಿರ್ಮಲವಾದ ಸ್ಫಟಿಕರತ್ನಕ್ಕೆ ಸಮಾನವಾದ ಕಾಂತಿಯುಳ್ಳಂಥ, (ಅಂತರಂಗದ ತಮದಿಂ ಬಾಹ್ಯದ ಸತ್ವಗುಣದಿಂ ಕೂಡಿದವನೆಂಬುದರ್ಥಂ.) ಶಂಖಚಕ್ರಾಂಕಬಾಹುಂ-ಶಂಖಚಕ್ರಂಗಳಂ ಕುರುಹಾದ ತೋಳ್ಗಳುಳ್ಳಂಥ, ಹರಿಂ-ಪುರುಷೋತ್ತಮನನು, ಸದಾ-ನಿತ್ಯವಾಗವೂ, ಸಸ್ಮರನ್-ನೆನೆವುತಿರ್ಪಂಥ, ಯಃ-ಆವಾತನು, ಧಾರಯೇತ್-ಧರಿಸುವನೋ, ತಸ್ಯ-ಆತಂಗೆ, ಜಲಾತ್-ಉದಕವತ್ತಣಿಂದೆ, ಉತ್ಪನ್ನೋದ್ಯದ್ಭಯಜಯಮಹಃ-ಹುಟ್ಟಿದ ವಿಶೇಷವಾದ ಭೀತಿಯಂ ಗೆಲ್ವ ಸಾಮರ್ಥ್ಯವು, ಸಂಭವೇತ್-ಉಂಟಾಗುವುದು. ॥೩೯॥

ಸೂ॥ ಅಗ್ನಿತತ್ವಧಾರಣಮಂ ಪೇಳ್ದಪಂ.

ಶ್ಲೋ॥ ನಾಭೇಃಕಂಠಾಂತದೇಶೇವರಶಿಖಿನಿಲಯೇವಾಯುಮಾರೋಪ್ಯ
ರೇಫೇಣೋತ್ ತ್ರ್ಯಕ್ಷಂರುದ್ರಸ್ವರೂಪಂತರುಣರವಿನಿಭಂಭಸ್ಮನೋ
ದ್ಧೂಳಿತಾಂಗಂ।ಶಾಂತಂಶೀಘ್ರಪ್ರಸನ್ನಂವರದಮಭಯದಂಸಂ
ಸ್ಮರನ್ಧಾರಯೇತ್ತಂಯಸ್ತಸ್ಯಾಭ್ಯಾಸಿನೋಗ್ನೇರ್ಭಯಹರಣ
ಮಹಸ್ಸಂಭವೇದ್ಧಾರಣಾತ್ಸಃ॥ ॥೪೦॥

ಟೀ॥ ನಾಭೇಃ-ನಾಭಿಯತ್ತಣಿಂಮೇಲಾದ, ಕಂಠಾಂತದೇಶೇ-ಕಂಠವೇಕಡೆಯಾದ ನಿಯತಸ್ಥಾನವುಳ್ಳಂಥ, ವರಶಿಖಿನಿಲಯೇ-ಶ್ರೇಷ್ಠವಾದ ವಿದ್ಯಾಕಲಾವ್ಯಾಪ್ತವಾದ ಷೋಡಶಸ್ವರಂಗೂಡಿದ ಗಕಾರಾಂಬುಜಮಧ್ಯವರ್ತಿಯಾದ ("ಷೋಡಶಸ್ವರಸಂಯುಕ್ತ

ಗಕಾರಾಂಬುಜಮಧ್ಯಗಂ'' ಎಂಬುದಾಗಿ) ತ್ರಿಕೋಣಾಕಾರವಾದ ರೂಪಾದಿ ತ್ರಿಸು ಣಾನ್ವಿತವಾದ ಅಗ್ನಿತತ್ವಸ್ಥಾನದಲ್ಲಿ, ರೇಫಾತ್'-ರೇಫೆಯೆಂಬ ಬೀಜಸ್ವರದಿಂದ, ವಾಯುಂ-ಪ್ರಾಣವಾಯುವನು, ಆರೋಪ್ಯ-ಪೂರಕದಿಂ ಕುಂಭಿಸಿ, ತತ್ರ-ಅಲ್ಲಿ, ತ್ರ್ಯಕ್ಷಂ-ಮೂರು ನೇತ್ರವುಳ್ಳಂಥ, ತರುಣರವಿನಿಭಂ-ಬಾಲಾರ್ಕಸಮಾನನಾದಂಥ, ಭಸ್ಮನಾ-ವಿಭೂತಿಯಿಂದ, ಉದ್ಧೂಳಿತಾಂಗಂ-ಲೇಪಿಸಿದ ಶರೀರವುಳ್ಳಂಥ, ಶಾಂತಂ-ರಾಗದ್ವೇಷರಹಿತನಾಗಿರ್ಪಂಥ, ಶೀಘ್ರಪ್ರಸನ್ನಂ-ಧ್ಯಾನಿಸುವಂಗೆ ಶೀಘ್ರದಿಂ ಪ್ರಸನ್ನನಪ್ಪಂಥ, ವರದಂ-ವರವ ಕೊಡುವಂಥ, ಅಭಯದಂ-ಅಭಯವಂ ಕೊಡುವಂಥ, ತಂ-ಆ, ರುದ್ರಸ್ವರೂಪಂ-ರುದ್ರಮೂರ್ತಿಯನು, ಯಃ-ಆವಾತನು, ಸ್ಮರೇತ್-ಧ್ಯಾನಿಸುತವೂ, ಧಾರಯೇತ್-ಧರಿಸುತ್ತಿಹನೋ, ತಸ್ಯ-ಆ, ಅಭ್ಯಾಸಿನಃ-ಧಾರಣಾಭ್ಯಾಸವುಳ್ಳಾತಂಗೆ, ಧಾರಣಾತಃ-ಧಾರಣೆಯತ್ತಣಿಂದೆ, ಅಗ್ನೇಃ-ಅಗ್ನಿಯತ್ತಣಿಂದಾಗುವ, ಸಃ ಭಯಹರಣಮಹಃ-ಭೀತಿಯಂ ಕೆಡಿಸುವ ಆಸಾಮರ್ಥ್ಯವು, ಸಂಭವೇತ್-ಉಂಟಾಗುವುದು. ॥೪೦॥

ಸೂ॥ ಅನಂತರದಲ್ಲಿ ವಾಯುತತ್ವಧಾರಣೆಯುಂ ಪೇಳ್ದಪ.—

ಶ್ಲೋ॥ ಗಳಾದೇರ್ಭ್ರೂವೋರ್ಮಧ್ಯದೇಶೇಸಮೀರಸ್ಥಲೇಮಾಂತ
ವರ್ಣೇನದೇದೀಪ್ಯಮಾನಂ।ಪ್ರಕಾಶಸ್ವರೂಪಂಸ್ಮರನ್ನೀ
ಶ್ವರಂಯಸ್ಸಖೇವಾಯುವತ್ಕ್ರೀಡತೀಶಪ್ರಭಾವಾತ್ ॥೪೧॥

ಟೀ॥ ಗಳಾದೇಃ-ಕಂಠಾದಿಯತ್ತಣಿಂಮೇಲಾದ, ಭ್ರುವೋಃ-ಪುರ್ಬುಗಳ, ಮಧ್ಯದೇಶೇ-ಮಧ್ಯವೇ ನಿಯತಸ್ಥಾನವಾಗುಳ್ಳಂಥ, ಸಮೀರಸ್ಥಲೇ-ಶಾಂತಿಕಲಾವ್ಯಾಪ್ತವಾದ ಷೋಡಶಸ್ವರಂಗೂಡಿದ ಘಕಾರಾಂಬುಜಮಧ್ಯವರ್ತಿಯಾದ (''ಷೋಡಶಸ್ವರಸಂಯುಕ್ತ ಘಕಾರಾಂಬುಜಮಧ್ಯಗಂ'' ಎಂಬುದಾಗಿ) ಷಟ್ಕೋಣಾಕಾರವಪ್ಪಸ್ಪರ್ಶಾದಿದ್ವಿಗುಣಾನ್ವಿತವಾದ ವಾಯುತತ್ವಸ್ಥಾನದಲ್ಲಿ, ಮಾಂತವರ್ಣೇನ-ಮಕಾರಕ್ಕೆ ಕಡೆಯೆನಿಸುವ ಯಕಾರವೆಂಬಕ್ಷರದಿಂದೆ, ಪ್ರಾಣವಾಯುವಂ ಪೂರಕದಿಂಕುಂಭಿಸಿ, ಆ ಮಧ್ಯದಲ್ಲಿ, ದೇದೀಪ್ಯಮಾನಂ-ದೀಪಿಸುತಿರ್ಪಂಥ, ಪ್ರಕಾಶಸ್ವರೂಪ -ಚೈತನ್ಯ ಪ್ರಕಾಶಸ್ವರೂಪನಾದಂಥ, ಈಶ್ವರಂ-ವರಾಭಯಮೃಗಟಂಕಂಗಳಿಂ ಕೂಡಿದ ಚತುರ್ಭುಜಮುಳ್ಳ ಈಶ್ವರನನು, ಯಃ-ಆವಾತನು, ಸ್ಮರನ್-ಧ್ಯಾನಿಸುವವನಾಗಿ, ಧರಿಸುವನೋ, ಸಖೇ-ಎಲೈ ಸ್ನೇಹಿತನೇ, ಸಃ-ಆತನು ಈಶಪ್ರಭಾವಾತ್-ಈಶ್ವರನ ಸಾಮರ್ಥ್ಯದತ್ತಣಿಂ, ವಾಯುವತ್-ವಾಯುವಿನಂತೆ ನಿರ್ಲೇಪಕನಾಗಿ, ಕ್ರೀಡತಿ-ವಿನೋದಿಸುತ್ತಿಹನು.

ಸೂ॥ ಅನಂತರದಲ್ಲಿ ವಾಯುತತ್ವಧಾರಣೆಯುಂ ಪೇಳ್ದಪ.

ಶ್ಲೋ॥ ಆಭ್ರೂಮಧ್ಯಾಳಿಕಾಂತೇಪವನಮತಿದೃಢಂವ್ಯೋಮದೇ
ಶೇಪ್ರಕುರ್ವನ್ಸೋಮಂಸೋಮಾರ್ಧಮೌಲಿಂದಶಕರಕ

ಮುಲಂಪಂಚವಕ್ತ್ರಂತ್ರಿಣೇತ್ರಂ । ಶ್ರೀಕಂಠಂಸಾಯುಧಂ
ತಂಸಮಧಿಕವರದಂಸರ್ವತತ್ವಾದಿತತ್ವಂ ಬಿಂದುವ್ಯೋಮ
ಸ್ವರೂಪಂ ಶಿವಮಥ ಹಯುತಂಚಿಂತಯೇದ್ಯಸ್ಸಮುಕ್ತಃ ||

ಟೀ॥ ಅಥ-ಅನಂತರದಲ್ಲಿ, ಯಃ-ಆವಾತನು, ಆಭ್ರೂಮಧ್ಯಾಲಿಕಾಂತೇ-ಭ್ರೂಮಧ್ಯಾದಿಯಾಗಿ ಲಲಾಟವೇ ಕಡೆಯಾದ ನಿಯತಸ್ಥಾನವಾಗುಳ್ಳಂಥ, ವ್ಯೋಮದೇಶೇ-ಶಾಂತ್ಯತೀತಕಲಾವ್ಯಾಪ್ತವಾದ ಷೋಡಶಸ್ವರಂಗೂಡಿದ ಐಕಾರಾಂಬುಜಮಧ್ಯವರ್ತಿಯಾದ ("ಷೋಡಶಸ್ವರಸಂಯುಕ್ತ ಐಕಾರಾಂಬುಜಮಧ್ಯಗಂ,, ಎಂದುದಾಗಿ) ವರ್ತುಳಾಕಾರವಾದ ಶಬ್ದೈಕಗುಣಾನ್ವಿತವಾದ ಆಕಾಶಸ್ಥಾನದಲ್ಲಿ, ಹಯುತಂ-ಹಕಾರವೆಂಬ ಬೀಜಾಕ್ಷರದಿಂ ಕೂಡಿರ್ಪಂಥ, ಪವನಂ-ಪ್ರಾಣವಾಯುವನು, ಅತಿದೃಢಂ-ಗಾಢಕುಂಭಕವನಾಗಿ, ಪ್ರಕುರ್ವನ್-ಮಾಡುತ್ತಿರ್ಪಂಥವನಾಗುತ್ತವೂ, ಸೋಮಾ-ಉಮಾಸಮೇತನಾದಂಥ, ಸೋಮಾರ್ಧಮೌಲಿಂ-ಅರ್ಧಚಂದ್ರನೇ ಮಸ್ತಕದಲ್ಲುಳ್ಳಂಥ ದಶಕರಕಮಲಂ-ಕೆಂದಾವರೆಯಂತಿರ್ಪ ಹತ್ತು ಹಸ್ತಂಗಳುಳ್ಳಂಥ, ಪಂಚವಕ್ತ್ರಂ-ಐದುಮುಖಗಳುಳ್ಳಂಥ, ತ್ರಿಣೇತ್ರಂ-ಮೂರುನೇತ್ರಗಳುಳ್ಳಂಥ, ಶ್ರೀಕಂಠಂ-ವಿಷದಿಂದೊಪ್ಪುವ ಕೊರಲುಳ್ಳಂಥ, ಸಾಯುಧಂ-ಶೂಲವಜ್ರಾದ್ಯಾಯುಧಂಗಳಿಂ ಕೂಡಿರ್ಪಂಥ, ಸಮಧಿಕವರದಂ-ಅತಿವಿಶಿಷ್ಟವಾದ ವರಂಗಳಂ ಕೊಡುವಂಥ,ಸರ್ವತತ್ವಾದಿತತ್ವಂ-ಸಕಲ ತತ್ವಂಗಳಿಗೆ ಮೊದಲತತ್ವವಾಗಿರ್ಪಂಥ, ಬಿಂದುವ್ಯೋಮಸ್ವರೂಪಂ-ಬಿಂದ್ವಾಕಾಶರೂಪನಾದಂಥ, ತಂ-ಆಪ್ರಸಿದ್ಧನಾದಂಥ,ಶಿವಂ-ಸದಾಶಿವನನು, ಯಃ-ಆವಾತನು, ಚಿಂತಯೇತ್-ಧ್ಯಾನಿಸುವನೋ, ಸಃ-ಆತನು,ಮುಕ್ತಃ-ಜೀವನ್ಮುಕ್ತನಪ್ಪನು. ॥೪೬॥

ಸೂ॥ ಈ ಪ್ರಕಾರವಾದ ಧಾರಣಯೋಗಕ್ಕೆ ಕಾಲಭೇದವಂ ಪೇಳುತ್ತೆ ಆ ಯೋಗಸಿದ್ಧಿಯುಂ ಪೇಳ್ದಪಂ.

ಶ್ಲೋ॥ ಇತ್ಯೇವಂಧಾರಣಾಃಪಂಚಘಟಿಕಾಪಂಚಕಾನ್ವಿತಾಃ।
ಏಕೈಕಾಂಧಾರಯೇದಾಭಿರ್ದೇಹಸಿದ್ಧೋಭವೇನ್ನರಃ॥೪೭॥

ಟೀ॥ ಇತಿ-ಈಪ್ರಕಾರದಿಂದೆ, ಪಂಚ-ಐದಾಗಿರ್ಪಂಥ, ಧಾರಣಾಃ-ಧಾರಣೆಗಳು, ಏವಂ-ಈ ಮರ್ಯಾದೆಯಲ್ಲಿ, ಕ್ರಮದಿಂದೆ,ಘಟಿಕಾಪಂಚಕಾನ್ವಿತಾಃ-ಗಳಿಗೆಗಳೈದರೊಡನೆಕೂಡಲ್ಪಟ್ಟಂಥ, (ರೇಚಕಪೂರಕದಿಂಚರಿಸುವ ಪ್ರಾಣವಾಯುವು ಚಂದ್ರ ಸೂರ್ಯನಾಡಿಗಳಲ್ಲಿ ಐದೈದುಗಳಿಗೆ ಚರಿಸುವುದಾಗಿ ಕ್ರಮದಿಂದೈದೈದು ಭೂತಂಗಳ ನವರವರಧಿದೇವತೆಗಳಂ ಆಯಾಸ್ಥಾನಗಳಲ್ಲಿ ಧ್ಯಾನಿಸಿ ಧರಿಸುವುದೆಂಬುದರ್ಥಂ) ಆಭಿಃ-ಈಧಾರಣೆಗಳಿಂದೆ,ಆವಾತನು, ಏಕೈಕಾಂ-ಒಂದೊಂದು ಭೂತಕ್ಕೆ ಒಂದೊಂದು ಗಳಿಗೆಯನ್ನು, ಧಾರಯೇತ್-ಧರಿಸುವನೋ, ಸಃ ನರಃ-ಆ ಮನುಷ್ಯನು, ದೇಹಸಿದ್ಧಃ-ದೇಹಸಿದ್ಧಿಯುಳ್ಳಾತನು, ಭವೇತ್-ಆಗುವನು. ॥೪೭॥

ಸೂ|| ಪೂರ್ವಾಭ್ಯಾಸಯೋಗಿಗೆ ಈ ಧಾರಣಯೋಗದಿಂದೆ ಶೀಘ್ರದೊಳಪ್ಪ ಫಲ ಪಂ ಪೇಳ್ದಪಂ.

ಶ್ಲೋ|| ಏತಾಸುಭೂಮ್ಯಾದಿಕಧಾರಣಾಸುನೃಣಾಂಸದಾಪ್ರಾಣನಿ
ರೋಧನೇನ। ತ್ರಿದೋಷಜಾಸ್ಸರ್ವಪುರಾಣರೋಗಾಃನಶ್ಯಂ
ತಿಶೀಘ್ರಂನಚಸಂಶಯೋಽತ್ರ ||೪೪||

ಟೀ|| ನೃಣಾಂ-ಪುರುಷರ್ಗೆ, ಏತಾಸು-ಈ ಪೂರ್ವೋದಿತಂಗಳಾಗಿರ್ಪಂಥ, ಭೂಮ್ಯಾದಿಕಧಾರಣಾಸು-ಭೂಮಿ ಮೊದಲಾದ ಧಾರಣೆಗಳಲ್ಲಿ, ಸದಾ-ಅನವರತವೂ, ಪ್ರಾಣನಿರೋಧನೇನ-ಪ್ರಾಣವಾಯುವಂ ತಡೆವುದರಿಂದೆ, ತ್ರಿದೋಷಜಾಃ-ವಾತಪಿತ್ತಶ್ಲೇಷ್ಮವೆಂಬ ತ್ರಿದೋಷದಿಂ ಪುಟ್ಟದಂಥ, ಸರ್ವಪುರಾಣರೋಗಾಃ-ಸಮಸ್ತವಾದ ಚಿರಕಾಲದ ವ್ಯಾಧಿಗಳು, ಶೀಘ್ರಂ-ಬೇಗದಲ್ಲಿ, ನಶ್ಯಂತಿ-ಕೆಡುತ್ತಿಹವು. ಅತ್ರಚ-ಈ ವ್ಯಾಧಿನಾಶದಲ್ಲಿಯೂ, ಸಂಶಯಃ-ಸಂದೇಹವು, ನ-ಇಲ್ಲ. ||೪೪||

ಸೂ||,,ಅಜ್ಞಾತಸ್ಯ ಕರಣಾಸಂಭವಾತ್,, ಎಂಬ ನ್ಯಾಯದಿಂ ದರಿಯದಾತಂಗೆ ಯೋಗಾಭ್ಯಾಸಂ ಫಲಿಸದಾಗಿ, ಜ್ಞಾನಕ್ರಿಯಾಸಂಮೇಳನದಿ ನಭ್ಯಾಸಂ ಮಾಳ್ಪಾತಂಗೆ ಮೋಕ್ಷಸಿದ್ಧಿಯಪ್ಪುದೆಂದು ಪೇಳ್ದಪಂ:—

ಶ್ಲೋ|| ಜ್ಞಾನೇನಕರ್ಮಣಾಪಂಚಧಾರಣಾಯೋಗಿಭಿರ್ಧೃತಾಃ।
ಸದಾಭ್ಯಾಸರತಾಯೈಸ್ತೇತರಂತಿಭವಸಾಗರಂ|| ||೪೫||

ಟೀ|| ಯೈಃಯೋಗಿಭಿಃ-ಆರು ಕೆಲಯೋಗೀಶ್ವರರಿಂದೆ, ಜ್ಞಾನೇನ-ಅರಿವಿನಿಂದವೂ, ಕರ್ಮಣಾ-ಅಭ್ಯಾಸಕ್ರಿಯೆಯಿಂದವೂ, ಪಂಚ-ಐದುಪ್ರಕಾರವಾದ, ಧಾರಣಾಃ-ಧಾರಣೆಗಳು, ಧೃತಾಃ-ಧರಿಸಲ್ಪಟ್ಟುವೋ, ಸದಾಭ್ಯಾಸರತಾಃ-ಲೇಸಾದಧಾರಣಾಭ್ಯಾಸದಲ್ಲಿ ಪ್ರೀತರಾಗಿರ್ಪಂಥ, ತೇ-ಆ ಯೋಗಿಗಳು, ಭವಸಾಗರಂ-ಸಂಸಾರಸಮುದ್ರವನ್ನು,ತರಂತಿ-ದಾಂಟುತ್ತಿಹರು. ||೪೫||

ಇತಿಧಾರಣಯೋಗಃ.

ಸೂ|| ಈ ಧಾರಣಯೋಗಾನಂತರದಲ್ಲಿ ನಿರಾಲಂಬವಾದ ಪರವಸ್ತುವಿನಲ್ಲಿ ಅಹಂಭಾವವಳಿದಾತ್ಮಾರ್ಪಣವಾದ ಸಮಾಧಿಯನೇ ನೈವೇದ್ಯವೆಂದು ಪೇಳ್ದಪಂ.

ಶ್ಲೋ|| ಸುಜ್ಞಾನದೀಪೈಸ್ಸುಧಿಯಾವಲಂಬ್ಯಹೃದಾಲಯೇತ್ವಾಂ
ಮನಸಾವಲೋಕ್ಯ। ಸ್ವಾತ್ಮೋಪಹಾರಂಪರಮಾತ್ಮ
ಲಿಂಗಂಸಮಾಧಿನಾಽಸ್ಮೈವಿನಿವೇದಯಸ್ವ ||೪೬||

ಟೀ॥ ಎಲೈ ಮುಮುಕ್ಷುವಾದಾತನೆ, ತ್ವಂ-ನೀನು, ಹೃದಾಲಯೇ-ಬಿಂದುವೆಂಬ ಹೃದಯಸ್ಥಾನದಲ್ಲಿ, ಪರಮಾತ್ಮಲಿಂಗಂ-ಕ್ರಿಯಾಶಕ್ತಿಯೇ ಪೀಠವಾಗುಳ್ಳ ಜ್ಞಾನಶಕ್ತಿರೂಪವಾದ ಲಿಂಗವನು, ಸುಧಿಯಾ-ಅನಾತ್ಮ ಅಜ್ಞಾನಾದಿ ವಾಸನೆಯಂ ತೊಲಗಿದ ಶುದ್ಧಬುದ್ಧಿಯಿಂದೆ, ಅವಲೋಕ್ಯ-ಸಿಕ್ಷ್ಯಸಿ, ಸುಜ್ಞಾನದೀಪೈಃ-ಸವಿಕಲ್ಪರೂಪದಿಂ ಮರಳಿ ಮರಳಿ ಅರಿವ ಶುದ್ಧಜ್ಞಾನಗಳೆಂಬ ದೀಪಂಗಳೊಡನೆ, ಮನಸಾ-ಮನನರೂಪವಾದ ಆತ್ಮಚೈತನ್ಯದಿಂದ, ಅವಲೋಕ್ಯ-ಕಂಡು, ಅಸ್ಮೈ-ಈ ಪರಮಾತ್ಮಲಿಂಗಕ್ಕೀಶ್ವರ, ಸಮಾಧಿನಾ-ಕ್ಷೀರಕ್ಷೀರದಂತೆ ಸಮರಸಭಾವದಿಂ ಬೆರಸುವ ಸಮಾಧಿಯೋಗದಿಂದೆ, ಸ್ವಾತ್ಮೋಪಹಾರಂ-ಆತ್ಮನೈವೇದ್ಯವನು, ನಿವೇದಯಸ್ವ-ಮರಳಿ ಜೀವಭಾವವಾಗದ ವಿಶೇಷದಿಂ ಸಮರ್ಪಿಸುವುದು. (ತಾತ್ಪರ್ಯ—ಪರಮವಿವೇಕಿಯಾದಾತನು ಪಾಕಾದಿಕದಿಂ ಶುದ್ಧವಾದ ಪವಿತ್ರಾನ್ನಮಂ ಮರಳಿ ಭಸ್ಮರುದ್ರಾದಿಕದಿಂ ಶುದ್ಧಮಂ ಮಾಡಿ ಸ್ವೀಕರಿಸುವಂತೆ ಪರಶಿವಂ ದೀಕ್ಷೆಯಿಂ ಶುದ್ಧನಾದಾತನಂ ಮರಳಿ ದೀಕ್ಷೋತ್ತರವಾದ ಚರ್ಯಾಯೋಗಂಗಳಿಂ ಶುದ್ಧನಂಮಾಡಿ ಸ್ವೀಕರಿಸನಾಗಿ, "ಹೃದಯಂ ಬಿಂದು ಪೀಠಂಸ್ಯಾತ್ಪಶ್ಯಂತ್ಯಾಖ್ಯಂ ಮನಾನನೇ। ಜೀವಾತ್ಮಾ ಪರಮಾತ್ಮಾಚ ವರ್ತತೇ ತತ್ರಸಂತತಂ," ಎಂಬಾಗಮ ಪ್ರಮಾಣದಿಂ ಬಿಂದುವೆಂಬ ಹೃದಯಪೀಠದ ಲಿಂಗಕ್ಕೆ ಆತ್ಮನೈವೇದ್ಯಮಂ ಮಾಳ್ಪುದೇ ಸಮಾಧಿಯೆಂಬುದಭಿಪ್ರಾಯಂ.) ॥೪೬॥

ಸೂ॥ ಈ ಶಿವಾತ್ಮರುಗಳ ಸಾಮರಸ್ಯರೂಪವಾದ ಸಮಾಧಿಯೋಗವನೇ ದೃಷ್ಟಾಂತಪೂರ್ವಕದಿಂ ಪೇಳ್ದಪಂ.

ಶ್ಲೋ॥ ಜಲಸೈಂಧವಯೋರೈಕ್ಯಯೋಗಾದ್ಭವತೀಹಾಪಿತಥಾಹಿ
ಸಾಮರಸ್ಯಂ।ಮನಸಶ್ಚ ಸದಾತ್ಮನಶ್ಚ ಯೋಗಾತ್ಸಮಾಧೀರಿ
ತಿಕಥ್ಯತೇಯಮೀಂದ್ರೈಃ॥ ॥೪೭॥

ಟೀ॥ ಜಲಸೈಂಧವಯೋಃ-ಸಲಿಲಲವಣಂಗಳಿಗೆ, ಐಕ್ಯಯೋಗಾತ್-ಕೇವಲವಾದ ಯೋಗದ ದೆಸೆಯಿಂದ, ಯಥಾ-ಹೇಂಗೆ, ಸಾಮರಸ್ಯಂ-ಸಾಮರಸ್ಯವು, ಭವತಿ-ಆಗುತ್ತಿರ್ದಿತು. ಇಹಾಪಿ-ಈ ಯೋಗಮಾರ್ಗದಲ್ಲಿಯೂ, ಮನಸಶ್ಚ-ಆತ್ಮಚೈತನ್ಯಕ್ಕೂ, ಸದಾತ್ಮನಶ್ಚ-ಪರಮಾತ್ಮನಿಗೂ, ಯೋಗಾತ್-ಯೋಗದದೆಸೆಯಿಂದೆ, ಸಾಮರಸ್ಯಂ-ಸಮರಸಭಾವವು, ತಥಾಹಿ-ಹಾಂಗೇ ಅಹುದು. ಸತು-ಆ ಸಮರಸವಾಯಿತ್ತಾದೊಡೆ, ಯಮೀಂದ್ರೈಃ-ಯೋಗೀಶ್ವರರಿಂದೆ, ಸಮಾಧೀರಿತಿ-ಸಮಾಧಿಯೆಂದು, ಕಥ್ಯತೇ-ಪೇಳಲ್ಪಡುತ್ತಿರ್ದಿತು. (ತಾತ್ಪರ್ಯ-ಪ್ರಕೃತಿಜನ್ಯವಾದ ಮನ ಅಚೇತನವಪ್ಪುದರಿಂ ಪರಮಾತ್ಮನೊಡನೆ ಸಾಮರಸ್ಯಗೊಳ್ಳದಾಗಿ, ಮನಶ್ಶಬ್ದಕ್ಕಾತ್ಮಚೈತನ್ಯವೇ ಅರ್ಥವೆಂಬುದಭಿಪ್ರಾಯಂ.) ॥೪೭॥

ಸೂ॥ ಪರಮುಕ್ತಿ ಜೀವನ್ಮುಕ್ತಿಗಳೊಳಗೆ ಆವ ಅವಸ್ಥೆಯಲ್ಲಿಯಾವರೂ ಆಕಾಶಪ್ರಕಾಶಯೋಗದಂತೆ ಜೀವಪರಮಸಾಮರಸ್ಯವೇ ಸಮಾಧ್ಯವಸ್ಥೆಯೆಂದು ಪೇಳ್ದಪಂ-

ಶ್ಲೋ॥ ಯದಾಭವತಿಜೈಕತ್ವಂಜೀವಾತ್ಮಪರಮಾತ್ಮನೋಃ।
ತದಾಸಮಾಧ್ಯವಸ್ಥಾಂತಾಂಗಮಿಷ್ಯಂತಿಯಮೀಶ್ವರಾಃ ॥೪೮॥

ಟೀ॥ ಯದಾ-ಯಾವಕಾಲದಲ್ಲಿ, ಜೀವಾತ್ಮಪರಮಾತ್ಮನೋಃ-ಧ್ಯಾತೃಧ್ಯೇಯರೂಪವಾದ ಜೀವಪರಮರುಗಳಿಗೆ, ಏಕತ್ವಂ-ನಿರುಪಾಧಿಕವಾದ ಕೈವಲ್ಯವು, ಭವತಿ-ಆಗುತ್ತಿದ್ದೀತು. ತದಾ-ಆಕಾಲದಲ್ಲಿ, ಯಮೀಶ್ವರಾಃ-ಯೋಗೀಶ್ವರರು, ತಾಂ-ಆ ಪೂರ್ವೋದಿತವಾಗಿರ್ಪಂಥ, ಸಮಾಧ್ಯವಸ್ಥಾಂ-ಸಮಾಧಿಯೋಗದವಸ್ಥೆಯನು, ಗಮಿಷ್ಯಂತಿ-ಐಯ್ದುತ್ತಿಹರು. (ತಾತ್ಪರ್ಯ—ಇಲ್ಲಿಯ ಏಕಶಬ್ದಕ್ಕೆ ಏಕರಸತ್ವವುಂ ಪೇಳಲಚೇತನವಪ್ಪುದಾಗಿ, ಕೈವಲ್ಯವೇ ಅರ್ಥವೆಂಬುದಭಿಪ್ರಾಯಂ.) ॥೪೮॥

ಸೂ॥ "ದ್ವಿಧಾಸಮಾಧಿರಾಖ್ಯಾತೋಽಜ್ಞಾತಾಜ್ಞಾತಪ್ರಭೇದತಃ" ಎಂಬುದಾಗಿ, ಈ ಸಮಾಧಿಯು ಜ್ಞಾತಸಮಾಧಿಯೆಂದೂ, ಅಜ್ಞಾತಸಮಾಧಿಯೆಂದೂ, ಎರಡುಪ್ರಕಾರವಪ್ಪುದಾಗಿ ಮೊದಲಲ್ಲಿ ಅಜ್ಞಾತಸಮಾಧಿಸ್ವರೂಪಮಂ ಪೇಳ್ದಪಂ.

ಶ್ಲೋ॥ ಶ್ರೋತ್ರಾದೀನಿನಚೇಂದ್ರಿಯಾಣಿವಿಷಯಾಶ್ಶಬ್ದಾದಯೋಽಶಿಹಂ
ಮನೋವೃತ್ತಿರ್ಲೇಶಸುಖಾಸುಖಾನಿಚತಥಾಮಾನಾವಮಾನಾ
ವಪಿ ॥ ಶೀತೋಷ್ಣಾನಿನಪುಣ್ಯಪಾಪಸುಮಹಾಸಂಕಲ್ಪಜಾಲಾ
ನ್ಯಹೋನ್ಯೇನಾನೇನಸಮಾಧಿನಾಸಹಮುನೌಲೀನೇಪರಬ್ರಹ್ಮಣಿ ॥

ಟೀ॥ ಪರಬ್ರಹ್ಮಣಿ-ಪರಮಾತ್ಮನಲ್ಲಿ, ಮುನೌ-ಯೋಗೀಶ್ವರನು, ಅನೇನ-ಈ, ಸಮಾಧಿನಾ-ಸಮಾಧಿಯೋಗದಿಂದ, ಸಹ-ಕೂಡಿ, ಲೀನೇ-ಸಾಮರಸ್ಯವನೆಯ್ದಲಾಗಿ, ಶ್ರೋತ್ರಾದೀನಿ-ಶ್ರೋತ್ರಮೊದಲಾಗಿರ್ಪಂಥ, ಇಂದ್ರಿಯಾಣಿ-ದಶವಿಧಮಾದಿಂದ್ರಿಯಂಗಳು, ನ-ಇಲ್ಲ. ಶಬ್ದಾದಯಃ-ಶಬ್ದಮೊದಲಾಗಿರ್ಪಂಥ, ವಿಷಯಾಃ-ವಿಷಯಂಗಳು, ನ-ಇಲ್ಲ. ಅಹಂಮನೋವೃತ್ತಿಃ-ಅಹಂಕಾರಮನೋವರ್ತನಗಳು, ನ-ಇಲ್ಲ. ಲೇಶಸುಖಾಸುಖಾನಿಚ ಬುದ್ಧಿಭೇದಮಂ ಕ್ಷಣಿಕಂಗಳಾದ ಸುಖದುಃಖಂಗಳೂ, ನ-ಇಲ್ಲ ತಥಾ-ಹಾಂಗೆ, ಮಾನಾವಮಾನಾವಪಿ-ಪೂಜ್ಯತ್ವಾಪೂಜ್ಯತ್ವಂಗಳೂ, ನ-ಇಲ್ಲ. ಶೀತೋಷ್ಣಾನಿ-ಶೀತೋಷ್ಣಾದಿಗಳು, ನ-ಇಲ್ಲ. ಪುಣ್ಯಪಾಪಸುಮಹಾಸಂಕಲ್ಪಜಾಲಾನಿ-ಪುಣ್ಯಕರ್ಮಂಗಳು ಮಾಡಬೇಕೆಂಬ ಪಾಪಕರ್ಮಂಗಳಂ ಕಳೆಯಬೇಕೆಂಬ ಮಹಾ ಸಂಕಲ್ಪಸಮೂಹಂಗಳು, ನ-ಇಲ್ಲ, ಅಹೋ-ಆಶ್ಚರ್ಯವು. ("ನಶೃಣೋತಿ ನಚಾಘ್ರಾತಿನರಸ್ಯತಿನಪಶ್ಯತಿ । ನಚಸ್ಪರ್ಶಂ ವಿಜಾನಾತಿ ನಚಸಂಕಲ್ಪತೇಮನಃ । ನಚಾಭಿಮನ್ಯತೇ ಕಿಂಚಿನ್ನಚ ಬುಧ್ಯತಿಕಾಷ್ಠವತ್। ಧ್ಯೇಯೇಶಿವೇಯಥಾಲೀನೋ ಧ್ಯಾತಾತಿಷ್ಠತ್ಯಭೇದತಃ। ಅಜ್ಞಾತಸ್ತಂಭನತ್ಕಿಂಚಿದಜ್ಞಾತಸ್ಸಸಮಾಧಿಕಃ", ಎಂಬುದಾಗಿ) ॥೪೯॥

ಸೂ॥ ಅನಂತರದಲ್ಲಿ ಜ್ಞಾತಸಮಾಧಿಸ್ಥನಾದ ಯೋಗೀಶ್ವರನು ಬಾಹ್ಯಾಂತಃಕರಣಂಗಳ ಚೇಷ್ಟಾಚೇಷ್ಟೆಗಳಲ್ಲಿ ಸಾಕ್ಷಿಕತ್ವದಿಂ ನಿರ್ಲೇಪನೆಂದು ಪೇಳ್ದಪಂ.

ಶ್ಲೋ॥ ಯುಕ್ತಾಹಾರೋಯಮೀಂದ್ರೋ ನಿರಶನಪರೋವಾಥ ವಾಯುಕ್ತನಿದ್ರೋನಿದ್ರಾತ್ಯಕ್ತೋಗುಹಾಯಾಂ ವಸತಿವಿ ಚರತಿಕ್ಷ್ಮಾತಲೇನಿಸ್ಪೃಹಾತ್ಮಾ ॥ ನಾನಾಕರ್ಮಕ್ರಿಯಾಸು ಪ್ರಥಿತಕುಶಲಯುಕ್ತೋಪಿವಾನಿಷ್ಕ್ರಿಯೋವಾ ನಾನಾ ಚೇಷ್ಟಾಸ್ವಜಸ್ರಂವಿಹರತಿಚಸಮಾಧೌಸಮಾಸಕ್ತಚೇತಾಃ ॥

ಟೀ॥ ಯಮೀಂದ್ರಃ- ಯೋಗೀಶ್ವರನು, ಯುಕ್ತಾಹಾರಃ-ಕೂಡಲ್ಪಟ್ಟಾಹಾರವುಳ್ಳಾತನಾದರೂ, ಅಥವಾ-ಹಾಂಗಲ್ಲದಿದ್ದೊಡೆ,ನಿರಶನಪರೋವಾ-ನಿರಾಹಾರದಲ್ಲಿ ತತ್ಪರನಾದರೂ, ಯುಕ್ತನಿದ್ರಃ-ಕೂಡಲ್ಪಟ್ಟನಿದ್ರೆಯುಳ್ಳಾತನಾದರೂ, ನಿದ್ರಾತ್ಯಕ್ತಃ-ನಿದ್ರೆಯಿಂದ ಬಿಡಲ್ಪಟ್ಟಾತನಾದರೂ, ನಿಸ್ಪೃಹಾತ್ಮಾ-ವೀತರಾಗನಾಗಿ, ಗುಹಾಯಾಂ-ಗುಹೆಯಲ್ಲಿಯಾದರೂ, ವಸತಿ-ಇರುತ್ತಿಹನು, ಕ್ಷ್ಮಾತಲೇ-ಭೂತಳದಲ್ಲಾದರೂ, ವಿಚರತಿ-ಚರಿಸುತ್ತಿಹನು, ನಾನಾಕರ್ಮಕ್ರಿಯಾಸು-ನಾನಾಪ್ರಕಾರವಾದ ಕರ್ಷಣವಶೀಕರಣಾದಿಕರ್ಮಂಗಳ ವ್ಯಾಪಾರಂಗಳಲ್ಲಿ, ಪ್ರಥಿತಕುಶಲಯುಕ್ತೋಪಿವಾ-ಪ್ರಸಿದ್ಧವಾದ ಕೌಶಲ್ಯದಿಂ ಕೂಡಿದಾತನಾದರೂ, ನಿಷ್ಕ್ರಿಯೋವಾ-ಆ ವ್ಯಾಪಾರಂಗಳ ಬಿಟ್ಟಾತನಾದರೂ, ನಾನಾಚೇಷ್ಟಾಸು-ನಾನಾವ್ಯಾಪಾರಂಗಳಲ್ಲಿ, ಅಜಸ್ರಂ-ಅನವರತವೂ, ಸಮಾಧೌ-ಶಿವಸಾಮರಸ್ಯದಲ್ಲಿ, ಸಮಾಸಕ್ತಚೇತಾಃ-ಮುಳುಗಿದ ಚಿತ್ತವುಳ್ಳಾತನಾಗಿ, ವಿಹರತಿ-ಕ್ರೀಡಿಸುತ್ತಿಹನು. (ತಾತ್ಪರ್ಯ-"ಚಿದಾನಂದರಸೋಲ್ಲಾಸಪರಿಪೂರ್ಣದಿಗಂತರಃ।ಚಿದಾನಂದರಸಜ್ಞಶ್ಚ ಯಥಾಶಿಸ್ತೇರುದ್ಧಮಾರುತಃ॥ ಸಪ್ರಜ್ಞಾತಸಮಾಧಿಸ್ಸ್ಯಾದ್ಧ್ಯಾನದ್ವಾದಶಕಾವಧಿಃ" ಎಂದುದಾಗಿ, "ಪುಂಖಾನುಪುಂಖವಿಷಯೇಕ್ಷಣತತ್ಪರೋಪಿಬ್ರಹ್ಮಾವಲೋಕನನಿರೂಢಮನಾಶ್ಚಯೋಗೀ" ಎಂಬ ಯೋಗಶಾಸ್ತ್ರಪ್ರಮಾಣದಿಂ ಪರಾನುಗ್ರಹಾರ್ಥವಾಗಿ ಭೋಗಿಯಾದರೂ ಜೀವನ್ಮುಕ್ತನಪ್ಪುದರಿಂ ನಿರ್ಲೇಪನೆಂಬುದಭಿಪ್ರಾಯಂ)

ಸೂ ॥ ಈಪ್ರಕಾರದಿಂದಷ್ಟಾಂಗಯೋಗಾಭ್ಯಾಸಸಂಪನ್ನನಾದ ಯೋಗೀಶ್ವರಂಗಾಗುವ ಸಿದ್ಧಿಗಳಂ ಪೇಳ್ವೆನೆಂದು ಪೇಳ್ದಪಂ: —

ಶ್ಲೋ॥ ಏವಮಷ್ಟಾಂಗಯೋಗೇನಹಠೇನಾನೇನನೈಷ್ಠಿಕಃ ।
ಅನಾಲಸ್ಯಕೃತಾಭ್ಯಾಸಸ್ಸಿದ್ಧೀರ್ವೃಶ್ಯಣುತತ್ಪ್ರತಾಃ ॥೫೧॥

ಟೀ॥ ಯಃ-ಆವನಾನೊರ್ವ, ನೈಷ್ಠಿಕಃ-ದೇಹಾಂತವಾಗಿ ಯೋಗಾಭ್ಯಾಸನಿಷ್ಠನಾದಾತನು, (ಭೌತಿಕನೋಪಾದಿಯಲ್ಲಿ ಕಾಮಿತಫಲಮಂಪಡೆದು ಮಧ್ಯದಲ್ಲಿ ಯೋಗಾಭ್ಯಾಸಮಂ ಬಿಡುವಾತನಲ್ಲವೆಂಬುದರ್ಥಂ) ಏವಂ-ಈಪ್ರಕಾರವಾದ, ಹಠೇನ-ಹಠರೂಪವಾಗಿರ್ಪಂಥ, ಅನೇನ-ಈ, ಅಷ್ಟಾಂಗಯೋಗೇನ-ಅಷ್ಟಾಂಗಯೋಗದಿಂದ,ಅನಾ

ಲಸ್ಯಕೃತಾಭ್ಯಾಸಃ-ಅನಾಲಸ್ಯಕೃತಾಭ್ಯಾಸವುಳ್ಳಾತನಾಗುವನೋ, ತಸ್ಯ-ಆತಂಗೆ, ತಾ. ಆಲೋಕಪ್ರಸಿದ್ಧಂಗಳಾಗಿರ್ಪಂಥ, ಸಿದ್ಧೀಃ-ಸಿದ್ಧಿಗಳನು, ಶೃಣು-ಕೇಳು. ॥೫೦॥

ಸೂ॥ ಆ ಸಿದ್ಧಿಗಳ ನೈದುಶ್ಲೋಕಂಗಳಿಂ ಪೇಳ್ವಪಂ:—

ಶ್ಲೋ॥ ಪ್ರಥಮೇಹತರುಕ್ಚ್ಛಸರ್ವಲೋಕಪ್ರಿಯವಿವಾಥಸವತ್ಸರೇ
ದ್ವಿತೀಯೇ । ಕವಿತಾಂಕುರುತೇಸುಪರ್ವವಾಣ್ಯಾಭುಜ
ಗಾದ್ಯೈರ್ನಚಬಾಧ್ಯತೇತೃತೀಯೇ ॥೫೩॥

ಟೀ॥ ಸಃ-ಆಯೋಗಾಭ್ಯಾಸವಂಮಾಡುವಾತನು, ಪ್ರಥಮೇ-ಮೊದಲಾದ, ವತ್ಸರೇ-ವರ್ಷದಲ್ಲಿ, ಹತರುಕ್ಚ-ರೋಗವಿಲ್ಲದಾತನಾಗಿ, ಸರ್ವಲೋಕಪ್ರಿಯವಿವ-ಸಕಲ ಲೋಕಕ್ಕೆ ಪ್ರೀತನೇ ಆಗುವನು. ಅಥ-ಅನಂತರವಲ್ಲಿ, ದ್ವಿತೀಯೇ-ಎರಡನೆಯವರ್ಷದಲ್ಲಿ, ಸುಪರ್ವವಾಣ್ಯಾ-ಸಂಸ್ಕೃತಭಾಷೆಯಿಂದ, ಕವಿತಾಂ-ಕವಿತ್ವವನು, ಕುರುತೇ-ಮಾಡುತ್ತಿಹನು, ತೃತೀಯೇ-ಮೂರನೆಯವರ್ಷದಲ್ಲಿ, ಭುಜಗಾದ್ಯೈಃ-ಸರ್ಪ ಮೊದಲಾದ ದುಷ್ಟಪ್ರಾಣಿಗಳಿಂದ, ನಬಾಧ್ಯತೇ-ಬಾಧಿಸಲ್ಪಡುತ್ತಿರನು. ॥೩॥

ಶ್ಲೋ॥ ಚತುರ್ಥಕೇನಾತುರಹಾಪಿಪಾಸಾನಿದ್ರಾದಿಶೀತಾತಪವರ್ಜಿ
ತಸ್ಸ್ಯಾತ್ । ದೂರಶ್ರವಃಪಂಚಮವತ್ಸರೇವಾಕ್ಸಿದ್ಧಿಃಪ
ರೇಷಾಂತನುಷುಪ್ರವೇಶಃ ॥೫೪॥

ಟೀ॥ ಚತುರ್ಥಕೇನ-ನಾಲ್ಕನೆಯವತ್ಸರದಿಂದ, ಆತುರಹಾ-ವ್ಯಾಕುಲವಃ ಕೆಡಿಸುವಾತನಾಗಿ, ಪಿಪಾಸಾನಿದ್ರಾದಿಶೀತಾತಪವರ್ಜಿತಃ-ತೃಷೆನಿದ್ರೆ (ಆದಿಶಬ್ದದಿಂ ಪಸಿವೃ ಛೇಕಾದಿಕವು) ಶೀತಾತಪಂಗಳೆಂಬ ಇವರಿಂದ ತೊಲಗಲುಪಟ್ಟಾತನು, ಸ್ಯಾತ್-ಆಗುವನು. ಪಂಚಮವತ್ಸರೇ-ಐದನೆಯವರ್ಷದಲ್ಲಿ, ದೂರಶ್ರವಃ-ದೂರಶ್ರವಣವು, ವಾಕ್ಸಿದ್ಧಿಃ-ವಾಕ್ಯದಸಿದ್ಧಿಯು, ಪರೇಷಾಂ ತನುಷು ಪ್ರವೇಶಃ-ಪರಕಾಯಪ್ರವೇಶವು, ಅಹುದು.

ಶ್ಲೋ॥ ಷಷ್ಠೇಸವಜ್ರೈರಪಿನೈವಭಿದ್ಯತೇತತೋಽತಿವೇಗೀಚಸ
ದೂರದರ್ಶನಃ। ತ್ಯಜೇದ್ಭುವಂಸಪ್ತಮವತ್ಸರೇಽಷ್ಟಧಾವಿ
ಭೂತಯಶ್ಚಾಥಭವೇಯುರಷ್ಟಮೇ ॥೫೫॥

ಟೀ॥ ಸಃ ಆ ಯೋಗೀಶ್ವರನು, ಷಷ್ಠೇ-ಆರನೆಯಸಂವತ್ಸರದಲ್ಲಿ, ವಜ್ರೈರಪಿ-ವಜ್ರಂಗಳಿಂದವೂ, ನಭಿದ್ಯತಪಿವ-ಭೇದಿಸಲ್ಪಡುತ್ತಿರನೇ, ತತಃ-ಅನಂತರದಲ್ಲಿ, ಅತಿವೇಗೀಚ-ಅತ್ಯಂತವೇಗವುಳ್ಳಾತನಾಗಿ, ಸುದೂರದರ್ಶನಃ-ಲೋಕಾಂತರಗಳಲ್ಲಿಯವಸ್ತುಗಳಂ ಕಾಣುವ ದೂರದೃಷ್ಟಿಯುಳ್ಳಾತನಾಗುವನು. ಸಪ್ತಮವತ್ಸರೇ-ಏಳನೆಯವರ್ಷದಲ್ಲಿ, ಭುವಂ-ಭೂಮಿಯನ್ನು, ತ್ಯಜೇತ್-ಬಿಡುವನು. (ಖೇಚರತ್ವಸಿದ್ಧಿಯಹುದೆಂ

ಖುವರ್ಥಂ) ಅಥ-ಅನಂತರವಲ್ಲಿ, ಅಷ್ಟಮೇ-ಎಂಟನೆಯುವತ್ಸರದಲ್ಲಿ, ಅಷ್ಟಧಾ-ಅಣಿ ಮಾದಿರೂಪದಿಂದೆಂಟುಪ್ರಕಾರವಾದ, ವಿಭೂತಯಃ-ಐಶ್ವರ್ಯಂಗಳೂ, ಭವೇಯುಃ-ಆಗುವುವು. ||೫೪||

ಶ್ಲೋ|| ಗಗನಚರೋದಿಗ್ವಿಚರೋನವಮೇಽಬ್ದೇ ವಜ್ರಕಾಯ ಸ್ಸ್ಯಾತ್ । ಸಮನೋವೇಗೀದಶಮೇಯತ್ರೇಚ್ಛಾತತ್ರಗಚ್ಛತಿಹಿ ||೫೫||

ಟೀ|| ನವಮೇ-ಒಂಭತ್ತನೆಯ, ಅಬ್ದೇ-ವರ್ಷದಲ್ಲಿ, ಯುಕ್ತ-ಶಿವಸಾನೂರ್ವಯೋಗೀಶ್ವರನು, ಗಗನಚರಃ-ಆಕಾಶದಲ್ಲಿ ಚರಿಸುವಾತನಾಗಿ, ದಿಗ್ವಿಚರಃ-ದಿಕ್ಕುಗಳಲ್ಲಿ ಚರಿಸುವಾತನಾಗಿ, ವಜ್ರಕಾಯಃ-ವಜ್ರಶರೀರಿಯು, ಸ್ಯಾತ್-ಆಗುವನೋ, ಸಃ-ಆತನು, ದಶಮೇ-ಹತ್ತನೆಯ ವರ್ಷದಲ್ಲಿ, ಮನೋವೇಗೀ- ಮನೋವೇಗವುಳ್ಳಾತನಾಗಿ-ಯತ್ರ-ಆವಸ್ಥಲದಲ್ಲಿ, ಇಚ್ಛಾ-ಎಯ್ದುವಇಚ್ಛೆಯುಂಟೋ, ತತ್ರ-ಅಲ್ಲಿ, ಗಚ್ಛತಿಹಿ-ಎಯ್ದುತ್ತಿಹನಲಾ ||೫೫||

ಶ್ಲೋ|| ಏಕಾದಶಕೇವರ್ಷೇಸರ್ವಾಜ್ಞಾಸಿದ್ಧಿಮಾನ್ಭವೇದ್ಯೋಗೀ । ದ್ವಾದಶಕೇಶಿವತುಲ್ಯೋಹರ್ತಾಕರ್ತಾಸ್ವಯಂಭವತಿ ||೫೬||

ಟೀ||ಏಕಾದಶಕೇ-ಹನ್ನೊಂದನೆಯದಾದ, ವರ್ಷೇ-ವರ್ಷದಲ್ಲಿ, ಯೋಗೀ-ಯೋಗೀಶ್ವರನು, ಸರ್ವಾಜ್ಞಾಸಿದ್ಧಿಮಾನ್-ಸರ್ವ-ಸಕಲಲೋಕಂಗಳಲ್ಲಿ, ಆಜ್ಞಾಸಿದ್ಧಿಮಾನ್-ಆಜ್ಞಾಸಿದ್ಧಿಯುಳ್ಳಾತನು, ಭವೇತ್-ಆಗುವನು, ದ್ವಾದಶಕೇ-ಹನ್ನೆರಡನೆಯ ವರ್ಷದಲ್ಲಿ, ಶಿವತುಲ್ಯಃ-ಶಿವಸಮಾನನಾಗಿ, ಸ್ವಯಂ-ತಾನೇ, ಹರ್ತಾ-ಲೋಕಂಗಳ ಸಂಹರಿಸುವಾತನು, ಕರ್ತಾ-ಸೃಷ್ಟಿಮಾಡುವಾತನು, ಭವತಿ-ಆಗುತ್ತಿಹನು. ||೫೬||

ಸಾಗುರುಭಕ್ತಿಯಿಂನಿರ್ವಿಘ್ನವಾದಭ್ಯಾಸದಿಂ ಯೋಗಸಿದ್ಧನಪ್ಪನೆಂದುಪೇಳ್ದಪಂ

ಶ್ಲೋ|| ದ್ವಾದಶವರ್ಷೈರೇವಂ ಸದ್ಗುರುನಾಥಸ್ಯಪಾದಯೋರ್ಭಕ್ತ್ಯಾ । ನಿರ್ವಿಘ್ನೇನದೃಢಾತ್ಮಾಸಿದ್ಧೋಭವತೀತಿಸಂಸಿದ್ಧಂ ||

ಟೀ|| ಏವಂ-ಈ ಪೂರ್ವೋಕ್ತಪ್ರಕಾರದಿಂದೆ, ಸದ್ಗುರುನಾಥಸ್ಯ-ಶ್ರೀಗುರುಸ್ವಾಮಿಯ, ಪಾದಯೋಃ-ಪಾದಂಗಳಲ್ಲಿಯ, ಭಕ್ತ್ಯಾ-ಭಕ್ತಿಯಿಂದೆ, ದ್ವಾದಶವರ್ಷೈಃ-ಹನ್ನೆರಡುವರ್ಷಂಗಳಿಂದೆ, ನಿರ್ವಿಘ್ನೇನ-ವಿಘ್ನವಿಲ್ಲದಿಹುದರಿಂದೆ, (ಆ ವಿಘ್ನಂಗಳಾವಾವುವೆಂದೊಡೆ-ಅತ್ಯುಷ್ಣ ವತಿಲವಣವತ್ಯಾಮ್ಲವತಿಕಟುವಪವಿತ್ರಾತ್ಯಾಹಾರದಿಂ ತಿಲತೈಲಪಿಣ್ಯಾಕ-ಸರ್ಷಪಲಶುನಮೂಲಕಂದಬದರೀ ಫಲಾದಿಗಳಿಂ ದುರ್ಜನಸಂಗ ಸ್ತ್ರೀಸಂಗವಹ್ನಿಸಂಗದೇಶಪರ್ಯಟನಾದಿಕಂಗಳಿಂ ಸ್ನಾನೋಪವಾಸ ಲೋಕಾನುಸರಣಬಹುಭಾಷಣ

ಬಹ್ವಾಹಾರ ಬಹುನಿದ್ರಾದಿಕಂಗಳಿಂ ಯೋಗಕ್ಕೆ ವಿಘ್ನವಪ್ಪುದಾಗಿ, ಇವಂಬಿಡಬೇಕೆಂ ಬುದರ್ಥಂ) ದೃಢಾತ್ಮಾ-ನಿಶ್ಚಯಬುದ್ಧಿಯುಳ್ಳಂಥಾತನು, ಸಿದ್ಧಃ-ಯೋಗಸಿದ್ಧನು, ಭವ ತಿ-ಆಗುತ್ತಿಹನು, ಇತಿ-ಹೀಗೆಂಬುದು, ಸಂಸಿದ್ಧಂ-ಚೆನ್ನಾಗಿ ಸಿದ್ಧವು [೬೭]

ಸೂ॥ ಈ ಅಷ್ಟಾಂಗಯೋಗವೇ ಅಷ್ಟವಿಧಾರ್ಚನಾರೂಪವಪ್ಪುದರಿಂದೀಯೋಗಂ ಗಳನಭ್ಯಾಸಿಸಲ್ಬೇಕೆಂದು ಪೇಳ್ದಪಂ:—

ಶ್ಲೋ॥ ಅತಏವಮಹಾಶ್ಚರ್ಯಂ ಯೋಗಮಷ್ಟಾಂಗಮಾದರಾತ್ ।
ಶಿವಪೂಜಾಂಗಮೇತದ್ಧಿತ್ವಮೇವಾಭ್ಯಾಸನಂಕುರು ॥೬೮॥

ಟೀ॥ ಅತಏವ-ಇದುಕಾರಣದಿಂದವೇ, ಮಹಾಶ್ಚರ್ಯಂ- ಖೇಚರತ್ವಾದಿಸಿದ್ಧಿಗಳ ಪ್ಪುದರಿಂ ವತ್ಯಾಶ್ಚರ್ಯವಾಗಿರ್ಪಂಥ, ಅಷ್ಟಾಂಗಂ-ಯಮನಿಯಮಾದಿರೂಪದಿಂ ವಷ್ಟಾಂಗ ವಾಗಿರ್ಪಂಥ, ಯೋಗಂ-ಶಿವಯೋಗವನು, ಆದರಾತ್-ಪ್ರೀತಿಯುತ್ತಣಿಂದೆ, ತ್ವಮೇವ- ನೀನೇ, ಅಭ್ಯಾಸನಂ-ಅಭ್ಯಾಸವನ್ನು, ಕುರು-ಮಾಡು, ಏತತ್-ಈ ಅಷ್ಟಾಂಗಯೋಗ ವು, ಹಿ-ಪ್ರಸಿದ್ಧವಾಗಿ, ಶಿವಪೂಜಾಂಗಂ-ಶಿವಾರ್ಚನಾಂಗವು. ॥೬೮॥

ಸೂ॥ ಈ ಹಠಯೋಗೀಶ್ವರಂಗೆ ಭೋಗಮೋಕ್ಷಂಗಳು ಸ್ವೇಚ್ಛಾಧೀನಂಗಳೆಂದು ಪೇಳ್ದಪಂ:—

ಶ್ಲೋ॥ ನಿರಂತರಕೃತಾಭ್ಯಾಸಾಜ್ಜರಾಮರಣವರ್ಜಿತಃ। ಸಜೀವೇ
ದಿಚ್ಛಯಾಲೋಕೇತತೋಮುಕ್ತಿಮವಾಪ್ನುಯಾತ್ ॥೬೯॥

ಟೀ॥ ನಿರಂತರಕೃತಾಭ್ಯಾಸಾತ್-ಎಡವಂತವಿಲ್ಲದೆ ಮಾಡಲ್ಪಟ್ಟ ಯೋಗಾಭ್ಯಾ ಸದ ದೆಸೆಯಿಂದೆ, ಜರಾಮರಣವರ್ಜಿತಃ-ಜರಾಮರಣಂಗಳಿಲ್ಲದಿರ್ಪಂಥ, ಸಃ-ಆಯೋಗೀ ಶ್ವರನು, ಇಚ್ಛಯಾ-ಸ್ವೇಚ್ಛೆಯಿಂದೆ, ಲೋಕೇ-ಲೋಕದಲ್ಲಿ, ಜೀವೇತ್-ಬದುಕುವ ನು. ತತಃ-ಅನಂತರದಲ್ಲಿ, ಮುಕ್ತಿಂ-ಮೋಕ್ಷವನು, ಅವಾಪ್ನುಯಾತ್-ಎಯ್ದುವನು.

ಸೂ॥ ಈ ಅಷ್ಟಾಂಗಯೋಗವೇ ಲಿಂಗಸ್ಥಲವೆನಿಸುವ ಭಕ್ತಾದ್ಯೈಕ್ಯಾಂತವಾದ ಷಟ್ಸ್ಥಲವಪ್ಪುದೆಂದು ನಾಲ್ಕು ಗ್ರಂಥಂಗಳಿಂ ಪೇಳ್ದಪಂ:—

ಶ್ಲೋ॥ ಯಮೇನನಿಯಮೇನೈವಮನ್ಯೇಭಕ್ತ ಇತಿಸ್ವಯಂ ।
ಸ್ಥಿರಾಸನಸಮಾಯುಕ್ತೋ ಮಹೇಶ್ವರಪದಾನ್ವಿತಃ ॥೭೦॥

ಟೀ ॥ ಯಮೇನನಿಯಮೇನೈವ-ಯಮನಿಯಮವೆಂಬ ಯೋಗದ್ವಯದಿಂದವೆ, ಸ್ವಯಂ-ತಾನು, ಭಕ್ತಇತಿ-ಭಕ್ತನೆಂದು, ಮನ್ಯೇ-ತಿಳಿವುತ್ತಿರ್ದೇನೆ. ಸ್ಥಿರಾಸನಸಮಾ ಯುಕ್ತಃ-ಸ್ಥಿರವಾದಾಸನವನೊಡಗೂಡಿದಾತನು, ಮಹೇಶ್ವರಪದಾನ್ವಿತಃ- ಮಹೇಶ್ವರ ಸ್ಥಲದಿಂದೆ ಕೂಡಿದಾತನು, (ಯಮನಿಯಮಂಗಳೇ ಶ್ರದ್ಧಾರೂಪವಪ್ಪುದರಿಂದಾತನೇ

ಭಕ್ತನೆನಿಸುವನು. ಸ್ಥಿರಾಸನವೇ ನಿಷ್ಠಾರೂಪವಪ್ಪುದರಿಂದಾತನೇ ಮಾಹೇಶ್ವರನೆನಿಸುವನೆಂಬುದರ್ಥಂ) ||೬೦||

ಶ್ಲೋ|| ಚರಾಚರಲಯಸ್ಥಾನಂಲಿಂಗಮಾಕಾಶಸಂಜ್ಞಕಂ । ಪ್ರಾಣೋತದ್ವ್ಯೋಮ್ನಿಸಂಲೀನೇಪ್ರಾಣಲಿಂಗೀಭವೇತ್ಪುಮಾನ್ ॥

ಟೀ|| ಚರಾಚರಲಯಸ್ಥಾನಂ-ಚರ-ಚೇತನವೆನಿಸುವ ಸವಿಕಲ್ಪನಿರ್ವಿಕಲ್ಪಾತ್ಮಕವಾದ ಜ್ಞಾನಸಂತಾನಕ್ಕೂ, ಅಚರ-ಅಚೇತನವೆನಿಸುವ ತತ್ವತಾತ್ವಿಕಂಗಳಿಗೂ, ಲಯಸ್ಥಾನಂ-ಬೀಜರೂಪದಿಂ ಗರ್ಭೀಕರಿಸುವ ಲಯಸ್ಥಾನವಾದಂಥ, ಲಿಂಗಂ-ನಾದಾತ್ಮಕವಾದ ಶುದ್ಧಪ್ರಸಾದಲಿಂಗವು, ಆಕಾಶಸಂಜ್ಞಕಂ-ಆಕಾಶವೆಂಬಹೆಸರುಳ್ಳುದು, ತದ್ವ್ಯೋಮ್ನಿ-ಆ ಪರಮಾಕಾಶವೆನಿಸುವ ಶಿವಬೀಜದಲ್ಲಿ, ಪ್ರಾಣೇ-ಪ್ರಾಣಕಲಾತ್ಮಕವಾದಾತ್ಮಬೀಜವು, ಸಂಲೀನೇ-ಮನೋಮಾರುತಂಗಳೊಡನೆಕೂಡಿ ವಿಲಯವನೆಯ್ದಲಾಗಿ, ಪುಮಾನ್-ಆ ಪ್ರಸಾದಮಾಸಂಪನ್ನನಾದ ಪುರುಷನು, ಪ್ರಾಣಲಿಂಗೀ-ಪ್ರಾಣಲಿಂಗಿಯು, ಭವೇತ್-ಆಗುವನು. (ಆತಂಗನುಭವಭಕ್ತಿಯುಪ್ಪುದರಿಂ ಪ್ರಾಣಲಿಂಗಿಯೆಂಬುದರ್ಥಂ) ||೬೧||

ಶ್ಲೋ|| ಪ್ರತ್ಯಾಹಾರೇಣ ಸಂಯುಕ್ತಃಪ್ರಸಾದೀತಿನಸಂಶಯಃ ।
ಧ್ಯಾನಧಾರಣಸಂಪನ್ನಶ್ಶರಣಸ್ಥಲವಾನ್ ಸುಧೀಃ ||೬೨||

ಟೀ|| ಪ್ರತ್ಯಾಹಾರೇಣ-ಆ ಪ್ರಾಣಲಿಂಗದಲ್ಲಿ ಲಯಿಸುವ ಮನೋಮಾರುತಂಗಳನು ಕೆನರಲೀನವಿಹುದರಿಂದೆ, ಸಂಯುಕ್ತಃ-ಕೂಡಿದಂಥಾತನು, ಪ್ರಸಾದೀತಿ-ಪ್ರಸಾದಿಯೆನಿಸುವನು, ಸಂಶಯಃ-ಸಂದೇಹವು-ನ-ಇಲ್ಲ. (ಆತಂಗವಧಾನಭಕ್ತಿಯುಪ್ಪುದರಿಂ ಪ್ರಸಾದಿಯೆನಿಸುವನೆಂಬುದರ್ಥಂ) ಧ್ಯಾನಧಾರಣಸಂಪನ್ನಃ- ಮಹಾಲಿಂಗದಧ್ಯಾನದಿಂ ಧಾರಣದಿಂ ಸಂಪನ್ನನಾದಂಥ, ಸುಧೀಃ-ಬಲ್ಲಾತನು, ಶರಣಸ್ಥಲವಾನ್-ಶರಣಸ್ಥಲವುಳ್ಳಾತನಾಗುವನು. (ಆಧ್ಯಾನಧಾರಣಯೋಗಂಗಳಿಂದಾನಂದಭಕ್ತಿಯುಪ್ಪುದಾಗಿ ಆತನೇ ಶರಣನೆಂಬುದರ್ಥಂ) ||೬೨||

ಶ್ಲೋ|| ಲಿಂಗೈಕ್ಯೋದ್ವೈತಭಾವಾತ್ಮಾನಿಷ್ಕಲೈಕಸಮಾಧಿನಾ ।
ಏವಮಷ್ಟಾಂಗಯೋಗೇನವೀರಶೈವೋಭವೇನ್ನರಃ ||೬೩||

ಟೀ|| ನಿಷ್ಕಲೈಕಸಮಾಧಿನಾ-ಸಂಪೂರ್ಣಕುಂಭದಂತೆ ನಿಸ್ತರಂಗಾಂಬುಧಿಯಂತೆ ನಿಷ್ಕಲತ್ವವೇ ಮುಖವಾದ ಸಮಾಧಿಯೋಗದಿಂದೆ, ಅದ್ವೈತಭಾವಾತ್ಮಾ-ಜ್ಞಾತೃಜ್ಞೇಯವೆಂಬ ದ್ವೈತಭಾವವಿಲ್ಲದಾತನು, ಲಿಂಗೈಕ್ಯಃ-ಲಿಂಗೈಕ್ಯನೆನಿಸುವನು. ಆತಂಗೆ ಸಮರಸಭಕ್ತಿಯುಪ್ಪುದರಿಂದೈಕ್ಯನೆಂಬಭಿಪ್ರಾಯಂ) ಏವಂ- ಈಪ್ರಕಾರವಾದ, ಅ

ಷ್ಟಾಂಗಯೋಗೇನ-ಯಮಾದ್ಯಷ್ಟಾಂಗಯೋಗದಿಂದೆ, ನರಃ-ಪುರುಷನು, ವೀರಶೈವಃ-ಷಟ್ಸ್ಥಲವುಳ್ಳ ವೀರಶೈವನು, ಭವೇತ್-ಆಗುವನು. ॥೬೩॥

ಸೂ॥ ಈ ಮರ್ಯಾದೆಯಲ್ಲಿ ಹಿಂದೆಪೇಳ್ದ ಕರ್ಮಾಷ್ಟಾಂಗಯೋಗದಿಂದವೂ ಮುಂದೆಪೇಳ್ವ ಜ್ಞಾನಾಷ್ಟಾಂಗಯೋಗದಿಂದವೂ ಶಿವಯೋಗವನಭ್ಯಾಸವಂ ಮಾಡುವುದೆಂಬ ಪೇಳ್ದಪಂ:—

ಶ್ಲೋ॥ ತಸ್ಮಾತ್ಸರ್ವಪ್ರಯತ್ನೇನಕರ್ಮಣಾಜ್ಞಾನತೋಽಪಿವಾ ।
ತ್ವಮಪ್ಯಷ್ಟಾಂಗಮಾರ್ಗೇಣಶಿವಯೋಗೀಭವಾನಘ ॥೬೪॥

ಟೀ॥ ಅನಘ-ಎಲೆಪಾಪರಹಿತನಾದ ಶಿಷ್ಯನೆ, (ಇಲ್ಲಿ ಯಮನಿಯಮಾದಿಕಂಗಳಿಂ ಸಂಚಿತಪ್ರಾರಬ್ಧರೂಪಮಾದ ಪಾಪದನಾಶಮಪ್ಪುದಾಗಿ, ಅದೇ ಶಾಂತಿಯೆನಿಸುವುದಕ್ಕೆ ಸಮ್ಮತಿ:— "ಪ್ರಾಣಾಯಾಮೇನಸಿದ್ಧ್ಯಂತಿಸರ್ವಪಾಪಂ ಶಮ್ಯಾದಯಃ ಕ್ರಮಾತ್ । ಶಾಂತಿಃಪ್ರಶಾಂತಿರ್ದೀಪ್ತಿಶ್ಚ ಪ್ರಸಾದಶ್ಚ ತತಃಪರಂ। ನಾಶಸ್ಸರ್ವಸ್ಯ ಪಾಪಸ್ಯಶಾಂತಿರಿತ್ಯಭಿಧೀಯತೇ । ತಮಸೋಽಂತರ್ಬಹಿರ್ನಾಶಃಪ್ರಶಾಂತಿರಭಿಧೀಯತೇ॥ ಬಹಿರಂತಃಪ್ರಕಾಶೋಯಸ್ಸಾದೀಪ್ತಿರಿಹಕಥ್ಯತೇ । ಸ್ವಚ್ಛತಾಯಾತುಸಾಬುದ್ಧೇಃಪ್ರಸಾದಃಪರಿಕೀರ್ತಿತಃ" ಎಂದುದಾಗಿ, ಪಾಪರಹಿತನಪ್ಪುದರಿಂ ಶಾಂತಿಸಂಪನ್ನನೆಂಬುದಭಿಪ್ರಾಯಮಂ) ತಸ್ಮಾತ್ ಆ ಅಷ್ಟಾಂಗಯೋಗವೇ ವೀರಶೈವವಪ್ಪುದರಿಂದೆ, ಸರ್ವಪ್ರಯತ್ನೇನ-ಹಿಂದೆ ಹೇಳಿದನೇಕಪ್ರಕಾರವಾಗಿರ್ಪಂಥ, ಕರ್ಮಣಾ-ಬಹಿರಂಗಮಾದ ಕರ್ಮಾಷ್ಟಾಂಗಯೋಗದಿಂದಲಾದರೂ, ಜ್ಞಾನತಃ-ಜ್ಞಾನರೂಪವಾಗಿರ್ಪಂಥ, ಅಷ್ಟಾಂಗಮಾರ್ಗೇಣವಾ-ಅಷ್ಟಾಂಗಯೋಗಮಾರ್ಗದಿಂದಲಾದರೂ, ತ್ವಮಪಿ-ನೀನು, ಶಿವಯೋಗೀ-ಶಿವಯೋಗವುಳ್ಳಾತನು, ಭವ-ಆಗು. (ತಾತ್ಪರ್ಯ-ಯಮನಿಯಮಾದಿಕಂಗಳಿಂ ಪಾಪನಾಶವೇ ಶಾಂತಿಯೆನಿಸುವುದು. ಆ ಪಾಪನಾಶದಿಂ ಬಾಹ್ಯಾಂತರವಲ್ಲಿಯ ಅಂಧಕಾರನಾಶವೇ ಪ್ರಶಾಂತಿಯೆನಿಸುವುದು. ಅದರಿಂದೊಳಹೊರಗೆ ಬೆಳಗನೀಕ್ಷಿಸುವುದು ದೀಪ್ತಿಯೆನಿಸುವುದು. ಅದರಿಂ ಬುದ್ಧಿಯ ನಿರ್ಮಲತೆಯೇ ಪ್ರಸಾದವೆನಿಸುವುದು. ಆ ಪ್ರಸಾದ ಬುದ್ಧಿಯಿಂ ಮುಂದೆ ಪೇಳ್ವ ರಾಜಯೋಗಾಭ್ಯಾಸಮಂ ಮಾಳ್ಪುದೆಂಬುದಭಿಪ್ರಾಯಮಂ) ॥೬೪॥

ಇತಿ ಶ್ರೀಮದ್ವೇದವೇದಾಂತಾಗಮಪುರಾಣಸ್ಮೃತೀತಿಹಾಸಪ್ರತಿಪಾದಿತ ಶ್ರೀವೀರಶೈವಮಾರ್ಗಸ್ಥಾಪನಾಚಾರ್ಯ ಶ್ರೀಬಸವಾರಾಧ್ಯ ವಿರಚಿತ ಕರ್ನಾಟಕ ಟೀಕಾವಿರಾಜಿತಾಯಾಂ-ಶ್ರೀಚೆನ್ನಸದಾಶಿವಯೋಗೀಶ್ವರ ವಿರಚಿತಾಯಾಂ- ಶಿವಯೋಗಪ್ರದೀಪಿಕಾಯಾಂ- ಅಷ್ಟಾಂಗಶಿವಪೂಜಾವಿಧಾನಂ ನಾಮ ತೃತೀಯಃಪಟಲಃ.

## ಶ್ರೀಸಾಂಬಾಯಪರಬ್ರಹ್ಮಣೇನಮಃ.

## (ಅಥ ಚತುರ್ಥಃ ಪಟಲಃ.)



ಸೂ॥ ಆಚಾರ್ಯ ನುದ್ದೇಶಾನುಸಾರದಿಂ ಮಂತ್ರಯೋಗ ಲಯಯೋಗಂಗಳ ಸ್ವರೂಪಮಂ ಪೇಳ್ದು, ಕ್ರಮಪ್ರಾಪ್ತವಾದ ರಾಜಯೋಗಲಕ್ಷಣಮಂ ಪೇಳಲುದ್ಯುಕ್ತನಾಗಿ, ಅದಕ್ಕನುಗುಣವಾದ ಗುರುಸ್ತೋತ್ರವಮಂ ಮಾಡುತ್ತಿರ್ದಪಂ:—

ಶ್ಲೋ॥ ಯತ್ಸರ್ವಗಂಶೃತಿಶಿರಃಪರಮೇಕಮಾದ್ಯಂ ಜ್ಯೋತಿರ್ಮಯಂ
ದೃಢವಿರಕ್ತಜನಾಭಿಗಮ್ಯಂ । ಗೋಸಂಸ್ಥಿತಂಗುರುಸದಾ
ಶಿವಯೋಗಿನಾಥಲಿಂಗಸ್ವರೂಪಮಹಮನ್ವಹಮಾಶ್ರಯಾಮಿ॥

ಟೀ॥ ಯತ್-ಅಜ್ಞಾನಾಂಧಕಾರನಾಶದಿಂ ದಿವ್ಯಪ್ರಕಾಶೋದ್ಬೋಧಕತ್ವದಿಂ ತಾನೇ ಗುರುವೆನಿಸಿದ ಆವುದಾನೊಂದು ಶಿವಲಿಂಗವು, ಸರ್ವಗಂ-ಸರ್ವಗತವಾಗಿರ್ಪಂಥ, ("ನಾದಾಖ್ಯಂಯತ್ಪರಂಬೀಜಂ ಸರ್ವಭೂತೇಷ್ವವಸ್ಥಿತಂ" ಎಂದುದಾಗಿ,) ಶೃತಿಶಿರಃ ಪರಂ- ವೇದವೇದಾಂತಂಗಳ ಶಿರೋರತ್ನವಾಗಿರ್ಪಂಥ, ("ಆಮ್ನಾಯಶಿರಇತ್ಯುಕ್ತಃ ಪ್ರಣವೋಮುನಿಸತ್ತಮಾಃ । ತೇನಗಮ್ಯೋಮಹೇಶಾನಸ್ತದಂತಇತಿಕೀರ್ತಿತಃ" ಎಂದುದಾಗಿ, "ಯೋವೇದಾದೌಸ್ವರಃಪ್ರೋಕ್ತೋವೇದಾಂತೇಚ ಪ್ರತಿಷ್ಠಿತಃ" ಎಂದುದಾಗಿ) ಏಕಂ-ವರ್ಣಪದಮಂತ್ರಾದಿ ಷಡಧ್ವಕ್ಕೆ ಮುಖ್ಯಮಪ್ಪುದರಿಂದದ್ವಿತೀಯವಾಗಿರ್ಪಂಥ, ಆದ್ಯಂ-ಮೂಲಕಾರಣವಾಗಿರ್ಪಂಥ, ಜ್ಯೋತಿರ್ಮಯಂ- ನಿರುಪಾಧಿಕವಾದ ಪರಮಪ್ರಕಾಶರೂಪನಾಗಿರ್ಪಂಥ, (ಜಿಹ್ವೆಯಲ್ಲಿ ವೈಖರೀರೂಪದಿಂ ವಿದ್ಯಾತತ್ವನಾಗಿ ನಾಸಾಪುಟದಲ್ಲಿ ಮಧ್ಯಮಾರೂಪದಿಂದೀಶ್ವರತತ್ವವಾಗಿ ತಾರಕಾಮಧ್ಯದಲ್ಲಿ ಪಶ್ಯಂತೀರೂಪದಿಂ ಸದಾಶಿವತತ್ವವಾಗಿ, ಭ್ರೂಮಧ್ಯದಲ್ಲಿ ಸೂಕ್ಷ್ಮರೂಪದಿಂ ಶಕ್ತಿತತ್ವವೆನಿಸಿ ದಿವ್ಯಪ್ರಕಾಶರೂಪವೆಂಬುದಭಿಪ್ರಾಯಂ) ದೃಢವಿರಕ್ತಜನಾಭಿಗಮ್ಯಂ- ಶಿವಯೋಗನಿಷ್ಠರಾದ ಮುಮುಕ್ಷುಜನಂಗಳಿಂದೆ ಅಭಿಮುಖವಾಗಿ ಕಾಣಲು ಯೋಗ್ಯವಾದಂಥ, ಗೋಸಂಸ್ಥಿತಂ-ಅಪೋಜ್ಯೋತಿಯೆನಿಸುತ್ತೆ ಜಲಪಿಂಡಮಧ್ಯವರ್ತಿಯಾದಂಥ,(ಮೇಣು, "ಚಕ್ಷುರಗ್ರೇಸ್ಥಿತಂ" ಎಂದುದಾಗಿ, ತಾರಕಾಮಧ್ಯವರ್ತಿಯಾದಂಥ, ಮೇಣು ಅಕ್ಷರತ್ರಯಾತ್ಮಕಪ್ರಣವರೂಪವಾದಂಥ, ಮೇಣು ಲಕ್ಷ್ಯತ್ರಯೋಪಲಕ್ಷಿತವಾದಂಥ) ಗುರುಸದಾಶಿವಯೋಗಿನಾಥಲಿಂಗಸ್ವರೂಪಂ- ಆಚಾರ್ಯನಾದ ಸದಾಶಿವಯೋಗೀಶ್ವರನೆಂಬ ದಿವ್ಯಲಿಂಗವನ್ನು, ಅಹಂ-ನಾನು, ಅನ್ವಹಂ-ಅನವರತವೂ, ಆಶ್ರಯಾಮಿ-ಧ್ಯಾನಾನುಸಂಧಾನದಿಂದಾಶ್ರಯಿಸಿಹೆನು, ॥೧॥

ಸೂ॥ ಪೂರ್ವೋದಿತವಾದ ಯೋಗತ್ರಯದಿಂ ರಾಜಯೋಗವೇ ವಿಶಿಷ್ಟವಪ್ಪುದಾಗಿ ಅದಕ್ಕನುಗುಣವಾದ ವಿಶೇಷಾಷ್ಟಾಂಗನುಂ ಪೇಳ್ವೆನೆನುತಿರ್ದಪಂ:—

ಶ್ಲೋ॥ ರಾಜಯೋಗಃಪರಿಗ್ರಾಹ್ಯೋವಿದ್ವದ್ಭಿಸ್ತೇನಹೇತುನಾ ।
ಅಸ್ಯಸಾಧನಮಷ್ಟಾಂಗಹಠಯೋಗಇಹೋಚ್ಯತೇ ॥೨॥

ಟೀ॥ ವಿದ್ವದ್ಭಿಃ-ವಿವೇಕಿಗಳಿಂದ, ರಾಜಯೋಗಃ-ರಾಜಯೋಗವು, ಪರಿಗ್ರಾಹ್ಯಃ-ಅಂಗೀಕರಿಸಿ ಅನುಷ್ಠಿಸಲು ಯೋಗ್ಯವು, ತೇನಹೇತುನಾ- ಆ ವಿಶಿಷ್ಟವಾದ ನಿಮಿತ್ತದಿಂದ, ಅಸ್ಯ- ಈ ರಾಜಯೋಗಕ್ಕೆ, ಸಾಧನಂ-ಭಿನ್ನಪ್ರಕಾರವಾಗಿ ಸಾಧಕವಾದಂಥ, ಅಷ್ಟಾಂಗಹಠಯೋಗಃ-ಅಷ್ಟಾಂಗವಾದ ಹಠಯೋಗವು, ಇಹ-ಈ ಪಟಲಾದಿಯುಲ್ಲಿ, ಉಚ್ಯತೇ-ಹೇಳಲ್ಪಡುತ್ತಿದ್ದೀತು. ॥೨॥

ಸೂ॥ ಈ ಅರ್ಥವನೇ ಮುಂದಣ ಗ್ರಂಥಾಂತರದಿಂದ ಸಮರ್ಥಿಸುತ್ತಿಹನು:—

ಶ್ಲೋ॥ ಪೂರ್ವೋಕ್ತಾಷ್ಟವಿಧಾಂಗಾನಿಹಠೇಸ್ಥಿತಾನಿಚ ।
ಏಕೈಕಶ್ಲೋಕರೂಪೇಣಕೃತಾನಿಚಮಯಾಶೃಣು ॥೩॥

ಟೀ॥ ಹಠೇ-ಹಠಯೋಗದಲ್ಲಿ, ಪೂರ್ವೋಕ್ತಾಷ್ಟವಿಧಾಂಗಾನಿಚ-ಪೂರ್ವೋಕ್ತ-ಪೂರ್ವೋದಿತವಾದ, ಅಷ್ಟವಿಧ- ಎಂಟುಪ್ರಕಾರವಾದ, ಅಂಗಾನಿಚ-ಯಮಾದ್ಯಂಗಗಳು, ಸ್ಥಿತಾನಿ-ಇರಿಸಲ್ಪಟ್ಟುವು. ಮಯಾ-ಎನ್ನಿಂದೆ, ಏಕೈಕಶ್ಲೋಕರೂಪೇಣ-ಒಂದೊಂದು ಶ್ಲೋಕರೂಪದಿಂದೆ, ಕೃತಾನಿ-ಮಾಡಲ್ಪಟ್ಟಂಥ, ತಾನಿಚ-ಆ ಅಷ್ಟಾಂಗಗಳನ್ನು, ಶೃಣು-ಕೇಳು. ॥೩॥

ಸೂ॥ ಅನಂತರವಲ್ಲಿ ಮೊದಲೊಳು ಯಮಾಂಗವಂ ಪೇಳ್ದಪಂ:—

ಶ್ಲೋ॥ ಆಹಾರನಿದ್ರೇಂದ್ರಿಯದೇಹಸರ್ವವ್ಯಾಪಾರಶೀತಾತಪಸಂ
ಜ್ಞಕಾನಾಂ । ಜಯಶ್ಚಶಾಂತಿಶ್ಚಭವೇದ್ಯಮಾಂಗಶ್ಶನೈಶ್ಶ
ನೈಸ್ಸಾಧಯಿತುಂಸಯೋಗ್ಯಃ ॥೪॥

ಟೀ॥ ಆಹಾರ......ಸಂಜ್ಞಕಾನಾಂ-ಆಹಾರ-ಭಕ್ಷ್ಯಭೋಜ್ಯಾದಿ ಷಡ್ವಿಧಾಹಾರವ, ನಿದ್ರಾ-ತಮೋಗುಣಾತ್ಮಕವಾದ ನಿದ್ರೆಯು, ಇಂದ್ರಿಯ-ಶ್ರೋತ್ರಾದಿಜ್ಞಾನೇಂದ್ರಿಯಂಗಳ, ದೇಹ-ದೇಹಶಬ್ದೋಪಲಕ್ಷಿತವಾದ ವಾಗಾದಿಕರ್ಮೇಂದ್ರಿಯಂಗಳ, ಸರ್ವ-ಸಮಸ್ತವಾದ, ವ್ಯಾಪಾರ-ಅವ ಮಾಡುವ ವ್ಯಾಪಾರಂಗಳ, ಶೀತಾತಪಸಂಜ್ಞಕಾನಾಂ-ಶೀತೋಷ್ಣವೆಂಬಂಥ ಅವರ, ಜಯಶ್ಚ-ವಶಗತನಾಗದಿಹುದರಿಂದವರಜಯವು, ಶಾಂತಿಶ್ಚ-ರಾಗದ್ವೇಷಂಗಳೆಂಬ ಕಾಲುಷ್ಯವಿಲ್ಲದಿಹತನವೂ, ಯಮಾಂಗಃ-ಯಮವೆಂಬ ಯೋಗಾಂಗವು, ಭವೇತ್-ಅಹುದು. ಸಃ-ಅದು, ಶನೈಶ್ಶನೈಃ-ಮೆಲ್ಲಮೆಲ್ಲನೆ, ಸಾಧಯಿತುಂ-ಸಾಧಿಸಲು, ಯೋಗ್ಯಃ-ಯೋಗ್ಯವು. ॥೪॥

ಸೂ॥ ಅನಂತರದಲ್ಲಿ ನಿಯಮಯೋಗನುಂ ಪೇಳ್ದಪಂ:—

ಶ್ಲೋ॥ ಭಕ್ತಿರ್ಗುರೌಪರಮತತ್ವಪದೇಽನುರಕ್ತಿಃನಿಸ್ಸಂಗತಾಸ್ವ
ಯಮುಪಾಗತಲಾಭತುಷ್ಟಿಃ । ಏಕಾಂತವಾಸಪರತಾಚ
ಮನೋನಿವೃತ್ತಿಃವೈರಾಗ್ಯಭಾವಇತಿಯೇನಿಯಮಾಸ್ತಏವ ॥

ಟೀ॥ ಗುರೌ-ಶ್ರೀಗುರುಮೂರ್ತಿಯಲ್ಲಿ, ಭಕ್ತಿಃ-ಭಕ್ತಿಯು, ಪರಮತತ್ವಪದೇ-ಷ ಡಧ್ವಾತೀತವಾಗಿ ಸ್ವಪರಪ್ರಕಾಶರೂಪದಿಂ ನಿಜಮುಕ್ತಿಸ್ಥಾನವಾದ ಪರಮಪದದಲ್ಲಿ, ಅನುರಕ್ತಿಃ-ಪ್ರೀತಿಯು, ನಿಸ್ಸಂಗತಾ-ಜನಸಂಗಕ್ಕೆ ದೂರವಾಗಿಹತನವು, (ಜನಸಂಗವೇ ಯೋಗೀಶ್ವರಂಗೆ ಸಂಸಾರವೆಂಬುವರ್ಥಂ) ಸ್ವಯಂಉಪಾಗತಲಾಭತುಷ್ಟಿಃ-ಅಪ್ರಯತ್ನದಿಂದೆ ಅನಿಚ್ಛಾಪ್ರಾರಬ್ಧದಿಂ ಬಂದ ಯಥಾಲಾಭದಲ್ಲಿ ಸಂತೋಷವು, ಏಕಾಂತವಾಸಪರತಾಚ-ಬಾಧಾರಹಿತವಾಗಿ ಮನೋರಮ್ಯವಾದ ಏಕಾಂತಾಶ್ರಯದಲ್ಲಿಯು ತಾತ್ಪರ್ಯವು, ಮನೋನಿವೃತ್ತಿಃ-ಮನವಂ ಬಹಿರ್ಮುಖವಾಗಲೀಯದಂತರ್ಮುಖವಾಗಿ ಮಾಳ್ಪುದು,ವೈರಾಗ್ಯಭಾವಃ-ಮೋಹಕವಾದ ವಿಚಿತ್ರಭೋಗ್ಯವಸ್ತುವಿನಲ್ಲಿಯು ವಿರತಿಯು, ಇತಿ-ಹೀಗೆಂಬ, ಯೇ-ಆವುವು ಕೆಲವು ಗುಣಗಳುಂಟೋ, ತಏವ-ಅವೇ, ನಿಯಮಾಃ-ರಾಜಯೋಗಾನುಸಾರಿಗಳಾದ ನಿಯಮಂಗಳು. ॥೫॥

ಸೂ॥ ಅನಂತರವಲ್ಲಿ ಆಸನಯೋಗವಮಂ ಪೇಳ್ದಪಂ:—

ಶ್ಲೋ॥ ಸ್ವಸ್ವರೂಪೇಸದಾಕಾಲಮಾಸನ್ನತ್ವಂಸುಖಾಸನಂ ।
ಸರ್ವವಸ್ತುನ್ಯುದಾಸೀನಭಾವಮಾಸನಮುಚ್ಯತೇ ॥೬॥

ಟೀ॥ ಸ್ವಸ್ವರೂಪೇ-ಸ್ವ-ತನ್ನ, ಸ್ವರೂಪೇ-ಸಕಲ ತತ್ವವಿಲಕ್ಷಣಮಾದ ಸ್ವಪರಪ್ರಕಾಶರೂಪದಲ್ಲಿ, ಸದಾಕಾಲಂ-ಅನವರತವೂ, ಆಸನ್ನತ್ವಂ-ಚಲಿಸದೆ ಆತ್ಮಾರಾಮನಾಗಿಹತನವು, ಸುಖಾಸನಂ-ಸುಖ-ಆ ಆತ್ಮಾರಾಮಸುಖಕ್ಕೆ, ಆಸನಂ-ಆಶ್ರಯವಾಗಿಹತನವು, ಸರ್ವವಸ್ತುನಿ- ಸಕಲಭೋಗ್ಯವಸ್ತುವಿನಲ್ಲಿ, ಉದಾಸೀನಭಾವಃ-ಮೀಧಿತ್ವಣವಂ ಕಂಡಂತೆ ಹೇಯೋಪಾಯಬುದ್ಧಿಯಿಲ್ಲದೆ ಉದಾಸೀನವಾಗಿಹತನವು, ಆಸನಂ-ಆಸನಯೋಗವೆಂದು, ಉಚ್ಯತೇ-ಪೇಳಲ್ಪಡುತ್ತಿರ್ದ್ದೀತು. ॥೬॥

ಸೂ॥ ಅನಂತರವಲ್ಲಿ ಪ್ರಾಣಾಯಾಮಸ್ವರೂಪವಮಂ ಪೇಳ್ದಪಂ:—

ಶ್ಲೋ॥ ವಿದುರ್ಬ್ಬುಧಾರೇಚಕಪೂರಕಕುಂಭಸಂಘಟ್ಟನಿಶ್ವಾಸತಯಾಽ
ಪ್ರಯತ್ನಾತ್ । ಪ್ರಾಣಸ್ಥಿರತ್ವಂಜಗತಾಂಚಮಿಥ್ಯಾಚಿಂ
ತೇತಿಸಃಪ್ರಾಣನಿರೋಧಭಾವಃ ॥೭॥

ಟೀ॥ ರೇಚಕಪೂರಕಕುಂಭಸಂಘಟ್ಟನಿಶ್ವಾಸತಯಾ- ರೇಚಕಪೂರಕಕುಂಭಕಂಗಳಿಂದಕೂಡಿದ ಪ್ರಾಣವಾಯುವಿನಸಂಚಾರವಿಲ್ಲದಿಹುದರಿಂದೆ, ಅಪ್ರಯತ್ನಾತ್-ಪ್ರಯತ್ನವಿಲ್ಲದಿಹುದರದೆಸೆಯಿಂದೆ, ಪ್ರಾಣಸ್ಥಿರತ್ವಂ- ಪ್ರಾಣವಾಯುವಿನ ಸ್ಥಿರತ್ವವು, ಜಗ

ಶಾಂ-ತನುಕರಣಭುವನಭೋಗ್ಯಂಗಳಾದ ತತ್ವತಾತ್ವಿಕಂಗಳೇ ನಾನು ನನ್ನದೆಂದು ಆ ರೋಪಿತವಾದ ಬುದ್ಧಿಗಳ, ಮಿಥ್ಯಾಚಿಂತಾಜ-ಭ್ರಾಂತಿಯೆಂದು ತಿಳಿವುದು, ಇತಿ-ಹೀಗೆಂ ಬುದಾವುದಾನೊಂದುಂಟೊ, ಸಃ-ಅದು, ಪ್ರಾಣನಿರೋಧಭಾವಃ-ಪ್ರಾಣಾಯಾಮವೆಂಬ ಯೋಗವೆಂದು, ಬುಧಾಃ-ವಿವೇಕಿಗಳು, ವಿದುಃ-ತಿಳಿವುತ್ತಿಹರು. (ವೈಕೃತಪ್ರಾಣಾಯಾ ಮದಿಂದಾದ ಕೇವಲಕುಂಭಕದಿಂ ಮೇಲೆ ಅಹಂಕಾರಮಮಕಾರಂಗಳ ತೊಲಗುವಿ ಕೆಯೇ ಪ್ರಾಣಾಯಾಮವೆಂಬುದರ್ಥಂ) ॥೭॥

ಸೂ॥ ಅನಂತರದಲ್ಲಿ ಪ್ರತ್ಯಾಹಾರಮಂ ಪೇಳ್ದಪಂ:—

ಶ್ಲೋ॥ ಚಿತ್ತಸ್ಯಾಂತರ್ಮುಖೇನಪ್ರತಿಹತಬಹುಚೈತನ್ಯಕಲ್ಲೋ
ಲಜಾಲಸ್ಯೋತ್ಪನ್ನಸ್ಯಾಸ್ಯನಾನಾವಿಪುಲಮತಿವಿಕಾರಸ್ಯ
ಸಂವಿತ್ತಿರೇವ । ತತ್ತನ್ನಾನಾವಿಕಾರಗ್ರಸನಮಿತಿತಥಾಕಥ್ಯ
ತೇಽಯೋಗವಿದ್ಭಿಃಪ್ರತ್ಯಾಹಾರಸ್ಸಏವಾವಿಚಲಿತಸುಮನಾ
ಸ್ತಂಸದಾಽಹಂಭಜಾಮಿ ॥೮॥

ಟೀ॥ ಚಿತ್ತಸ್ಯ-ಮನದ, ಅಂತರ್ಮುಖೇನ-ಅಂತರ್ಮುಖವಮಾಡುವುದರಿಂದ, (ಕಾ ಕಾಕ್ಷಿಯೋಪಾದಿಯಲ್ಲಿ ಬಾಹ್ಯೇಂದ್ರಿಯದ್ವಾರಂಗಳಿಂ ಗ್ರಹಿಸಿದ ವಿಷಯಂಗಳಂ ತಂದು ಬುದ್ಧಿಯು ನನಂತವಿಷಯಾಕಾರಮಂ ಮಾಡುವ ಮನಮಂ ಬಹಿರ್ಮುಖವಮಾಡದೆಮ ಹುದರಿಂದೆಯೆಂಬುದರ್ಥಂ) ಪ್ರತಿಹತಬಹುಚೈತನ್ಯಕಲ್ಲೋಲಜಾಲಸ್ಯ-ಪ್ರತಿಹತ-ನಿಲಿ ಸಲ್ಪಟ್ಟ, ಬಹು-ಅನಂತಪ್ರಕಾರವಾದ, ಚೈತನ್ಯಕಲ್ಲೋಲಜಾಲಸ್ಯ-ಚೈತನ್ಯಕಲ್ಲೋ ಲ-ಕಲೋಚ್ಛಲಿತಮಾದ ಚೈತನ್ಯಾಂಬುಧಿಯ ಸವಿಕಲ್ಪಕಜ್ಞಾನಂಗಳ ಬತೆಗಳ, ಜಾಲಸ್ಯ-ಸಮೂಹವುಳ್ಳಂಥ, (ಬುದ್ಧಿಶುದ್ಧವಪ್ಪುದರಿಂದಾತ್ಮಶಕ್ತಿಯುಂ ನಿಸ್ತರಂಗಾ ಬುಧಿಯಂತೆ ವಿಶ್ರಮಿಸುವುದೆಂಬುದರ್ಥಂ) ಉತ್ಪನ್ನಸ್ಯ-ಹುಟ್ಟಿದಂಥ, ಅಸ್ಯ-ಈ, ನಾ ನಾವಿಪುಲಮತಿವಿಕಾರಸ್ಯ-ಅಪರಿಮಿತರೂಪವಾದ ಅತಿವಿಶಾಲರೂಪವಾದ ಮಹತ್ತನ್ನ ವೆನಿಸುವ ಬುದ್ಧಿಯ ಸಿದ್ಧಿತುಷ್ಟಿಭಾವಪ್ರತ್ಯಯಾದಿ ವಿಕಾರದ, ಸಂವಿತ್ತಿರೇವ-ವಿವೇಕದಿಂ ವಿಲಕ್ಷಿಸುವುದೇ, ತತ್ತನ್ನಾನಾವಿಕಾರಗ್ರಸನಮಿತಿ-ಆಯಾನಾನಾವಿಕಾರಂಗಳ ಗ್ರಸನ ದು, ತಥಾ-ಹಾಂಗೆ, ಯೋಗವಿದ್ಭಿಃ-ಶಿವಯೋಗಮಂ ಬಲ್ಲವರಿಂದೆ, ಕಥ್ಯತೇ-ಹೇಳಲ್ಪ ಡುತ್ತಿರ್ದ್ದಿತೋ, ಸಏವ-ಅದೇ, ಪ್ರತ್ಯಾಹಾರಃ-ಪ್ರತ್ಯಾಹಾರಯೋಗವೆನಿಸುವುದು. ತಂ- ಅದನು, ಅವಿಚಲಿತಸುಮನಾಃ-ಚಲಿಸದಿರ್ದ್ದ ಲೇಸಾದ ಮನಸ್ಸುಳ್ಳಾತನಾಗಿ, ಅಹಂ-ನಾ ನು, ಸದಾ-ಎಲ್ಲಾಗವೂ, ಭಜಾಮಿ-ಸೇವಿಸುತ್ತಿಹೆನು. ॥೮॥

ಸೂ॥ ಅನಂತರದಲ್ಲಿ ಧ್ಯಾನಸ್ವರೂಪಮಂ ಪೇಳ್ದಪಂ:—

ಶ್ಲೋ॥ ಸೋಽಹಂಭಾವಾತ್ಪ್ರಕಟಪರಮಾದ್ವೈತಮುಖ್ಯಸ್ವಭಾ
ವಂಯಲ್ಲೋಕೇವಿಸ್ಫುರತಿಖಲುತತ್ತತ್ತ್ವರೂಪಂಸ್ವಭಾ

ವಂ ॥ ಸಮ್ಯಗ್ದೃಷ್ಟಿರ್ಗುರುಕರುಣಯಾಸರ್ವಭೂತಾನು
ಯಾತೇಸ್ವಾತ್ಮಾರಾಮಸ್ಸಭವತಿಸುಖೇಧ್ಯಾನಮಾರ್ಗೈಕ
ನಿಷ್ಠಃ ॥೯॥

ಟೀ॥ ಹೇಸಖೇ-ಎಲೆಸ್ನೇಹಿತನಾದ ಶಿಷ್ಯನೆ, ಸೋಹಂಭಾವಾತ್-ಪ್ರಾಕೃತಪ್ರಾಣಾಯಾಮದ ಹಂಸಮಂತ್ರವನೇ ವೈಕೃತಪ್ರಾಣಾಯಾಮದಿಂ ಸೋಹವೆಂದು ಭಾವಿಸುವುದರವೆಸಯಿಂದೆ, ("ಸೋಹಂಕೃತ್ವಾತ್ತಮಂತ್ರಂ" ಎಂಬುದಾಗಿ) ಯತ್-ಆವುದಾನೊಂದು, ಪ್ರಕಟಪರಮಾದ್ವೈತಮುಖ್ಯಸ್ವಭಾವಂ-ಪ್ರಕಟ-ವ್ಯಕ್ತವಾದ, ಪರಮ-ಶ್ರೇಷ್ಠವಾದ, ಅದ್ವೈತ-ಪ್ರಣವಸ್ವರೂಪದಿಂದೇಕತ್ವವೇ, ಮುಖ್ಯ-ಮುಖ್ಯವಾದ, ಸ್ವಭಾವಂ-ಸ್ವರೂಪವು, ಲೋಕೇ-ತಿಳಿವಿನಲ್ಲಿ, ವಿಸ್ಫುರತಿ ಪ್ರಕಾಶಿಸುತ್ತಿದ್ದೀತೋ, ತತ್-ಆ, ತತ್ವರೂಪಂ- ನಾದಬಿಂದುಕಲಾತ್ಮಕವಾದ ತತ್ವರೂಪವೇ, ಸ್ವಭಾವಂಖಲು-ನಿಜವಾಗಿರ್ಪಂತಹುದಲಾ. ("ವ್ಯಾಲುಂಪೇದ್ವ್ಯಂಜನೇದ್ವೇ" ಎಂದುದಾಗಿ, ಜ್ಞಾತೃಜ್ಞೇಯರೂಪಂಗಳಾದ ಸಕಾರ ಹಕಾರವೆಂಬ ವ್ಯಂಜನಾಕ್ಷರಂಗಳ ಲೋಪದಿಂದುಳಿದ ಪ್ರಣವತತ್ವರೂಪವೆಂಬುದಭಿಪ್ರಾಯಂ) ಸರ್ವಭೂತಾನುಯಾತೇ- ಸರ್ವಚೈತನ್ಯಾಂತರ್ಯಾಮಿಯಾದ ಆ ಪ್ರಣವಬೀಜದಲ್ಲಿ, ಗುರುಕರುಣಯಾ-ಗುರುಕಾರುಣ್ಯದಿಂದೆ, ಸಮ್ಯಗ್ದೃಷ್ಟಿಃ-ಸಮ್ಯಕ್-ಲೇಸಾದ, ದೃಷ್ಟಿಃ-ನೋಟವು, ಆವಾತಂಗುಂಟೋ, ಸ್ವಾತ್ಮಾರಾಮಃ-ಆತ್ಮಾರಾಮನಾಗಿರ್ಪಂಥ,ಸಃ-ಆತನೇ, ಧ್ಯಾನಮಾರ್ಗೈಕನಿಷ್ಠಃ-ಧ್ಯಾನಮಾರ್ಗವೊಂದರಲ್ಲಿಯೇ ನಿಷ್ಠನಾಗಿರ್ಪಂಥಾತನು, ಭವತಿ-ಆಗುತ್ತಿಹನು. (ತಾತ್ಪರ್ಯ-ಯೋಗೀಶ್ವರನು ಹಂಸಮಂತ್ರವನೇ ಸೋಹಮೆನಿಸಿ, ಸೋಹಂ ಎಂಬ ಮಂತ್ರದ ಆ ವ್ಯಂಜನವರ್ಣಂಗಳ ಲೋಪದಿಂ ಓಂಕಾರವಂ ಮಾಡಿ, ಆ ಓಂಕಾರದಲ್ಲಿ ಭಾಗವಾದ ಅಕಾರವನೇ ಉಕಾರದಲ್ಲಡಗಿಸಿ, ಆ ಉಕಾರವನುಂ ಬಿಂದುವಿನಲ್ಲಡಗಿಸಿ, ಆ ಬಿಂದುವೇ ಶೂನ್ಯವಾಗಲು, ಆ ಪರಮಶೂನ್ಯದಲ್ಲಿ ಜೀವಪರವೈಕ್ಯಾನುಭವರೂಪಮಾದ ಪರಮಸಾಯುಜ್ಯವಂ ಪಡೆವುತ್ತಿಹನೆಂಬುದಭಿಪ್ರಾಯಂ. ಇದಕ್ಕೆ ಸನ್ಮತಿ:—ವಿಲೋಪ್ಯಾಕಾರಮುದ್ವಂದ್ವಮುಕಾರಾಪ್ಯೇವಿಲೋಪಯೇತ್ । ಉಕಾರಂಚಮಕಾರಾಖ್ಯೇ ಮಕಾರಾನಾದೇನುಕಾರಕಂ" ಎಂದುದಾಗಿ.) ॥೯॥

ಸೂ॥ ಅನಂತರದಲ್ಲಿ ಧಾರಣಯೋಗಲಕ್ಷಣವಮಂ ಪೇಳ್ದಪಂ:—

ಶ್ಲೋ॥ ಸ್ಫುರತಿಪರಮತತ್ವಂಸ್ವಸ್ಯಬಾಹ್ಯಾಂತರೇಯತ್ಸತತಮತು
ಳಮತ್ಯಾಭಾವನಾಸಿಕ್ತಲೀನ । ಪುನರಪಿಚವದಾಮುಸ್ತೇ
ಪ್ರಕಾರೋಯಮಾಸ್ತೇಚಲನರಹಿತಚಿತ್ತಂಕೇವಲಂಧಾರ
ಣಾಸಾ ॥೧೦॥

ಟೀ॥ ಯತ್-ಅವುದಾನೊಂದು, ಪರಮತತ್ವಂ-ಪ್ರಾಣಾತ್ಮಕವಾದ ಪರತತ್ವವು, ಸ್ವಸ್ಯ-ತನ್ನ, ಬಾಹ್ಯಾಂತರೇ-ಹೊರಗೊಳಗೆ, ಸತತಂ-ಅನವರತವೂ, ಸ್ಫುರತಿ-ಬೆಳಗುತ್ತಿದ್ದೀತೋ, ತತ್-ಅದು, ಅತುಳಮತ್ಯಾ-ಸಮಾನವಿಲ್ಲದೆಯಿರ್ಪ ಬುದ್ಧಿಯಿಂದ (ಧರ್ಮಾಧರ್ಮಾದಿವಾಸನಾರಹಿತವಾದ ಸುಬುದ್ಧಿಯೆಂಬುದರ್ಥಂ) ನಿಶ್ಚಲೇನ-ಚಲಿಸದೆಯಿಹುದರಿಂದ, ಧಾರಣಾ-ಧರಿಸುವುದೇ ಧಾರಣಾಯೋಗವೆಂಬ, ಅಯಂಪ್ರಕಾರಃ-ಈ ಸಾಲಾಬವಾದ ಧಾರಣಪ್ರಕಾರವು, ಆಸ್ತೇ-ಇರುತ್ತಿದ್ದೀತು. ಪುನರಪಿಚ-ಮತ್ತೆಯೂ, ತೇ-ನಿನಗೆ, ವದಾಮಃ-ಹೇಳುವೆವು. ಕೇವಲಂ-ನಾದಬಿಂದುಕಲಾದ್ಯವಲಂಬನವಿಲ್ಲದಿರ್ಪಂಥ, ಚಲನರಹಿತಚಿತ್ತಂ-ಚಲಿಸದಿರ್ಪಚಿತ್ತವುಂಟೋ, ಸಾ-ಅದು, ಧಾರಣಾ-ಧಾರಣಾಯೋಗವೆನಿಸುವುದು. ("ಚಿತ್ತೇಚಲತಿಸಂಸಾರೋನಿಶ್ಚಲೇಮೋಕ್ಷಏವಚ" ಎಂದಿದ್ದಾಗಿ.) ॥೧೧॥

ಸೂ॥ ಅನಂತರದಲ್ಲಿ ಸಮಾಧಿಯೋಗವಂ ಪೇಳ್ದಪಂ:—

ಶ್ಲೋ॥ ನಿಜಾನುಭವಶೀಲತಾನಿಖಿಲತತ್ವಸಾಮ್ಯಸ್ಮೃತಿಸ್ಸ್ಮೃತೇರ
ವಿಚಲಾಸ್ಥಿತಿಸ್ಸ್ಥಿರತಯಾನಿಧಿಧ್ಯಾಸತಾ। ಸದೇಕಪರಭಾವ
ನಾಸಹಜತಾಹ್ಯನಾಯಾಸತಾ ಸಮಾಧಿರಿತಿ ಕೀರ್ತಿತಸ್ಸತತ
ನಿರ್ವಿಕಲ್ಪಾತ್ಮಕಃ ॥ ॥೧೨॥

ಟೀ। ನಿಜಾನುಭವಶೀಲತಾ- ನಿಜ-ನಿಜವಸ್ತುವಿನ, ಅನುಭವಶೀಲತಾ- ಸಾಕ್ಷಾತ್ಕಾರವೇ ಸ್ವಭಾವವಾಗುಳ್ಳತನವು, ನಿಖಿಲತತ್ವಸಾಮ್ಯಸ್ಮೃತಿಃ- ಆ ಅನುಭವದಿಂದ ಮೇಲೆ ಸಕಲ ತತ್ವಂಗಳಿಗೆ ಸಮಾನತೆಯ ಸ್ಮರಣವು (ಪಿಂಡಾಂಡರೂಪವಾದ ಸಕಲ ತತ್ವಂಗಳಿಗೆ ತನ್ನನು ಸಾಕ್ಷಿಕನನ್ನಾಗಿ ತಿಳಿವತನವೆಂಬುದಭಿಪ್ರಾಯಂ) ಸ್ಮೃತೇಃ-ಆ ತಿಳವಿನ, ಅವಿಚಲಾ-ಚಲಿಸದಿರ್ಪಂಥ, ಸ್ಥಿತಿಃ-ನಿಲುಕಡೆಯು, (ಆ ತಿಳಿವನು ವಿಕಲ್ಪಕ್ಕೆತಾರದೆಯಿಹುದೆಂಬುದರ್ಥಂ) ಸ್ಥಿರತಯಾ- ಆ ಅಖಂಡಿತವಸ್ತುವಿನಲ್ಲಿಯ ಸಾಮರಸ್ಯದ ಸ್ಥಿರತ್ವದಿಂದ, ನಿಧಿಧ್ಯಾಸತಾ-ಇದಿರಿಟ್ಟುಧ್ಯಾನವಂ ಮಾಡಲಿಚ್ಛೈಸದಿಹತನವು, ಸದೇಕಪರಿಭಾವನಾ-ಸನ್ಮಾತ್ರನೇ ಉಳುವೆಂಬ ಪೂರ್ಣಭಾವವು, ಸಹಜತಾ-ನಿರುಪಾಧಿಕತ್ವವು, ಅನಾಯಾಸತಾ-ತ್ರಿಪುಟರೂಪವಾದ ಆಯಾಸವಿಲ್ಲದಿಹತನವು, ಸತತನಿರ್ವಿಕಲ್ಪಾತ್ಮಕಃ-ಅನವರತವೂ ನಿರ್ವಿಕಲ್ಪರೂಪವಾಗಿರ್ಪಂಥ, ಸಮಾಧಿರಿತಿ-ಸಮಾಧಿಯೋಗವೆಂದು, ಕೀರ್ತಿತೋಹಿ-ಹೇಳಲ್ಪಟ್ಟತಲಾ. ॥೧॥

ಸೂ॥ ಈಪ್ರಕಾರದಿಂ ಜ್ಞಾನಾಷ್ಟಾಂಗಯೋಗವುಂ ಪೇಳ್ದು, ಮುಂದೆ ಪೇಳ್ವ ರಾಜಯೋಗವು ಗುರುಕೃಪಾಸಾಧ್ಯವಲ್ಲದೆ ಕ್ರಿಯಾಸಾಧ್ಯವಲ್ಲವೆಂದು ಪೇಳ್ದಪಂ:—

ಶ್ಲೋ॥ ಅಥಶೃಣುಮಹಾಶ್ಚರ್ಯಂರಾಜಯೋಗಾಭಿಧಾನಕಂ ।
ಇಮಂಸದ್ಗುರುಣಾಯಾತಿಸಜ್ಜನೋನಾನ್ಯಕರ್ಮಭಿಃ ॥೧೩॥

ಟೀ॥ ಅಥ-ಅನಂತರದಲ್ಲಿ, ಮಹಾಶ್ಚರ್ಯಂ-ಮುಂದೆಪೇಳ್ವಮಹದಾಶ್ಚರ್ಯರೂಪವಾ ಗಿರ್ಪಂಥ, ರಾಜಯೋಗಾಭಿಧಾನಕಂ-ರಾಜಯೋಗವೆಂಬ ಹೆಸರುಳ್ಳಂತಹುದನ್ನು, ಶೃಣು ಕೇಳು, ಇಮಂ-ಈರಾಜಯೋಗವನು, ಸಜ್ಜನಃ-ಶಕ್ತಿಪಾತಪವಿತ್ರಾಂತಃಕರಣನಾದ ಸಜ್ಜನನು, ಸದ್ಗುರುಣಾ-ಶ್ರೀಗುರುವಿನಿಂದೆ, ಯಾತಿ-ಎಯ್ದುತ್ತಿಹನು, ಅನ್ಯಕೃಥಿಃ-ಅನ್ಯವಾದ ಹಠಕರ್ಮಗಳಿಂದೆ, ನಯಾತಿ-ಎಯ್ದುತ್ತಿರನು. ॥೧೧॥

ಸೂ॥ ಗುರುಕಟಾಕ್ಷದಿಂದವೇ ರಾಜಯೋಗಸಿದ್ಧಿಯುಪ್ಪುದೆಂದು ಪೇಳ್ದಪಂ:—

ಶ್ಲೋ॥ ದುಷ್ಕರಾಭ್ಯಾಸಯೋಗೇನಮಹಾಯಾಸೇನಕಿಂಫಲಂ ।
ಕ್ಷಣೇನಲಭ್ಯತೇಬ್ರಹ್ಮಸದ್ಗುರೋರವಲೋಕನಾತ್ ॥೧೩॥

ಟೀ॥ ಮಹಾಯಾಸೇನ- ಬಹುಪ್ರಯಾಸವಾದಂಥ, ದುಷ್ಕರಾಭ್ಯಾಸಯೋಗೇನ-ಅಶಕ್ಯವಾದ ಅಭ್ಯಾಸಯೋಗವೆನಿಸಿದ ಹಠದಿಂದ, ಕಿಂಫಲಂ- ಏನುಪ್ರಯೋಜನವು? ಸದ್ಗುರೋಃ-ಆಚಾರ್ಯನ, ಅವಲೋಕನಾತ್-ಕಟಾಕ್ಷವೀಕ್ಷಣದತ್ತಣಿಂದೆ, ಬ್ರಹ್ಮ-ಬ್ರಹ್ಮವು, ಕ್ಷಣೇನ-ಕ್ಷಣಮಾತ್ರದಿಂದೆ, ಲಭ್ಯತೇ-ಸಾಕ್ಷಾತ್ಕಾರರೂಪವಾಗಿ ಪಡೆಯಲ್ಪಡುತ್ತಿರ್ದ್ದೀತು. (" ಗುರೋರಾಲೋಕಮಾತ್ರೇಣಸ್ಪರ್ಶಾತ್ಸಂಭಾಷಣಾದಪಿ । ಸದ್ಯಸ್ಸಂಜಾಯತೇಪ್ರಜ್ಞಾಪಾಶಾಘಕ್ಷಯಕಾರಿಣೀ ॥ ತಯಾಸಂಜಾಯತೇತತ್ವವಿಚಾರಃಪುರುಷಸ್ಯತು " ಎಂಬುದಾಗಿ) ॥೧೩॥

ಸೂ॥ ಆಬ್ರಹ್ಮವು ಒಳಹೊರಗೆ ಪೂರ್ಣವಾಗಿದ್ದರೂ ಗುರೂಪದೇಶದಿಂದಲ್ಲದೆ ಕಾಣಿಸದೆಂದು ಪೇಳ್ದಪಂ:—

ಶ್ಲೋ॥ ಬಾಹ್ಯೇಚಾಭ್ಯಂತರೇಬ್ರಹ್ಮಸರ್ವಜಂತುಷುಭಾಸತೇ ।
ತಥಾಪಿಗುರುಮಜ್ಞಾತ್ವಾತೇನಪಶ್ಯಂತಿತತ್ಪದಂ ॥೧೪॥

ಟೀ॥ ಸರ್ವಜಂತುಷು-ಸಕಲಪ್ರಾಣಿಗಳಲ್ಲಿ, ಬ್ರಹ್ಮ-ಬೃಹ್ಮಣರೂಪದಿಂ ಸಕಲಕ್ಕೆ ಲಯಗಮನಸ್ಥಾನವಾಗಿ ಮಹಾಲಿಂಗವೆನಿಸುವ ತಾರಕಬ್ರಹ್ಮವು, ಬಾಹ್ಯೇಚ-ಪಿಂಡಾಂಡದ ಹೊರಗೂ, ಅಭ್ಯಂತರೇಚ-ಒಳಗೂ, ಭಾಸತೇ-ಪ್ರಕಾಶಿಸುತ್ತಿರ್ದ್ದೀತು. ತಥಾಪಿ-ಹಾಂಗಾಯಿತ್ತಾದರೂ, ಗುರುಂ-ಆಚಾರ್ಯನನು, ಅಜ್ಞಾತ್ವಾ-ಅರಿಯದೆ, ತತ್ಪದಂ-ಆ ವಸ್ತುವನು, ತೇ-ಆಪ್ರಾಣಿಗಳು, ನಪಶ್ಯಂತಿ-ಕಾಣುತ್ತಿರರು. (ತಾತ್ಪರ್ಯ-ಮುಂದೆ ಗುರುಕಾರುಣ್ಯದಿಂದಾದ ರಾಜಯೋಗೋಪದೇಶದಿಂದಾ ಬ್ರಹ್ಮವು ಕಾಣಲು ತಕ್ಕುದೆಂಬುದಭಿಪ್ರಾಯಂ) ॥೧೪॥

ಸೂ॥ ಈ ಬ್ರಹ್ಮಸಾಕ್ಷಾತ್ಕಾರವು ಗುರೂಪದೇಶವಿಲ್ಲದೆ ಆವ ಸಮರ್ಥರಿಗೂ ಆಗದೆಂದು ಪೇಳ್ದಪಂ:—

ಶ್ಲೋ॥ ಖಂಡಜ್ಞಾನವತಾಂಚಷಟ್ಸ್ವಮಯಸಂಮೋಹಾಂಧಕಾರಾ

ತ್ಮನಾಂನಾನಾವೇದಪುರಾಣಶಾಸ್ತ್ರಕವಿತಾವಾಗ್ವೈಖರೀಶಾಲಿನಾಂ। ಮೂಢಾನಾಂಚತುರಾಶ್ರಮೈಕನಿಯಮಾದ್ಗರ್ವಾತ್ಮಕಾನಾಂಕಥಂಯೋಗಜ್ಞಾನಮಿದಂಭವೇದ್ಗುರುಮುಖಾಭಾವೇಪರೋಕ್ಷಾತ್ಮಕಂ ॥೧೫॥

ಟೀ॥ ಖಂಡಜ್ಞಾನವತಾಂಚ-ಸ್ರಕ್ಚಂದನಾದಿ ಭೋಗ್ಯವಸ್ತುಬಾಧೆಗಳಿಂದ ಖಂಡಿತಜ್ಞಾನವುಳ್ಳವರುಗಳಿಗೂ, ಷಟ್ಸಮಯಸಂಮೋಹಾಂಧಕಾರಾತ್ಮಕಾನಾಂ-ನ್ಯಾಯ ವೈಶೇಷಿಕ ಸಾಂಖ್ಯ ಪಾತಂಜಲಿ ಮಾಯಾವಾದ ಮೀಮಾಂಸವೆಂಬ ಷಡ್ದರ್ಶನಭ್ರಾಂತಿಯೆಂಬಂಧಕಾರದಿಂ ಮುಸುಂಕಿದ ಸ್ವಸ್ವರೂಪವುಳ್ಳಂಥವರಿಗೂ, ನಾನಾವೇದಪುರಾಣಶಾಸ್ತ್ರಕವಿತಾವಾಗ್ವೈಖರೀಶಾಲಿನಾಂ- ವಿಚಿತ್ರರೂಪಂಗಳಾದ ವೇದಪುರಾಣಶಾಸ್ತ್ರಕವಿತೆಗಳೆಂಬ ನುಡಿಗಳ ವೈಖರೀಮಾತ್ರದಿಂದೊಪ್ಪುತ್ತಿರ್ಪಂಥವರಿಗೆಯೂ, ಚತುರಾಶ್ರಮೈಕನಿಯಮಾತ್-ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಭಿಕ್ಷುವೆಂಬ ನಾಲ್ಕಾಶ್ರಮಂಗಳಲ್ಲಿಯ ಮುಖ್ಯವಾದನಿಯಮದದೆಸೆಯಿಂದ, ಗರ್ವಾತ್ಮಕಾನಾಂ- ಅಹಂಕಾರಿಗಳಾಗಿರ್ಪಂಥ, ಮೂಢಾನಾಂಚ-ವಿವೇಕವಿಲ್ಲದವರಿಗೆಯೂ, ಅಪರೋಕ್ಷಾತ್ಮಕಂ-ಬ್ರಹ್ಮಸಾಕ್ಷಾತ್ಕಾರರೂಪವಾಗಿರ್ಪಂಥ, ಇದಂ-ಈಮುಂದೆಪೇಳ್ವ, ಯೋಗಜ್ಞಾನಂ-ರಾಜಯೋಗಜ್ಞಾನವು, ಗುರುಮುಖಾಭಾವೇ-ಗುರೂಪದೇಶವಿಲ್ಲದಿರಲಾಗಿ, ಕಥಂ-ಹೇಗೆ, ಭವೇತ್-ಆಗುವುದು? ॥೧೫॥

ಸೂ॥ ಈ ರಾಜಯೋಗಸಾಧನವಾದ ಗುರುಪ್ರಸಾದವು ಬಹುವಿಧವ್ಯಾಪಾರಂಗಗಳಿಂ ತೊಲಗಿದಾತಂಗಲ್ಲದೆ ಆಗದೆಂದು ಪೇಳ್ದಪಂ:—

ಶ್ಲೋ॥ ಕ್ಷೇತ್ರಾರ್ಥರಮ್ಯಗೃಹಪುತ್ರಕಳತ್ರಮಿತ್ರೈಃಖಿನ್ನೈರ್ಮಹಾರಸರಸಾಯನಧಾತುವಾದ್ಯೈಃ।ತೈಃಕಾಮ್ಯಮಂತ್ರಲಯಯೋಗಹಠಾದಿಭೇದೈರ್ಬದ್ಧಾತ್ಮನಾಂಕಥಮಿಹಾಸ್ತುಗುರೋಃಪ್ರಸಾದಃ ॥೧೬॥

ಟೀ॥ ಕ್ಷೇತ್ರಾರ್ಥರಮ್ಯಗೃಹಪುತ್ರಕಳತ್ರಮಿತ್ರೈಃ-ಕ್ಷೇತ್ರ-ಉದ್ಯೋಗದಿಂ ಫಲಿತಮಪ್ಪಕ್ಷೇತ್ರಗಳಿಂದ, ಅರ್ಥ-ದ್ರವ್ಯಂಗಳಿಂದ, ರಮ್ಯಗೃಹ-ಮನೋಹರಂಗಳಾದ ಭವನಗಳಿಂದ, ಪುತ್ರ-ಸುತರಿಂದ, ಕಳತ್ರ-ಸ್ತ್ರೀಯರಿಂದ, ಮಿತ್ರೈಃ-ಸ್ನೇಹಿತರಿಂದವೂ, ಖಿನ್ನೈಃ-ದುಃಖರೂಪಂಗಳಾಗಿರ್ಪಂಥ, ಮಹಾರಸರಸಾಯನಧಾತುವಾದ್ಯೈಃ-ಮಹತ್ತಾದರಸರಸಾಯನಧಾತುವಾದಂಗಳಿಂದವೂ, ತೈಃ-ಆಪೂರ್ವೋದಿತಂಗಳಾಗಿರ್ಪಂಥ, ಕಾಮ್ಯಮಂತ್ರಲಯಯೋಗಹಠಾದಿಭೇದೈಃ-ಕಾಮ್ಯ- ಕಾಮಿಸಿಮಾಡುವ ಕರ್ಮಾನುಷ್ಠಾನಂಗಳಿಂದವೂ, ಮಂತ್ರ-ಅಕ್ಷರಾತ್ಮಕವಾದ ಮಂತ್ರಚಿಂತನೆಗಳಿಂದವೂ, ಲಯಯೋಗ-ವೈಕೃತಭ್ರಮಣಾಯಾಮರೂಪವಾದ ಲಯಯೋಗದಿಂದವೂ. ಹಠಾದಿಭೇದೈಃ-ಹಠಾದಿಕದಿ

ಭಿನ್ನವಾದ ವ್ಯಾಪಾರಂಗಳಿಂದವೂ, ಬದ್ಧಾತ್ಮನಾ-ಬಂಧಿಸಲ್ಪಟ್ಟಸ್ವರೂಪವುಳ್ಳವರ್ಗೆ, ಇಹ-ಈ ರಾಜಯೋಗವಲ್ಲಿ, ಗುರೋಃ-ಆಚಾರ್ಯನ, ಪ್ರಸಾದಃ-ಕೃಪಾಪ್ರಸಾದವು, ಕಥಂ-ಆವಪ್ರಕಾರದಿಂದ, ಅಸ್ತಿ-ಉಂಟಾಗುತ್ತಿದ್ದೀತು ? (ತಾತ್ಪರ್ಯ—" ಆಚಾರ್ಯದೇವೋಭವ. ಅತಿಥಿದೇವೋಭವ-ಆಚಾರ್ಯನೇ ಇಷ್ಟದೈವವಾಗಿವುಳ್ಳಾತನಾಗು; ಅತಿಥಿಯೇ ಇಷ್ಟದೈವವಾಗಿವುಳ್ಳಾತನಾಗು, ಎಂಬ ಶ್ರುತಿಪ್ರಮಾಣದಿಂದಾಚಾರ್ಯನೇ ಶಿವನೆಂದು ತಿಳಿದಾತಂಗೆ ಯೋಗಸಿದ್ಧಿಯಪ್ಪುದೆಂಬುದಭಿಪ್ರಾಯಂ) ॥೧೬॥

ಸೂ॥ ರಾಜಯೋಗೋಪದೇಶಕ್ಕೆ ಯೋಗ್ಯನಾದ ಶಿಷ್ಯನು ಬ್ರಹ್ಮಜ್ಞಾನಿಯಾದ ಗುರುವನೇ ಆಶ್ರೈಸಬೇಕೆಂದು ಪೇಳ್ದಪಂ:— ॥೧೭॥

ಶ್ಲೋ॥ ಆದೌವರ್ಣಾಶ್ರಮಾಚಾರೋಗುರೌಬ್ರಹ್ಮಜ್ಞತಾಸ್ತಿಚೇತ್ ।
ಭಜೇತ್ತಮೇವಯತ್ನೇನನೋಚೇದನ್ಯಗುರುಂವ್ರಜೇತ್ ॥೧೭॥

ಟೀ ॥ ಗುರೌ-ಶ್ರೀಗುರುವಿನಲ್ಲಿ, ವರ್ಣಾಶ್ರಮಾಚಾರಃ-ಬ್ರಾಹ್ಮಣಾದಿವರ್ಣಕ್ಕೆ ತಕ್ಕ ಸದಾಚಾರವೂ ಬ್ರಹ್ಮಚರ್ಯಾದ್ಯಾಶ್ರಮಕ್ಕೆ ತಕ್ಕಾಚಾರವೂ, ಬ್ರಹ್ಮಜ್ಞತಾ-ಬ್ರಹ್ಮವನರಿವತನವೂ, ಅಸ್ತಿಚೇತ್-ಉಂಟಹುದಾದರೆ, ಆದೌ-ಮೊದಲಲ್ಲಿ, ತಮೇವ-ಆ ಗುರುವನೇ, ಯತ್ನೇನ-ಪ್ರಯತ್ನದಿಂದೆ, ಭಜೇತ್-ಸೇವಿಸುವುದು. ನೋಚೇತ್-ಆತನಲ್ಲಿ ಆಜ್ಞಾನಾಚಾರಂಗಳಿಲ್ಲದಿರ್ದೊಡೆ, ಅನ್ಯಗುರುಂ-ಮತ್ತೊಬ್ಬ ವಿಶಿಷ್ಟನಾದ ಗುರುವನು, ವ್ರಜೇತ್-ಎಯ್ದುವುದು. ॥೧೭॥

ಸೂ॥ ಅನಂತರದಲ್ಲಿ ರಾಜಯೋಗದಿಂ ಸಾಧ್ಯವಪ್ಪ ಬ್ರಹ್ಮಸ್ವರೂಪಮಂ ಪೇಳ್ದು ಆ ಬ್ರಹ್ಮವನರಿದಾತನೇ ಶ್ರೀಗುರುವೆಂದು ಪೇಳ್ದಪಂ:—

ಶ್ಲೋ॥ ಆತ್ಮಾನಮದ್ವಂದ್ವಮನಂತಮಾದ್ಯಂನಿರಂಜನಂನಿಷ್ಕಲನಿ
ತ್ಯತೃಪ್ತಂ । ಸಚ್ಚಿನ್ಮಯಾನಂದಪರಾಮೃತಂಯೋವೇತ್ತಿ
ಸ್ವಭಾವೇನಗುರುಸ್ಸಏವ ॥೧೮॥

ಟೀ॥ ಅದ್ವಂದ್ವಂ-ಅನಾದಿಮುಕ್ತನಪ್ಪುದರಿಂ ತನಗೆ ಜೋಡಿಲ್ಲದಿರ್ಪಂಥ, ಅನಂತಂ-ದೇಶಕಾಲಂಗಳಿಂದನವಚ್ಛಿನ್ನನಾಗಿರ್ಪಂಥ, ಆದ್ಯಂ-ಷಡಧ್ವಕ್ಕೆ ತಾನೇ ಮೊದಲಿಗನಾಗಿರ್ಪಂಥ, ನಿರಂಜನಂ-ಅನಾದಿನಿರ್ಮಲನಪ್ಪುದರಿಂ ನಿರಾವರಣನಾಗಿರ್ಪಂಥ, ನಿಷ್ಕಲನಿತ್ಯತೃಪ್ತಂ-ಚಲಿಸದೆಯಿರ್ಪನಿತ್ಯತೃಪ್ತಿಯೇ ಸ್ವರೂಪವಾಗಿರ್ಪಂಥ, (ಶುದ್ಧಾಶುದ್ಧಭೋಗಭೋಕ್ತೃತ್ವವಿಲ್ಲವಾಗಿ ಸಂಪೂರ್ಣಕಾಮನೆಂಬುದಭಿಪ್ರಾಯಂ) ಸಚ್ಚಿನ್ಮಯಾನಂದಪರಾಮೃತಂ-ಸದ್ರೂಪ ಚಿದ್ರೂಪ ಆನಂದರೂಪವಾದ ಕುಂಡಲಿನಿಗೆ ಮೇಲಾದ ಮೋಕ್ಷಸ್ಥಾನವಾದಂಥ, (" ಸಾಚಕುಂಡಲಿನೀಶಂಭೋರ್ನಿತ್ಯಾಧಿಷ್ಠೇಯರೂಪಿಣೀ" ಎಂಬುದಾಗಿ) ಆತ್ಮಾನಂ-ಪರಮಾತ್ಮನನ್ನು, ಯಃ-ಆವಾತನು, ಸ್ವಭಾವೇನ-ಸ್ವ-ಪ್ರ

ಕಾಶರೂಪವಾದ ತನ್ನ, ಭಾವೇನ-ಪರಪ್ರಕಾಶರೂಪವಾದ ವಿಮಲಚೈತನ್ಯದಿಂದ, ವೇ ತ್ತಿ-ಅಪರೋಕ್ಷದಿಂ ಕಾಣುತ್ತಿದ್ದಾನೋ, ಸಏವ-ಆತನೇ, ಗುರುಃ-ಆಚಾರ್ಯನು. (ತಾ ತ್ಪರ್ಯ-ಸಗುಣನಿರ್ಗುಣಾತ್ಮಕವಾದ ಪರಬ್ರಹ್ಮದ ಸಾಕ್ಷಾತ್ಕಾರ ಪ್ರಳ್ಯಾತನೇ ಗುರುವೆಂ ಬುದಭಿಪ್ರಾಯಂ) ||೧೮||

ಸೂ|| ಅನಂತರದಲ್ಲಿ ಪ್ರಥಮೋದ್ದಿಷ್ಟವಾದ ಸಾಂಖ್ಯಯೋಗವೇ ತತ್ವಜ್ಞಾನ ರೂಪವಪ್ಪುದರಿಂದೆ ಆ ತತ್ವಜ್ಞಾನಮಂ ತತ್ವಂಗಳಂ ವಿಲಕ್ಷಿಸಿನ ಶ್ರೀಗುರುವಿನಿಂದ ಭ್ಯಾಸಮಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ|| ಜ್ಞಾನವೈರಾಗ್ಯಭಾವೇನತೃಣೀಕೃತಜಗತ್ತ್ರಯಂ ।
ಆದಾವುಸದ್ಗುರುಮಾಶ್ರಿತ್ಯತತ್ವಜ್ಞಾನಂಸಮಭ್ಯಸೇತ್ ||೧೯||

ಟೀ|| ಜ್ಞಾನವೈರಾಗ್ಯಭಾವೇನ-ಜ್ಞಾನ-ಮುಂದೆಪೇಳ್ವ ಪಂಚವಿಂಶತಿತತ್ವಂಗಳ್ತಾನ ಲ್ಲ ತನ್ನವಲ್ಲ ವೆಂಬ ವಿವೇಕರೂಪವಾದ ತಿಳಿವಿನಿಂದವೂ, ವೈರಾಗ್ಯಭಾವೇನ-ಆಮೂ ಯಾಜನಿತವಾದ ವಸ್ತುಗಳಲ್ಲಿ ಬೇಕು ಬೇಡೆಂಬುದನುಳಿದು ನಿಂದ ವಿಮಲವಿರಕ್ತಿಯಿಂ ದವೂ, ತೃಣೀಕೃತಜಗತ್ತ್ರಯಂ-ತೃಣೀಕರಿಸಲ್ಪಟ್ಟ ಮೂರುಲೋಕವುಳ್ಳಂಥ, ಸದ್ಗು ರುಂ-ಶ್ರೀಗುರುವನು, ಆಶ್ರಿತ್ಯ-ಆಶ್ರಯಿಸಿ, ಆದೌ-ಮೊದಲಲ್ಲಿ, ತತ್ವಜ್ಞಾನಂ-ಮುಂದೆಪೇ ಳ್ವ ಪಂಚೀಕರಣರೂಪವಾದ ಪಂಚವಿಂಶತಿ ತತ್ವಂಗಳಂ ವಿಲಕ್ಷಿಸುವ ಅರಿವನು, ಸಮ ಭ್ಯಸೇತ್-ಅನ್ಯೋನ್ಯಾಧ್ಯಾಸವಾಗದಂತೆ ಚೆನ್ನಾಗಿ ಅಭ್ಯಾಸವಂ ಮಾಡುವುದು. " ಅಹೋಮಯಾಪೋಽವಧೌವುಗ್ನೋನಪಶ್ಯಾಮಿಪ್ರತಿಕ್ರಿಯಾಂ । ಯದಿಯೋನ್ಯಾಃಪ್ರ ಮುಂಚಾಮಿಸಾಂಖ್ಯಯೋಗಂಸಮಾಶ್ರಯೇ ॥ ದುಃಖಾರ್ಣವದೊಳ್ಮುಳುಂಗಿರ್ದಾತನು ಯೋನಿಯಂ ಪೊರಮಾಡುತ್ತವೇ ಮೋಕ್ಷಾರ್ಥಮಾಗಿ ಸಾಂಖ್ಯಯೋಗವನಾಶ್ರಯಿಸು ವೆನೆಂದು ಗರ್ಭದ ಶಿಶು ಚಿಂತಿಪುವೆಂಬ ಶ್ರುತಿಪ್ರಮಾಣದಿಂ ಸಾಂಖ್ಯಯೋಗವಂ ಸಾಧಿಳ್ ದೆಂಬುವಭಿಪ್ರಾಯಂ.) ||೧೯||

ಸೂ|| ಅನಂತರದಲ್ಲಿ ಸಾಂಖ್ಯಯೋಗರೂಪವಾದ ತತ್ವಜ್ಞಾನಮಂ ಪೇಳಲ್ ಸೃ ಷ್ಟಿಕ್ರಮದಿಂದಾಕಾಶಪಂಚೀಕರಣವಂ ಪೇಳ್ದಪಂ:—

ಶ್ಲೋ|| ಜ್ಞಾತೃತ್ವಮಂತರಿಕ್ಷಂಚಸಮಾನೋವಾಯು-ರೇವಚ ।
ಶ್ರೋತ್ರಮಗ್ನಿರ್ಧ್ವನಿರ್ವಾರಿವಾಗ್ಭೂಃಖೇತತ್ವಪಂಚಕಂ ||೨೦

ಟೀ||ಜ್ಞಾತೃತ್ವಂ-ಆತ್ಮನು ಜಾಗ್ರದವಸ್ಥೆಯಲ್ಲಿ ಭ್ರೂಮಧ್ಯದಲ್ಲಿರ್ಪನಾಗಿ, ಅದೇ ಆಕಾಶಸ್ಥಾನವಪ್ಪುದರಿಂದಲ್ಲಿ ಕಲೋಜ್ವಲಿತ ಚೈತನ್ಯವಾದ ಆತ್ಮನಜ್ಞಾತೃತ್ವವೇ, ಅಂ ತರಿಕ್ಷಂ- ಆಕಾಶನೊಳಗಣ ಆಕಾಶವು. (ಪೃಥ್ವಿಯನೊಳಕೊಂಡುದಪ್ಪು, ಆ ಅಪ್ಪು ವನೊಳಕೊಂಡುದಗ್ನಿ, ಅಗ್ನಿಯನೊಳಕೊಂಡುದು ವಾಯು, ವಾಯುವನೊಳಕೊಂ

ಡುದಾಕಾಶ, ಆ ಆಕಾಶವನೊಳಕೊಂಡವನಾತ್ಮ, ಆ ಆತ್ಮನೇ ಪಂಚಕಂಚುಕ ಯುಕ್ತನಾಗಿ ಪ್ರಕೃತಿಮುಖದಿಂದಾಕಾಶಸ್ಥಾನದಲ್ಲಿ ನಿಂದು ವಿಷಯಂಗಳ ನರಿಯುಲು ಸ್ಮುಖ್ಯತ್ವವೇ ಜ್ಞಾತೃತ್ವ, ಆ ಜ್ಞಾತೃತ್ವವೇ ಆಕಾಶವೆಂಬುದಭಿಪ್ರಾಯಂ) ಸಮಾನಃ-ಅನ್ನರಸಮಂ ಸಕಲ ರೋಮಕೂಪಂಗಳಿಗೆ ವಿಭಾಗಿಸಬ ದೇಹವ್ಯಾಪಾರಕವಾದ ಸಮಾನವಾಯುವೇ, ವಾಯುಃ- ಆಕಾಶತತ್ವದಲ್ಲಿಯ ವಾಯು, ಶ್ರೋತ್ರಮೇವಚ-ಶಬ್ದಪ್ರಕಾಶವಾದ ಶ್ರೋತ್ರೇಂದ್ರಿಯುವೇ, ಅಗ್ನಿಃ-ಅಗ್ನಿತತ್ವವು, ಧ್ವನಿಃ-ವೀಚಿತರಂಗ ನ್ಯಾಯದಿಂ ಪಸರಿಸುವ ಧ್ವನಿಯೇ, ವಾರಿ-ಅಪ್‌ತತ್ವವು, ವಾಕ್-ವರ್ಣಂಗಳುತ್ಪತ್ತಿ ಗಾಧಾರವಾದ ವಾಗಿಂದ್ರಿಯುವೇ, ಭೂ-ಪೃಥ್ವೀತತ್ವವೆಂಬಿವು, ಖೇ-ಆಕಾಶದಲ್ಲಿಯ, ತತ್ವಪಂಚಕಂ-ಐದುತತ್ವಂಗಳು. ‖೨೦‖

ಸೂ‖ ಅನಂತರದಲ್ಲಿ ವಾಯುವಿನಲ್ಲಿಯ ಭೂತಪಂಚಕನಂ ಪೇಳ್ದಪಂ:—

ಶ್ಲೋ‖ ಮನಏವವಿಯದ್ವ್ಯಾನೋವಾಯುಶ್ಚರ್ಮಧನಂಜಯಃ ।
ಸ್ಪರ್ಶೋಂಭಶ್ಚ ಕ್ಷವಾ ಪಾಣಿಮರುತತ್ತತ್ವಪಂಚಕಂ ‖೨೧

ಟೀ‖ ಮನಏವ-ಮನಸ್ಸೇ, ವಿಯತ್-ವಾಯುವಿನೊಳಗಣ ಆಕಾಶವು, ವ್ಯಾನಃ-ವ್ಯಾನವೆಂಬುದೇ, ವಾಯುಃ-ವಾಯುತತ್ವವು, ಚರ್ಮ-ತ್ವಗಿಂದ್ರಿಯವೇ, ಧನಂಜಯಃ-ಅಗ್ನಿಯು, ಸ್ಪರ್ಶಃ-ಸ್ಪರ್ಶವೆಂಬವಿಷಯವೇ, ಅಂಭಃ-ಉದಕವು, ಪಾಣಿಃ-ಪಾಣೀಂದ್ರಿಯವೇ, ಕ್ಷಮಾಚ-ಭೂಮಿಯು, ಇವು, ಮರುತಃ-ವಾಯುವಿನಸಂಬಂಧಿಗಳಾದ, ತತ್ವಪಂಚಕಂ-ಐದುತತ್ವಂಗಳು. ‖೨೧‖

ಸೂ‖ ಅನಂತರದಲ್ಲಿ ಅಗ್ನಿಯಲ್ಲಿಯ ತತ್ವಪಂಚಕಮಂ ಪೇಳ್ದಪಂ:—

ಶ್ಲೋ‖ ನಭೋಬುದ್ಧಿರುದಾನಶ್ಚ ಮರುದ್ಗೌರ್ವಹ್ನಿರೇವಚ ।
ಪಾಥೋರೂಪಂಧರಾಪಾದೋವಹ್ನೇರ್ಯತ್ತತ್ವಪಂಚಕಂ‖

ಟೀ‖ ಬುದ್ಧಿಃ-ಬುದ್ಧಿತತ್ವವೇ, ನಭಃ-ಅಗ್ನಿತತ್ವದಲ್ಲಿಯಆಕಾಶವು, ಉದಾನಶ್ಚ-ಉದಾನವಾಯುವೇ, ಮರುತ್- ವಾಯುತತ್ವವು, ಗೌರೇವಚ- ನೇತ್ರೇಂದ್ರಿಯವೇ, ವಹ್ನಿಃ-ಅಗ್ನಿಯು, ರೂಪಂ-ರೂಪವೆಂಬವಿಷಯವೇ, ಪಾಥಃ-ಉದಕವು, ಪಾದಃ-ಪಾದೇಂದ್ರಿಯವೇ, ಧರಾ-ಭೂಮಿಯು, ಹೀಗೆಂಬ, ಯತ್- ಆವುದಾನೊಂದುಂಟೋ, ಅದು, ವಹ್ನೇಃ-ಅಗ್ನಿಸಂಬಂಧವಾದ, ತತ್ವಪಂಚಕಂ-ತತ್ವಂಗಳೈದು. ‖೨೨‖

ಸೂ‖ ಅನಂತರದಲ್ಲಿ ಉದಕದಲ್ಲಿಯ ತತ್ವಪಂಚಕಮಂ ಪೇಳ್ದಪಂ:—

ಶ್ಲೋ‖ ಚಿತ್ತಂವಿಷ್ಣುಪದಂವಾಯುರಪಾನೋರಸನಾನಲಃ ।
ರಸೋಜಲಮುಪಸ್ಥೋಭೂರಪಾಂತತ್ತತ್ವಪಂಚಕಂ ‖೨೩‖

ಟೀ॥ ಚಿತ್ತಂ-ಚಿತ್ತವೆಂಬಂತಃಕರಣವೇ, ವಿಷ್ಣುಪದಂ-ಅಪ ತತ್ವದಲ್ಲಿಯ ಆಕಾಶವು, ಅಪಾನಃ-ಅಪಾನವಾಯುವೇ, ವಾಯುಃ-ವಾಯುತತ್ವವು, ರಸನಾ-ಜಿಹ್ವೇಂದ್ರಿಯುವೇ, ಅನಲಃ-ಅಗ್ನಿಯು, ರಸಃ-ರಸವೆಂಬವಿಷಯುವೇ, ಜಲಂ-ಉದಕವು, ಉಪಸ್ಥಃ-ಗುಹ್ಯೇಂದ್ರಿಯವೇ, ಭೂಃ-ಪೃಥಿವಿಯು, ತತ್-ಅದು, ಅಪಾಂ-ಉದಕದ, ತತ್ವಪಂಚಕಂ-ತತ್ವಂಗಳೈದು. ॥೩॥

ಸೂ॥ ಅನಂತರದಲ್ಲಿ ಪೃಥ್ವೀತತ್ವಪಂಚಕವಂ ಪೇಳ್ದಪಂ:—

ಶ್ಲೋ॥ ಅಹಂಕಾರೋವಿಯತ್ಪ್ರಾಣೋವಾಯುರ್ಘ್ರಾಣಂಹುತಾಶನಃ। ಆಪೋಗಂಧೋಮಹೀಪಾಯುಃಪೃಥಿವ್ಯಾಂತತ್ವಪಂಚಕಂ ॥೨೪॥

ಟೀ॥ ಅಹಂಕಾರಃ-ಅಹಂಕಾರವೆಂಬಂತಃಕರಣವೇ, ವಿಯತ್-ಪೃಥ್ವಿಯಲ್ಲಿಯ ಆಕಾಶವು, ಪ್ರಾಣಃ-ಪ್ರಾಣವಾಯುವೇ, ವಾಯುಃ-ವಾಯುತತ್ವವು, ಘ್ರಾಣಂ-ಘ್ರಾಣೇಂದ್ರಿಯವೇ, ಹುತಾಶನಃ-ಅಗ್ನಿಯು, ಗಂಧಃ-ಗಂಧವೆಂಬ ವಿಷಯುವೇ, ಆಪಃ-ಉದಕವು, ಪಾಯುಃ-ಗುದವೆಂಬಿಂದ್ರಿಯವೇ, ಮಹೀ-ಪೃಥ್ವಿಯು, ಇವು, ಪೃಥಿವ್ಯಾಂ-ಪೃಥ್ವೀತತ್ವದಲ್ಲಿಯ, ತತ್ವಪಂಚಕಂ-ತತ್ವಂಗಳೈದು, (ತಾತ್ಪರ್ಯ-ಜ್ಞಾತೃಸ್ವ ಮನ ಬುದ್ಧಿ ಚಿತ್ತ ಅಹಂಕಾರವೆಂಬ್ಬೈದು ಸಕಲವ್ಯವಹಾರಂಗಳಿಗೆ ಅವಕಾಶಮಂ ಕೊಡುತ್ತಿರ್ಪುದರಿಂದೆ ಕ್ರಮದಿಂ ವ್ಯೋಮಾದಿ ಪಂಚತತ್ವಂಗಳಲ್ಲಿಯು ಆಕಾಶತತ್ವವೆನಿಸಿಕೊಂಬುವು. ಸಮಾನ ವ್ಯಾನ ಉದಾನ ಅಪಾನ ಪ್ರಾಣಂಗಳೆಂಬ್ಬೈದು ದೇಹಾವಯವಂಗಳ ವ್ಯಾಪನಮಂ ಮಾಳ್ಪುದರಿಂದ ಕ್ರಮದಿಂ ಪಂಚಭೂತಂಗಳಲ್ಲಿಯು ವಾಯುತತ್ವವೆನಿಸಿಕೊಂಬುವು. ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣವೆಂಬ್ಬೈದು ಆತ್ಮಂಗೆ ವಿಷಯಂಗಳಂ ಪ್ರಕಾಶಿಸಿ, ಭೋಗಪರಿಪಾಕವಂ ಮಾಳ್ಪುದರಿಂ ಕ್ರಮದಿಂ ಪಂಚಭೂತಗಳಲ್ಲಿಯು ಅಗ್ನಿತತ್ವವೆನಿಸಿಕೊಂಬುವು. ಶಬ್ದ ಸ್ಪರ್ಶ ರೂಪ ರಸ ಗಂಧಂಗಳೆಂಬ್ಬೈದು ಪ್ರವಾಹರೂಪದಿಂದಾತ್ಮಂಗೆ ಗ್ರಹಣಯೋಗ್ಯವಪ್ಪುದರಿಂದ ಕ್ರಮದಿಂ ಪಂಚಭೂತಂಗಳಲ್ಲಿಯು ಅಪ್ತತ್ವವೆನಿಸಿಕೊಂಬುವು. ವಾಕ್ಕು ಪಾಣಿ ಪಾದ ಉಪಸ್ಥ ಪಾಯು ವೆಂಬ್ಬೈದು ವಚನ ಆದಾನ ಗಮನ ವಿಹರಣ ವಿಸರ್ಜನವೆಂಬ ವ್ಯಾಪಾರಂಗಳಂ ಧರಿಸಿ, ಸ್ಥೂಲವಪ್ಪುದರಿಂ ಕ್ರಮದಿಂ ಪಂಚಭೂತಂಗಳಲ್ಲಿಯು ಪೃಥ್ವೀತತ್ವಂಗಳೆನಿಸಿಕೊಂಬುವೆಂಬುದಭಿಪ್ರಾಯಂ.॥

ಸೂ॥ ಈ ಪ್ರಕಾರವಾದ ಪಂಚವಿಂಶತಿತತ್ವಂಗಳ ನರಿದಾತನೇ ಮುಕ್ತನೆಂದು ಪೇಳ್ದಪಂ:—

ಶ್ಲೋ॥ ಪಂಚವಿಂಶತಿತತ್ವಾನಿಪಂಚಭೂತಸ್ಥಿತಾನಿಚ।
ತಾನಿಯೋವೇತ್ತಿತತ್ವಜ್ಞಸ್ಸಏವಸತುಮುಕ್ತಿಭಾಕ್ ॥೨೫॥

ಟೀ॥ ತಾನಿ-ಶ್ಲೋಕೋದಿತಂಗಳಾದಂಥ, ಪಾಂಚಭೌತಸ್ಥಿತಾನಿಚ-ಪಂಚಭೂತಂಗಳಲ್ಲಿರ್ಪಂಥ, ಪಂಚವಿಂಶತಿತತ್ವಾನಿ-ಇಪ್ಪತ್ತೈದುತತ್ವಂಗಳನು, ಯಃ-ಆವಾತನು, ವೇತ್ತಿ-ತನ್ನಿಂದನ್ಯವಾಗಿ ಕಾಣುತ್ತಿದ್ದಾನೋ, ಸಏವ-ಆತನೇ, ತತ್ವಜ್ಞಃ-ತತ್ವಜ್ಞಾನಿಯೆನಿಸಿಕೊಂಬನು. ಸತು-ಆತನೇ, ಮುಕ್ತಿಭಾಕ್-ಮೋಕ್ಷಮಂ ಭಜಿಸುವಾತನು. (ತಾತ್ಪರ್ಯ-ಕಣ್ಣೊಳಿರ್ದ ಕಸಮಂ ತೆಗೆದು ಕಾಣಲ್ಬಾಧೆ ತೊಲಂಗುವಂತೆ ಈ ತತ್ವಂಗಳಂ ವಿಲಕ್ಷಿಸಿ ಕಾಣಲ್ ಮುಕ್ತನಪ್ಪನೆಂಬುವಭಿಪ್ರಾಯಂ.) ॥೨೫॥

ಸೂ॥ ಈ ತತ್ವಂಗಳಂ ವಿವೇಕದಿಂ ವಿಭಾಗಿಸುವ ಪ್ರಕಾರಮಂ ಪೇಳ್ದಪರು:—

ಶ್ಲೋ॥ ಆಧ್ಯಾತ್ಮಿಕಾಧಿಭೌತಾಧಿದೈವತಾನಿಯಥಾಕ್ರಮಂ ।
ದಶೇಂದ್ರಿಯೇಷುವಿಭಜಜ್ಜೀವಾಂತಃಕರಣೇಷುಚ ॥೨೬॥

ಟೀ॥ ಆಧ್ಯಾತ್ಮಿಕಾಧಿಭೌತಾಧಿದೈವತಾನಿ-ಆಧ್ಯಾತ್ಮಿಕ ಆಧಿಭೌತಿಕ ಆಧಿದೈವತಂಗಳನು, ಯಥಾಕ್ರಮಂ-ಕ್ರಮವನುಮೀರದೆ, ದಶೇಂದ್ರಿಯೇಷು-ಜ್ಞಾನೇಂದ್ರಿಯ ಕರ್ಮೇಂದ್ರಿಯಂಗಳೆಂಬ ದಶವಿಧವಾದ ಬಾಹ್ಯೇಂದ್ರಿಯಂಗಳಲ್ಲಿಯೂ,ಜೀವಾಂತಃಕರಣೇಷುಚ-ಜೀವನ ಅಂತಃಕರಣಚತುಷ್ಟಯದಲ್ಲಿಯೂ, ವಿಭಜನ್-ವಿಭಾಗಿಸುತವೂ, (ತನ್ನ ನಿಜಸ್ವರೂಪವಂ ಸ್ಮರಿಸಲ್ವೇಕೆಂದು ಮುಂದಣ ಗ್ರಂಥದ ಕ್ರಿಯೆಯೊಡನೆ ಸಂಬಂಧವು ತಿಳಿವುದು.) ತಾತ್ಪರ್ಯ-ಜ್ಞಾನೇಂದ್ರಿಯಕರ್ಮೇಂದ್ರಿಯಗಳು ಹತ್ತು, ಅಂತಃಕರಣಚತುಷ್ಟಯ–ಈ ಹದಿನಾಲ್ಕು ಆಧ್ಯಾತ್ಮವೆನಿಸಿಕೊಂಬುವು. ಇದಕ್ಕೆಸಂಮತಿ-“ಬುದ್ಧೀಂದ್ರಿಯಾಣಿವಿಪ್ರೇಂದ್ರಾಸ್ತಥಾಕರ್ಮೇಂದ್ರಿಯಾಣಿಚ। ಮನೋಬುದ್ಧಿರಹಂಕಾರಶ್ಚಿತ್ತಂಚೇತಿಚತುಷ್ಟಯಂ । ಆಧ್ಯಾತ್ಮಂಪೃಥಗೇವೇದಂಚತುರ್ದಶವಿಧಂಸ್ಮೃತಂ” ಈ ಶ್ರೋತ್ರಾದಿ ಚತುರ್ದಶವಿಧಕರಣಕ್ಕೆ ವಿಷಯಂಗಳಾಗಿ ಕೇಳಲು ಯೋಗ್ಯಂಗಳ್ಕಾಣಲು ಯೋಗ್ಯಂಗಳ್ಮೊದಲಾದ ಹದಿನಾಲ್ಕು ಆಧಿಭೌತಿಕಂಗಳೆನಿಸಿಕೊಂಬುವು. ಇದಕ್ಕೆ ಸಂಮತಿ-“ದ್ರಷ್ಟವ್ಯಮೇತಚ್ಛ್ರೋತವ್ಯಂಘ್ರಾತವ್ಯಂಚಯಥಾಕ್ರಮಂ। ರಸಿತವ್ಯಂಮುನಿಶ್ರೇಷ್ಠಾಸ್ಸ್ಪ್ರಷ್ಟವ್ಯಂತಥೈವಚ ॥ ಮಂತವ್ಯಂಚೈವಬೋದ್ಧವ್ಯಮಹಂಕರ್ತವ್ಯಮೇವಚ । ತಥಾಚೇತಯಿತವ್ಯಂಚವಕ್ತವ್ಯಂಮುನಿಪುಂಗವಾಃ ॥ ಆದಾತವ್ಯಂಚಗಂತವ್ಯಂವಿಸರ್ಜಿತವ್ಯಮೇವಚ । ಆನಂದಿತವ್ಯಮಿತ್ಯೇತದ್ಧ್ಯಾಧಿಭೂತಮನುಕ್ರಮಾತ್” ಈ ಹದಿನಾಲ್ಕಕ್ಕೆ ಕರ್ತೃಗಳಾದ ಆದಿತ್ಯಾದಿಗಳೇ ಆಧಿದೈವಿಕಗಳೆನಿಸಿಕೊಂಬುವು. ಇದಕ್ಕೆಸಂಮತಿ-“ಆದಿತ್ಯೋಽಥದಿಶಶ್ಚೈವಪೃಥಿವೀವರುಣಸ್ತಥಾ । ವಾಯುಶ್ಚಂದ್ರಸ್ತಥಾಬ್ರಹ್ಮರುದ್ರಃಕ್ಷೇತ್ರಜ್ಞಏವಚ ॥ ಅಗ್ನಿಶ್ಚೇಂದ್ರಸ್ತಥಾವಿಷ್ಣುರ್ಮಿತ್ರೋದೇವಃಪ್ರಜಾಪತಿಃ । ಆಧಿದೈವತಮೇವಂಹಿಚತುರ್ದಶವಿಧಂಕ್ರಮಾತ್” ಎಂಬ ಪುರಾಣವಚನ ಪ್ರಮಾಣದಿಂದಾಧ್ಯಾತ್ಮಿಕಾದಿಗಳಂ ವಿಭಾಗಿಸಿ ಕಾಣಲ್ವೇಕೆಂಬುವಭಿಪ್ರಾಯಂ. ॥

ನಿಷೇಧಮುಖದಿಂದವೂ ವಿಧಿಮುಖದಿಂದವೂ ತನ್ನ ನಿಜಸ್ವರೂಪವ ನರಿದಾತ
ನೇ ತತ್ವಜ್ಞಾನಿಯೆಂದು ಪೇಳ್ದಪಂ:—

ಶ್ಲೋ॥ ನಾಹಂಭೂತಗುಣೇಂದ್ರಿಯಾದಿಕಮನೋಹಂಚಿತ್ತಬು
ದ್ಧಿರ್ವಪುಃಪ್ರಾಣಸ್ಪರ್ಶನಧರ್ಮಕರ್ಮನಿರತೋನೈವಪ್ರಪಂ
ಚೋಽಖಿಲಃ । ನಿತ್ಯಂನಿಷ್ಕಲಮೇಕಮಚ್ಯುತಮಜಂಶಾಂ
ತಂಶಿವಂನಿರ್ಗುಣಂ ಶುದ್ಧಂಬುದ್ಧಪದಂಹಿಯತ್ತದಹಮ
ಸ್ಮೀತಿಸ್ಮರನ್ಜೀವತಿ ॥೨೩॥

ಟೀ॥ ಭೂತಗುಣೇಂದ್ರಿಯಾದಿಕ-ಪೃಥಿವ್ಯಾದಿಪಂಚಭೂತಗಳ ರೂಪ ರಸ ಗಂಧ ಸ್ಪರ್ಶಾದಿ ಚತುರ್ವಿಂಶತಿಗುಣಗಳೂ ಜ್ಞಾನೇಂದ್ರಿಯಕರ್ಮೇಂದ್ರಿಯಂಗಳೂ, ಅಹ ನ-ನಾನಲ್ಲ, ಮನಃ-ಮನಸ್ಸೂ, ಅಹಂ-ಅಹಂಕಾರವೂ, ಚಿತ್ತಬುದ್ಧೀ-ಚಿತ್ತಬುದ್ಧಿಗಳೆಂಬ ಅಂತಃಕರಣಂಗಳೂ, ವಪುಃ-ಜಾತಿಕುಲಾದ್ಯಭಿಮಾನಾಶ್ರಯವಾದ ಸ್ಥೂಲಶರೀರವೂ, ಪ್ರಾಣ ಸ್ಪರ್ಶನಧರ್ಮಕರ್ಮನಿರತಃ-ಪ್ರಾಣವಾಯುವಿನಸೋಂಕಾದ ಜೀವತ್ವದಿಂದಾದ ನಾನಾ ಜಾತಿಯ ಧರ್ಮಕರ್ಮದಲ್ಲಿಯ ತಾತ್ಪರ್ಯವುಳ್ಳಾತನು, ನೈವ-ಅಲ್ಲನೇ. ಅಖಿಲಃ-ಸಮಸ್ತವಾಗಿರ್ಪಂಥ, ಪ್ರಪಂಚಃ-ದೃಶ್ಯಮಾನಪ್ರಪಂಚವೂ, ನ-ಅಲ್ಲ. ನಿತ್ಯಂ- ಕಾಲಾನವಚ್ಛಿನ್ನವಾಗಿರ್ಪಂಥ, ನಿಷ್ಕಲಂ- ಅಖಂಡಿತವಸ್ತುದರಿಂ ಚಲಿಸದಿರ್ಪಂಥ, ಏಕಂ—ಮುಖ್ಯವಾಗಿರ್ಪಂಥ, ಅಚ್ಯುತಂ-ಕೇಡಿಲ್ಲದಿರ್ಪಂಥ, ಅಜ-ಜನ್ಮರಹಿತವಾಗಿರ್ಪಂಥ, ಶಾಂತಂ-ರಾಗದ್ವೇಷಂಗಳಿಲ್ಲದೆಯಿರ್ಪಂಥ, ಶಿವಂ-ನಿರ್ಮಲವಾಗಿರ್ಪಂಥ, ನಿರ್ಗುಣಂ-ಗುಣತ್ರಯರಹಿತವಾಗಿರ್ಪಂಥ, ಶುದ್ಧಂ ದೋಷರಹಿತವಾಗಿರ್ಪಂಥ, ಯತ್-ಆವುದಾನೊಂದು, ಬುದ್ಧಪದಂ-ಬೋಧರೂಪವಾದವಸ್ತುವುಂಟೋ, ತತ್—ಆವಸ್ತುವೇ, ಅಹಂ-ನಾನ, ಅಸ್ಮೀತಿ-ಆಗುತ್ತಿರ್ದೆನೆಯೆಂದು, ಸ್ಮರನ್-ನೆನೆವುತ್ತಿರ್ಪಂಥಾತನೇ, ಜೀವತಿಹಿ-ಬದುಕುತ್ತಿರ್ಪಂಥಾತನಲಾ. (ತಾತ್ಪರ್ಯ-"ತದೇವನಿಷ್ಕಲಂಬ್ರಹ್ಮನಿರ್ವಿಕಲ್ಪಂನಿರಂಜನಂ। ತದ್ಬ್ರಹ್ಮಾಹಮಿತಿಜ್ಞಾತ್ವಾಬ್ರಹ್ಮಸಂಪದ್ಯತೇಧ್ರುವಂ" ಎಂಬ ಶ್ರುತಿಪ್ರಮಾಣದಿಂದ ತನ್ನ ನಾನಿಷ್ಕಲಬ್ರಹ್ಮಸ್ವರೂಪನೆಂದು ಕಂಡಾತಂಗಲ್ಲದೆ ಬ್ರಹ್ಮಸಾಕ್ಷಾತ್ಕಾರವಾಗದೆಂಬುದಭಿಪ್ರಾಯಂ.) ॥೬॥

ಸೂ॥ ನಿಷೇಧಮುಖದಿಂದಾಗುವ ತತ್ವಜ್ಞಾನಮಂ ಪುನರಪಿ ಪ್ರಕಾರಾಂತರದಿಂ ಪೇಳ್ದಪಂ:—

ಶ್ಲೋ॥ ದೇಹತ್ರಯೇಪ್ರಥಿತಷೋಡಶಧಾವಿಕಾರಾನ್ಲಿಂಗಾನಿಸಪ್ತ
ದಶಧಾನವಧಾಪದಾರ್ಥಾನ್ । ಆತ್ಮಾನಮಷ್ಟಕವಿಧಪ್ರಕೃ
ತಿಸ್ವಭಾವಾನ್ಜ್ಞಾತಾತದನ್ಯಇತಿಜೀವತಿಯೋಮಹಾತ್ಮಾ॥೨೪

ಟೀ॥ದೇಹತ್ರಯೇ-ಸ್ಥೂಲಶರೀರವೆಂಬ ಸೂಕ್ಷ್ಮಶರೀರವೆಂಬ ಕಾರಣಶರೀರವೆಂಬ ದೇಹತ್ರಯದಲ್ಲಿ, ಪ್ರಥಿತಷೋಡಶಧಾವಿಕಾರಾನ್-ಪ್ರಥಿತ-ಪ್ರಸಿದ್ಧವಾದ, ಷೋಡಶಧಾ-ಹದಿನಾರುಪ್ರಕಾರವಾದ, ವಿಕಾರಾನ್-ದೇಹವಿಕಾರಂಗಳನು, (ಅವಾವುವೆಂದೊಡೆ-ದೇಹೋತ್ಪತ್ತಿಗೆ ಕಾರಣನಾದ ತಂದೆಯಿಂಕೊಂಡ ಮಧುರಾಮ್ಲಲವಣತಿಕ್ತಕಟುಕಷಾಯವೆಂಬ ಷಡ್ವಿಧಾಹಾರವೇ ಉದರಾಗ್ನಿಯಿಂ ಪಚಿಸಿ ರಸವಾಗಲು, ಆರಸದಿಂ ಶೋಣಿತಂಮೊದಲಪ್ಪುದು. ಆ ಶೋಣಿತದಿಂ ಮಾಂಸಂ, ಆ ಮಾಂಸದಿಂ ಮೇದಸ್ಸು. ಆ ಮೇದಸ್ಸಿನಿಂದಸ್ಥಿ, ಆ ಅಸ್ಥಿಯಿಂಮಜ್ಜೆ, ಆ ಮಜ್ಜೆಯಿಂ ಶುಕ್ಲ, ಮಾಶುಕ್ಲವೇ ಸ್ತ್ರೀಯ ಋತುಕಾಲದ ರಕ್ತದೊಳ್ಕೂಡಲ್ ಏಕರಾತ್ರಿಯೊಳ್ ಕಲಲವಪ್ಪುದು. ಸಪ್ತರಾತ್ರೆಗೆ ಬುದ್ಬುದವೆನಿಪುದು. ಒಂದುಮಾಸಕ್ಕೆ ಪಿಂಡವೆನಿಪುದು. ಮಾಸದ್ವಯಕ್ಕೆ ಶಿರಂತೋರ್ಪುದು. ಮಾಸತ್ರಯಕ್ಕೆ ಪದಂ ತೋರುಗುಂ. ಮಾಸನಾಲ್ಕಕ್ಕೆ ಉದರಕಟಪ್ರದೇಶಂಗಳ್ಕಾಣಿಪುವು. ಮಾಸವೈದಕ್ಕೆ ಬೆನ್ನುಕಾಣಲಪ್ಪುದು. ಮಾಸವಾರಕ್ಕೆ ಶ್ರೋತ್ರನೇತ್ರಘ್ರಾಣಂಗಳ ರಂಧ್ರಂಗಳ್ಕಾಣಲಪ್ಪುವು. ಮಾಸವೇಳಕ್ಕೆ ಜೀವನ ಸಂಚಾರವಪ್ಪುದು. ಈ ಹದಿನಾರೂ ಸ್ಥೂಲದೇಹವಿಕಾರಂಗಳೆನಿಸಿಕೊಂಬುವು.) ಸಪ್ತದಶಧಾ-ಜ್ಞಾನೇಂದ್ರಿಯಂಗಳೈದು ಕರ್ಮೇಂದ್ರಿಯಂಗಳೈದು ಪ್ರಾಣಾದಿವಾಯುಗಳೈದು ಮನಬುದ್ಧಿಗಳೆರಡು ಅಂತೂ ಹದಿನೇಳು ಪ್ರಕಾರವಾದಂಥ, ಲಿಂಗಾನಿ-ಲಿಂಗಶರೀರಸಂಜ್ಞೆಯುಳ್ಳಂತಹುವನ್ನೂ, ನವಧಾ-ಶಬ್ದಾದಿವಿಷಯಂಗಳೈದು ಅಂತಃಕರಣ ನಾಲ್ಕು ಈವಿಷಯಂಗಳು ಕೂಡಿ ಒಂಭತ್ತಾಗಿರ್ಪಂಥ, ಪದಾರ್ಥಾನ್-ಪದಾರ್ಥಂಗಳನು, ಅಷ್ಟಕವಿಧಪ್ರಕೃತಿಸ್ವಭಾವಾನ್-ಅಷ್ಟಕವಿಧ-ಅವ್ಯಕ್ತ ಬುದ್ಧಿ ಅಹಂಕಾರ ತನ್ಮಾತ್ರಾಪಂಚಕಂಗಳೆಂದೆಂಟುಪ್ರಕಾರವಾದ, ಪ್ರಕೃತಿಸ್ವಭಾವಾನ್-ಕಾರಣಸ್ವರೂಪಗಳನು, ಜ್ಞಾತ್ವಾ-ಅರಿದು, ಆತ್ಮಾನಂ-ತನ್ನನು, ತದನ್ಯಇತಿ-ಅವರದೆಸೆಯಿಂದನ್ಯನೆಂದು, ಯಃ-ಆವಾತನು, ಜೀವತಿ-ಜೀವಿಸುತ್ತಿದ್ದಾನೋ, ಸಃ-ಆತನೇ, ಮಹಾತ್ಮಾ-ಮಹಾಪುರುಷನು. (ತಾತ್ಪರ್ಯ—"ಶ್ರು॥ ಕಥಂತುತದ್ವಿಜಾನೀಯಂಕಿಮುಭಾತಿವಿಭಾತಿಚ । ತತ್ಕಾರಣಂಸಾಂಖ್ಯಯೋಗಾಭಿಪನ್ನಂಜ್ಞಾತ್ವಾದೇವಂಮುಚ್ಯತೇಸರ್ವಪಾಶೈಃ" ಎಂಬ ಶ್ರುತಿಪ್ರಮಾಣದಿಂ ದೇವತ್ವ ಗಳ ಹೋರೆಯನಳಿದುಳಿದು ನಿಂದ ಸ್ವರೂಪವ ನರಿದಾತನೇ ಮಹಾಪುರುಷನೆಂಬುದಭಿಪ್ರಾಯಂ) ॥೧೯॥

ಸೂ॥ ವಿಧಿಮುಖದಿಂ ಪೇಳ್ದ ಆತ್ಮಸ್ವರೂಪಮಂ ಮರಳಿ ಶ್ರುತಿವಾಕ್ಯದ್ವಯದಿಂ ಪೇಳ್ದಪ:—

ಶ್ಲೋ॥ ಸತ್ಯಂಜ್ಞಾನಮನಂತಂಯದ್ಬ್ರಹ್ಮೇತಿವದತಿಶ್ರುತಿಃ ।
ಮುಕ್ತಾನಂದಸ್ವರೂಪಾಚನನುತತ್ತ್ವಮಸಿಸ್ಥಿತಂ ॥೨೦॥

ಟೀ॥ತತ್-ಆಪ್ರಸಿದ್ಧವಾದಂಥ, ಬ್ರಹ್ಮ-ಬ್ರಹ್ಮವು, ಸತ್ಯಂ-ಸದ್ರೂಪವಾಗಿರ್ಪಂ

ತಹುದು, (ಅನ್ಯೋನ್ಯಾಧ್ಯಾಸವಿಲ್ಲದಿಹುದರಿಂ ಸದ್ರೂಪವೆಂಬುದಭಿಪ್ರಾಯಂ) ಜ್ಞಾನಂ-ಬೋಧರೂಪವಾಗಿರ್ಪಂತಹುದು, ಅನಂತಂ-ದಿಕ್ಕಾಲಂಗಳೆಂಬ ಪರಿಮಿತಿಯಿಲ್ಲದಿರ್ಪಂತಹುದು, ಇತಿ-ಹೀಗೆಂದು, ಶ್ರುತಿಃ-ವೇದವು, ವದತಿ-ಹೇಳುತ್ತಿದ್ದೀತು. ನನು-ಎಲೈ ಶಿಷ್ಯನೆ, ಮುಕ್ತಾನಂದಸ್ವರೂಪಾಚ-ಬ್ರೈಂಪವಾನಂಪದಿಂದ ಪಡಲ್ಪಟ್ಟ ಸ್ವರೂಪವುಳ್ಳಂಥ; ತತ್- ಆ ವಸ್ತುವೇ, ತ್ವಂ-ನೀನು, ಅಸಿ-ಆಗುತ್ತಿದ್ದೀಯೆ, ಇತಿ-ಹೀಗೆಂದು, ಸ್ಥಿತಂ-ನಿಶ್ಚೈಸಲ್ಪಟ್ಟತು. ॥೯॥

ಸೂ॥ ತನ್ನಿಂದನ್ಯವಾದ ಸಕಲ ಪ್ರಪಂಚವಂ ನಿಷೇಧಮುಖದಿಂ ವಿಲಕ್ಷಿಸಿ ಪೌನಃಪುನ್ಯದಿಂ ತನ್ನನೇ ತಿಳಿಯಲ್ಬೇಕೆಂದು ಪೇಳ್ದಪಂ:—

ಶ್ಲೋ॥ ನೈತದಹಂನೈತದಹಂಚೇತಿಯದನ್ಯದ್ವಿಭಾವಯಾತ್ಮಾನಂ ।
ಸೋಹಮಿತಿಸೋಹಮಿತ್ಯನುಭಾವಯಸತ್ಯಂತ್ವಮಾತ್ಮಾನಂ ॥

ಟೀ॥ ಏತತ್-ಈ ದೃಶ್ಯಮಾನವಾದ ಪ್ರಪಂಚವು, ಅಹಂ-ನಾನು, ನ-ಅಲ್ಲ, ಅಹಂಚ-ಸಕಲಸಾಕ್ಷಿಕನಾದ ನಾನೂ, ಏತತ್-ಈಪ್ರಪಂಚವು, ನ-ಅಲ್ಲ, ಇತಿ-ಹೀಗೆಂದು ಚೇತನಾಚೇತನಂಗಳ ಅಧ್ಯಾಸನಿವೃತ್ತಿಯಿಂದೆ, ಆತ್ಮಾನಂ-ತನ್ನನು, ಯದನ್ಯತ್-ಆವುದಾನೊಂದು ಪ್ರಪಂಚದಿಂ ದನ್ಯವಾಗಿ, ವಿಭಾವಯ-ತಿಳಿ, ಸೋಹಮಿತಿ-ಸಃ-ಆತತ್ವತಾತ್ವಿಕಂಗಳಿಗೆ ಸಾಕ್ಷಿಕನಾಗಿರ್ಪಂಥಾತನೇ, ಅಹಮಿತಿ-ನಾನುಯೆಂದು, ಸಃ-ಆ ಅನುಗ್ರಹಶಕ್ತಿಯಿಂದಭಿವ್ಯಕ್ತವಾದ ಶಿವತತ್ವವುಳ್ಳಾತನೇ, ಅಹಮಿತಿ-ನಾನುಯೆಂದು, ತ್ವಂ-ನೀನು, ಆತ್ಮಾನಂ-ಸ್ವಸ್ವರೂಪವನು, ಸತ್ಯಂ-ಸತ್ಯವಾಗಿ, ಅನುಭಾವಯ-ಅಪರೋಕ್ಷದಿಂತಿಳಿ. (ತಾತ್ಪರ್ಯ-ವೈಕೃತಪ್ರಾಣಾಯಾಮಮಂತ್ರದರ್ಥಚಿಂತೆಯಿಂ ತತ್ವಜ್ಞಾನವೇ ಮೋಕ್ಷಸಾಧನ ವಪ್ಪುದೆಂಬುದಭಿಪ್ರಾಯಃ) ॥೧೦॥

ಸೂ॥ " ಅಜ್ಞಾತಸ್ಯಕರಣಾಸಂಭವಾತ್ " ಎಂಬ ನ್ಯಾಯದಿಂ ಮುಂದೆ ಪೇಳ್ವ ತಾರಕಾಭ್ಯಾಸಪ್ರವೃತ್ತಿಗೆ ತತ್ವಜ್ಞಾನವೇ ನಿಮಿತ್ತವಪ್ಪುದರಿಂ ದೀತತ್ವಜ್ಞಾನವೇ ಮೋಕ್ಷಸಾಧನವೆಂದು ಸಮರ್ಥಿಸುತ್ತೆ ಈಸಾಂಖ್ಯಯೋಗಪರಿಸಮಾಪ್ತಿಯಂ ಮಾಡಿದಪಂ:-

ಶ್ಲೋ॥ ಹೃದಿಜ್ಞಾನಾದೇವಮೋಕ್ಷಇತ್ಯೇತದ್ವಾಕ್ಯಮಾದರಾತ್ ।
ಗೃಹೀತ್ವಾಜ್ಞಾನಯೋಗೇಽಸ್ಮಿನ್ಸಮಾಹಿತಮನಾಭವ ॥೧೧॥

ಟೀ॥ ಜ್ಞಾನಾದೇವ-ಜ್ಞಾನದತ್ತಣಿಂದವೇ ಮೋಕ್ಷಇತಿ-ಮೋಕ್ಷವೆಂಬ, ಏತದ್ವಾಕ್ಯಂ-ಈವಚನವನು, ಆದರಾತ್-ಪ್ರೀತಿಯಪೆಸೆಯಿಂದೆ, ಹೃದಿ-ಹೃದಯದಲ್ಲಿ, ಗೃಹೀತ್ವಾ-ಗ್ರಹಿಸಿ, ಅಸ್ಮಿನ್-ಈ ಪೂರ್ವೋದಿತವಾದ, ಜ್ಞಾನಯೋಗೇ-ತತ್ವಜ್ಞಾನರೂಪವಾದ ಸಾಂಖ್ಯಯೋಗದಲ್ಲಿ, ಸಮಾಹಿತಮನಾಃ-ಚೆನ್ನಾಗಿರಿಸಲ್ಪಟ್ಟ ಮನವುಳ್ಳಾತನು, ಭವ-

ಆಗು. (ತಾತ್ಪರ್ಯ-ಪ್ರಕೃತಿಪುರುಷ ವಿವೇಕಜ್ಞಾನದಿಂದಲೇ ಮುಕ್ತಿಯೆಂಬ ಸಾಂಖ್ಯರ ಮತವನು "ಇದಂರಜತಂ" ಎಂಬ ಭ್ರಾಂತಿಯು "ನೇದಂರಜತಂ" ಎಂಬು ತ್ತರಜ್ಞಾನದಿಂ ಕೆಡುವಂತೆ "ಜೀವೋಽಹಂ" ಎಂಬ ಮಿಥ್ಯಾಜ್ಞಾನವೂ "ಅಹಂಬ್ರಹ್ಮ" ವೆಂಬ ತಥ್ಯಜ್ಞಾನಮಾತ್ರದಿಂ ಕೆಟ್ಟುದೇ ಮೋಕ್ಷವೆಂಬ ದ್ವೈತಮತಮಂ ನಿರಾಕರಿಸಿ, "ಅಥಾತ್ಮಮಲಮಾಯಾಖ್ಯಕರ್ಮಬಂಧವಿಮುಕ್ತಯೇ । ವ್ಯಕ್ತಯೇಶಿವ ತತ್ವಸ್ಯಶಿವಾದ್ಜ್ಞಾನಂಪ್ರವರ್ತತೇ" ಎಂಬ ಶಿವಾಗಮೋಕ್ತಿಯಿಂದೆ ತತ್ವವಿವೇಕಮಂ ನುಳ್ಳಶಿವಜ್ಞಾನದಿಂದಲೇ ಮೋಕ್ಷವಪ್ಪುದೆಂದು ನಿಶ್ಚೈಸಲ್ಪೇಕೆಂಬುದಭಿಪ್ರಾಯಂ.॥೩೦

ಸೂ॥ "ಪಾಶಾವಲೋಕನಂತ್ಯಕ್ತ್ವಾಸ್ವರೂಪಾಲೋಕನಂಹಿಯತ್ । ಆತ್ಮವ್ಯಾಪ್ತಿರ್ಭವೇದೇಷಾಶಿವವ್ಯಾಪ್ತಿರತೋಽನ್ಯಥಾ" ಎಂಬಾಗಮಗ್ರಂಥಾನುಸಾರದಿಂದಾತ್ಮವ್ಯಾಪ್ತಿಯಾದ ಸ್ವಸ್ವರೂಪಸಿದ್ಧಿಯಂ ಸಾಂಖ್ಯಯೋಗದಿಂ ಪೇಳ್ದು ಶಿವಧ್ಯಾನವೆನಿಸುವ ಶಿವವ್ಯಾಪ್ತಿರೂಪವಾದ ತಾರಕಯೋಗಮಂ ಪೇಳ್ವೆನೆಂದು ಪ್ರತಿಜ್ಞೆಯಂಮಾಡಿದಪಂ:-

ಶ್ಲೋ॥ ಅತಃಪರತರಂಗುಹ್ಯಂದೃಷ್ಟಪ್ರತ್ಯಯಸಂಯುತಂ ।
ಮಮಾನುಭವಸಂಸಿದ್ಧಂಯೋಗಂಪ್ರಾಣಸಖೇಶೃಣು ॥೩೧॥

ಟೀ॥ ಭೋಪ್ರಾಣಸಖೇ-ಎಲೆ ಪ್ರಾಣಸ್ನೇಹಿತನಾದ ಶಿಷ್ಯನೆ, ಅತಃ-ಈಸಾಂಖ್ಯಯೋಗದುಪದೇಶದಿಂದೆ, ಪರತರಂ-ಅತ್ಯಂತೋತ್ತರವಾದಂಥ, (ಶಿವವ್ಯಾಪ್ತಿರೂಪದಿಂದ ವಿಶಿಷ್ಟವೆಂಬುವಭಿಪ್ರಾಯಂ) ಗುಹ್ಯಂ- ಗೋಪ್ಯವಾದಂಥ, (ಅತಿರಹಸ್ಯವಪ್ಪುದರಿಂದ ಅಯೋಗ್ಯರ್ಗೆ ಪ್ರಕಾಶಿಸಲ್ಪಾರದೆಂಬುದರ್ಥಂ) ದೃಷ್ಟಪ್ರತ್ಯಯಸಂಯುತಂ-ದೃಷ್ಟ-ಪ್ರತ್ಯಕ್ಷವಾದ, ಪ್ರತ್ಯಯ-ಪ್ರಮಾಣದಿಂದ, ಸಂಯುತಂ-ಕೂಡಲ್ಪಟ್ಟಂಥ, (ಅನುಮಾನಾದಿಪ್ರಮಾಣಂಗಳಂತೆ ಪರೋಕ್ಷಾರ್ಥಸಾಧಕವಲ್ಲವೆಂಬುವರ್ಥಂ)ಮಮ-ಎನ್ನ, ಅನುಭವಸಂಸಿದ್ಧಂ-ಅನುಭವ-ಅಪರೋಕ್ಷಜ್ಞಾನದಿಂದ, ಸಂಸಿದ್ಧಂ-ಚೆನ್ನಾಗಿ ಸಿದ್ಧವಾಗಿರ್ಪಂಥ, (ಅತಿರಹಸ್ಯವಾಗಿ ಶಾಸ್ತ್ರೋದಿತವಾದ ಸ್ವಾನುಭೂತಿಪ್ರಮಾಣಸಿದ್ಧವೆಂಬುದರ್ಥಂ) ಯೋಗಂ-ಈ ತಾರಕಯೋಗವನು, ಶೃಣು-ಕೇಳು. (ತಾತ್ಪರ್ಯ-ಮಾಯಾಭುವನಾಂತರ್ಗತರಾದ ಮುಮುಕ್ಷುಜನರಿಂ ಪರಶಿವಂಗೆ ಪರಮೋಪಾಧಿಗಳಾಗಿ ಶುದ್ಧಭುವನಾಂತರ್ಗತಂಗಳಾದ ನಾದಬಿಂದ್ವಾದಿಗಳಿಂತಾರಕಯೋಗದಿಂ ಕಾಣಲತಿಸಮೀಪವಪ್ಪ ಪ್ರಕಾರವೆಂತೆಂದೊಡೆ-ಪೃಥಿವ್ಯಾದಿಸ್ಥೂಲಪಂಚಭೂತಗಳಲ್ಲಿ ವಿದ್ಯಾತತ್ವವಾಸಿಗಳಾದ ಸಪ್ತಕೋಟಿಮಹಾಮಂತ್ರಂಗಳು ವ್ಯಾಪಿಸಿರ್ಪುವು. ಸೂಕ್ಷ್ಮದೇಹಾರಂಭಕಂಗಳಾದ ಸೂಕ್ಷ್ಮಪಂಚಭೂತಂಗಳಲ್ಲಿ ಈಶ್ವರತತ್ವವಾಸಿಗಳಾದ ಮಂತ್ರೇಶ್ವರರಿರ್ಪರು. ಶಬ್ದಾದಿಪಂಚತನ್ಮಾತ್ರೆಗಳಲ್ಲಿ ಸದಾಶಿವತತ್ವವಾಸಿಯಾದ ಪಂಚಮಂತ್ರತನುವಾದ ಸದಾಶಿವನಿರ್ಪನು. ಕರಣವಶಕದಿಂ ಮನದಿಂ ಕೂಡಿದ ಅಹಂಕಾರತತ್ವದಲ್ಲಿ ಬಿಂದುಕಳಾರೂಪವಾದ ನಿವೃತ್ತಿಕಲೆಯಿರ್ಪುದು. ಧರ್ಮಾದಿಭಾವಾಷ್ಟಕದಿಂಪ್ರತ್ಯಯದಿಂಮಂತ್ರಾಂ

ಕೂಡಿದ ಬುದ್ಧಿತತ್ವದಲ್ಲಿ ಬಿಂದುಪ್ರತಿಷ್ಠಾ ಕಲೆಯಿರ್ಪುದು. ಗುಣತತ್ವದಲ್ಲಿ ಬಿಂದುಕಲೆಯಾದವಿದ್ಯಾಕಲೆಯಿರ್ಪುದು. ಪ್ರಕೃತಿತತ್ವದಲ್ಲಿ ಬಿಂದುಕಲೆಯಾದ ಶಾಂತಿಕಲೆಯಿರ್ಪುದು. ಪುರುಷತತ್ವದಲ್ಲಿ ಸ್ಥೂಲನಾದಸ್ವರೂಪವಾದ ಇಂಧಿಕೆಯೆಂಬ ಕಲೆಯಿರ್ಪುದು. ರಾಗತತ್ವದಲ್ಲಿ ಸ್ಥೂಲನಾದಸ್ವರೂಪವಾದ ದೀಪಿಕೆಯೆಂಬ ಕಲೆಯಿರ್ಪುದು. ವಿದ್ಯಾತತ್ವದಲ್ಲಿ ಸ್ಥೂಲನಾದಸ್ವರೂಪವಾದ ರೋಚಿಕೆಯೆಂಬ ಕಲೆಯಿರ್ಪುದು. ನಿಯತಿತತ್ವದಲ್ಲಿ ಸ್ಥೂಲನಾದಸ್ವರೂಪವಾದ ಮೋಚಿಕೆಯೆಂಬ ಕಲೆಯಿರ್ಪುದು. ಕಾಲತತ್ವದಲ್ಲಿ ಸ್ಥೂಲನಾದಸ್ವರೂಪವಾದ ಊರ್ಧ್ವಗೆಯೆಂಬ ಕಲೆಯಿರ್ಪುದು. ಸಕಲ ತತ್ವಸಮಷ್ಟಿರೂಪವಾದ ಕಲಾತತ್ವದಲ್ಲಿ ಶುದ್ಧ ಸಕಲತತ್ವಸಮುದಾಯರೂಪವಾದ ದಿವ್ಯಾನಂದಸ್ವರೂಪವಾದ ಸೂಕ್ಷ್ಮನಾದವಿರ್ಪುದೆಂಬ ಈಪರಮರಹಸ್ಯಾರ್ಥಕ್ಕೆ ಸಂಮತಿ:—

ಗ್ರಂಥ॥ ನಾದಸ್ಸೂಕ್ಷ್ಮಃಕಲಾಕಾಲರಾಗಯುಗ್ಮೇಸಪೂರುಷೇ । ಸ್ಥೂಲಃಪಂಚಕಲೋನಾದಃಪಂಚತತ್ವಾಶ್ರಯೋಮತಃ । ಪ್ರಧಾನಾದಿಚತುರ್ಗ್ರಂಥಿನಿರ್ಭಿನ್ನಂಮುಕ್ತತತ್ವಲಃ । ಸರ್ವೇಮನೋಮುಖಾದೇವಾಬುದ್ಧ್ಯಾಭಾವಾದಯಸ್ಥಿತಾಃ । ಪಂಚಮಂತ್ರಾನುರ್ದೇವಸ್ಸ್ಥಿತಸ್ತನ್ಮಾತ್ರಪಂಚಕೇ। ಸೂಕ್ಷ್ಮಭೂತೇಷುಮಂತ್ರೇಶಾಃಮಂತ್ರಾಸ್ಸ್ಥೂಲೇಷುಸಂಸ್ಥಿತಾಃ ॥ ಎಂಬುದಾಗಿ, ಪರಮಾಪ್ತನಾದ ಪರಶಿವಂ ನಾದಬಿಂದ್ವಾದಿರೂಪದಿಂ ಮುಮುಕ್ಷುಜನಕ್ಕೆ ಅತಿಸಮೀಪನಪ್ಪುದರಿಂದೆ " ಚಕ್ಷುರ್ವೈಬ್ರಹ್ಮಪರಮಂಬ್ರಹ್ಮನೈನಂಚಕ್ಷುರ್ಜಹಾತಿ " ನೇತ್ರವೇಬ್ರಹ್ಮವು, ಆ ಪರಬ್ರಹ್ಮವು ಈ ನೇತ್ರಮಂ ಬಿಟ್ಟರದು. " ಶ್ರೋತ್ರಂವೈಬ್ರಹ್ಮಪರಮಂ ಬ್ರಹ್ಮನೈನಂಶ್ರೋತ್ರಂಜಹಾತಿ " ಶ್ರೋತ್ರವೇ ಬ್ರಹ್ಮವು. ಆ ಪರಬ್ರಹ್ಮವು ಈ ಶ್ರೋತ್ರಮಂ ಬಿಟ್ಟರದು. " ಮನೋವೈಬ್ರಹ್ಮಪರಮಂ ಬ್ರಹ್ಮನೈನಂಮನೋಜಹಾತಿ " ಮನವೇ ಬ್ರಹ್ಮವು, ಈ ಮನಮಂ ಪರಬ್ರಹ್ಮಬಿಟ್ಟರದು. " ಹೃದಯಂವೈಬ್ರಹ್ಮನೈನಂ ಹೃದಯಂ ಜಹಾತಿ " ಹೃದಯವೇ ಬ್ರಹ್ಮವು, ಈ ಹೃದಯಮಂ ಪರಬ್ರಹ್ಮವು ಬಿಟ್ಟರದು. ಎಂಬ ಶ್ರುತಿಪ್ರಮಾಣದಿಂ ಪರಬ್ರಹ್ಮವೇ ನೇತ್ರಾದಿಗಳಿಗೆ ಸಾಕ್ಷಾತ್ಕಾರವಪ್ಪುದೆಂದಭಿಪ್ರಾಯಂ) ॥೩೦॥

ಸೂ॥ ಈ ಪೂರ್ವೋದಿತವಾದ ಯೋಗತ್ರಯದಿಂ ಬ್ರಹ್ಮಸಾಕ್ಷಾತ್ಕಾರವಿಲ್ಲನಾಗಿ ಮುಂದೆ ಪೇಳ್ವ ತಾರಕಯೋಗವೇ ವಿಶೇಷವೆಂದು ಸಮರ್ಥಿಸುತ್ತಿರ್ದಪಂ:—

ಶ್ಲೋ॥ ಮಂತ್ರೇಣಲಯಯೋಗೇನಹಠಯೋಗೇನಸರ್ವದಾ ।
ಯಾವದ್ಬ್ರಹ್ಮನಜಾನಾತಿತಾವತ್ಕ್ಲಿಶ್ಯಂತಿಪಂಡಿತಾಃ ॥೩೧॥

ಟೀ॥ ಪಂಡಿತಾಃ-ಅರಿಯಬಲ್ಲತನದಭಿಮಾನಿಗಳು, ಮಂತ್ರೇಣ-ಪ್ರಾಕೃತಪ್ರಾಣಾಯಾಮರೂಪವಾದ ಮಂತ್ರಯೋಗದಿಂದವೂ, ಲಯಯೋಗೇನ-ವೈಕೃತಪ್ರಾಣಾಯಾಮರೂಪವಾದ ಲಯಯೋಗದಿಂದವೂ, ಹಠಯೋಗೇನ-ಕೇವಲಕುಂಭಕರೂಪವಾದ

ಹಠಯೋಗದಿಂದವೂ, ಸರ್ವದಾ-ಎಲ್ಲಾಗವೂ, ಯಾವತ್-ಎಲ್ಲಿಯುವರ್ಯಂತ, ಬ್ರಹ್ಮ-ತಾರಕಬ್ರಹ್ಮವನು, ನಜಾನಾತಿ-ಅರಿವುತ್ತಿರರೋ, ತಾವತ್-ಅಲ್ಲಿಪರ್ಯಂತ, ಕ್ಲಿಶ್ಯಂತಿ-ದುಃಖಂಬಡುತ್ತಿರ್ಪರು. (ತಾತ್ಪರ್ಯ-ಈ ಸಕಲ ಯೋಗೀಶ್ವರರ ಮನದಲ್ಲಿಯು ಹಠಯೋಗಾಭ್ಯಾಸಪ್ರಯಾಸದಿಂದಾದ ವ್ಯಥೆಯು ಬ್ರಹ್ಮಸಾಕ್ಷಾತ್ಕಾರದಿಂ ದಳಿವುದಾಗಿ, ಆ ಬ್ರಹ್ಮವೇ ಕಲೆಯೆಂದು ನಾದವೆಂದು ಬಿಂದುವೆಂದು ಮೂರುಪ್ರಕಾರವಪ್ಪುದಾಗಿ, ಆ ಕಲೆಯೇ ತಾವರೆಯ ನೂಲಿನಂತೆ ಪರಮಸೂಕ್ಷ್ಮವಾಗಿ ಹರಿಹಂಚಿಲ್ಲದೆ ಬ್ರಹ್ಮರಂಧ್ರಸ್ಥಾನದೊಳ್ ದಿವ್ಯಪ್ರಕಾಶರೂಪದಿಂ ಕಾಣುವುದು. ಆಕಲೆಯೇ ಬಲಿದು ಅಂಗುಷ್ಠಮಾತ್ರವಾದ ದೀಪಜ್ವಾಲೆಯಾಕಾರದಿಂ ಭ್ರೂಮಧ್ಯಸ್ಥಾನದೊಳ್ಕಾಣಿಸಲದೇ ನಾದವೆನಿಪುದು. ಆನಾದವೇ ಬಲಿದು ಅರ್ಧಚಂದ್ರಾಕಾರವಂ ತಾಳ್ದು ಮುಂದೆಸೆಳ್ವ ಪೂರ್ಣೇಂದುಮಂಡಲಾದ್ಯಾಕಾರಂಗಳನೊಳಕೊಂಡು ನೇತ್ರಮಧ್ಯದೊಳಿರಲದೇ ಬಿಂದುವೆನಿಪುದಾಗಿ, ಈ ಸ್ವರೂಪಂಗಳ ನುತ್ತರೋತ್ತರವಾಗಿ ಕಾಣಲಾತನೇ ರಾಜಯೋಗಿಯೆನಿಸಿಕೊಂಬನೆಂಬುದಭಿಪ್ರಾಯಂ. "ಅರ್ಧಚಂದ್ರಾಕೃತಿರ್ಬಿಂದುರ್ನಾದೋದೀಪಶಿಖಾಕೃತಿಃ...... ಅಂಗುಷ್ಠಮಾತ್ರಮಚಲಂದೀಪ್ಯಮಾನಂಸಮುತತಃ । ನೀವಾರಶೂಕವತ್ತನ್ವೀಶಂಬಿಸಸೂತ್ರಾಭಮೇವಚ" ಎಂದುದಾಗಿ. ॥೩೭॥

ಸೂ॥ "ಮೋಚಯತಿ ದ್ರಾವಯತೀತಿಮುದ್ರಾ" ಎಂಬ ವಾಕ್ಯಾನುಸಾರದಿಂದೆ ಅಜ್ಞಾನಾಂಧಕಾರವಂ ತೊಲಂಗಿಸಿ ಶಿವಾನಂದಪ್ರವಾಹವಂ ನಿರಾಯಾಸದಿಂ ಪಾಳ್ವ ರಾಜಯೋಗದ ಮುಖ್ಯ ಮುದ್ರಾಸ್ವರೂಪವನಂ ಸೂಚಿಸುತ್ತಿರ್ದಪಂ:—

ಶ್ಲೋ॥ ನೇತ್ರೇನಿಮೀಲಿತೇನಿತ್ಯಂಕಿಂಚಿದುನ್ಮೀಲಿತೇತಥಾ ।
ಯೋಮನಶ್ಚಕ್ಷುಷಾಬ್ರಹ್ಮಪಶ್ಯತೀತಿಸಯೋಗಿರಾಟ್ ॥೩೮॥

ಟೀ॥ ನೇತ್ರೇ-ಸಕಲೇಂದ್ರಿಯಂಗಳಿಗೆ ಮುಖ್ಯವಾಗಿ ಜ್ಯೋತಿರ್ಮಂಡಲಾನ್ವಿತವಾದ ನೇತ್ರೇಂದ್ರಿಯವು, ನಿಮೀಲಿತೇ-ಅಂತರ್ಮುಖವಾಗಿ ಮುಗಿಯಲಾಗಿ, ಕಿಂಚಿತ್-ಅಲ್ಪಮಾತ್ರವಾಗಿ, ಉನ್ಮೀಲಿತೇ-ಅರ್ಧಾವಲೋಕನದಿಂ ನೋಡಲಾಗಿ, ಯಃ-ಆವಾತನು, ಮನಶ್ಚಕ್ಷುಷಾ-ಶುದ್ಧಸಾತ್ವಿಕರೂಪವಾದ ಮನೋನೇತ್ರಂಗಳಿಂದೆ, ನಿತ್ಯಂ-ಅನವರತವೂ, ತಥಾ-ಗುರೂಪದೇಶಪ್ರಕಾರದಿಂದವೇ, ಬ್ರಹ್ಮ-ತಾರಕಬ್ರಹ್ಮವನು, ಪಶ್ಯತಿ-ಕಾಣುತ್ತಿದ್ದಾನೋ, ಸಃ.ಆ ಯೋಗೀಶ್ವರನು, ಇತಿ-ಇದುಕಾರಣವಾಗಿ, ಯೋಗಿರಾಟ್-ರಾಜಯೋಗಿಯೆನಿಸಿಕೊಂಬನು. (ತಾತ್ಪರ್ಯ:— "ಶಿವಾರ್ಕಶಕ್ತಿದೀಧಿತ್ಯಾಸಮರ್ಥೀಕೃತಚಿದ್ದೃಶಾ । ಶಿವಂಶಕ್ತ್ಯಾದಿಭಿಸ್ಸಾರ್ಧಂಪಶ್ಯತ್ಯಾತ್ಮಗತಾವೃತಿಃ" ಎಂದುದಾಗಿ ಶುದ್ಧನಾದಾತಂಗೆ ಊರ್ಧ್ವಮುಖವಾಗಲೀದೃಷ್ಟಿಯೇ ಜ್ಞಾನದೃಷ್ಟಿಯಾಗಲಿದರಿಂ ಬ್ರಹ್ಮಸಾಕ್ಷಾತ್ಕಾರವಪ್ಪುದಾಗಿ, "ಯಏಷೋಂತರಕ್ಷಿಣಿಪುರುಷೋದೃಶ್ಯತಏಷಆತ್ಮೇತಿ,, ಈ ನೇತ್ರಮಧ್ಯದಲ್ಲಿ ಕಾಣಿಸುವ ಮೂರ್ತಿಯೇ ಪರಮಾತ್ಮನೆಂಬಶ್ರುತಿಯಿಂಥವೂ,

" ಉದಕೇಽಹಿವೇಕ್ಷ್ಯತಾಂ ,, ಉದಕಾಶ್ರಯದಲ್ಲಿ ಪರಮಾತ್ಮನಂ ಕಾಣ್ಬುದು ಎಂಬ ಶ್ರುತಿಪ್ರಮಾಣದಿಂದವೂ, ತಾರಕಬ್ರಹ್ಮವನೀಲೋಚನಂಗಳಿಂ ಕಂಡಾತನೇ ರಾಜಯೋಗಿಯೆಂಬುದಭಿಪ್ರಾಯಂ. ॥೩೨॥

ಸೂ॥ ಅನಂತರದಲ್ಲಿ ಈದಿವ್ಯಮುದ್ರೆಯನೇ ವ್ಯಕ್ತವಾಗಿ ಪೇಳುತ್ತ ಅದರಿಂದಲೇ ಈ ತಾರಕಯೋಗಾಭ್ಯಾಸನುಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ॥ ಶಶಿಭಾಸ್ಕರಯೋರ್ಮಧ್ಯತಾರಯೋಸ್ಸ್ಥಿರತೇಜಸೋಃ ।
ಬಿಂದುದ್ವಯೋಶ್ಚ ಸಂಯೋಜ್ಯ ಬ್ರಹ್ಮತಾರಕಮಭ್ಯಸೇತ್ ॥

ಟೀ॥ ಶಶಿಭಾಸ್ಕರಯೋಃ-ಚಂದ್ರಸೂರ್ಯರೆಂಬಹೆಸರುಳ್ಳವಾಮದಕ್ಷಿಣನೇತ್ರಂಗಳಲ್ಲಿ, ಮಧ್ಯತಾರಯೋಃ-ಮಧ್ಯದಲ್ಲಿಉ ತಾರೆಗಳಾಗಿರ್ಪಂಥ, ಸ್ಥಿರತೇಜಸೋಃ-ಊರ್ಧ್ವಮುಖ ಮಪ್ಪುದರಿಂದೆ ಚಲಿಸದ ದೀಪ್ತಿಯುಳ್ಳಂಥ, ಬಿಂದುದ್ವಯೋಶ್ಚ-ಮೂಲಪ್ರಕೃತಿರೂಪಂಗಳಾದ ಜೀವಚೈತನ್ಯಸೂತ್ರಕ್ಕೆ ಮುಖ್ಯಾಧಾರಂಗಳಾದ ಅಲೌಕಿಕವಸ್ತುಸಾಕ್ಷಾತ್ಕಾರ ಕಾರಣವಾದ ಪರಮಸೂಕ್ಷ್ಮದ್ವಾರಂಗಳಿಂ ಕೂಡಿದ ಬಿಂದುದ್ವಯಂಗಳ, ಸಂಯೋಜ್ಯ-ಗುರುಪದೇಶದಿಂದ ಸಮ್ಯಕ್ಕಾಗಿ ಸಂಬಂಧಿಸಿ, ಬ್ರಹ್ಮತಾರಕಂ-ತಾರಕಬ್ರಹ್ಮವನು, ಅಭ್ಯಸೇತ್-ಅಭ್ಯಾಸನಂಮಾಳ್ಪುದು. (ತಾತ್ಪರ್ಯ:—"ತಾರೇಜ್ಯೋತಿಷುಸಂಯೋಜ್ಯಕಿಂಚಿದುನ್ನಮಯೇದ್ಭ್ರುವ್ । ಪೂರ್ವಯೋಗಸ್ಯಮಾರ್ಗೋಯಮುನ್ಮನೀಕರಣಂಕ್ಷಣಾತ್ ॥ ಕೃಷ್ಣಸ್ವಚ್ಛಸ್ತುಯೋನಿತ್ಯಂ ನೇತ್ರಮಧ್ಯೇವ್ಯವಸ್ಥಿತಃ। ಸಬಿಂದುರಿತಿವಿಜ್ಞೇಯೋಯತ್ರಾತ್ಮಾದೃಶ್ಯತೇಸ್ಥಿತಃ" ಎಂಬುದಾಗಿ, "ಇಂದೋಹವೈನಾಮಾವೇಷಯೋಯಂದಕ್ಷಿಣೇಕ್ಷಸ್ತಂವಾಯೇತಮಿಂದಸಂತಮಿಂದ್ರಇತ್ಯಾಚಕ್ಷತೇಪರೋಕ್ಷೇಣ"—ದಕ್ಷಿಣನೇತ್ರದ ಜ್ಯೋತಿರ್ಮಂಡಲಮಧ್ಯದಲ್ಲಿ ಪ್ರತ್ಯಕ್ಷರೂಪದಿಂದಿರ್ಪ ಪರಮಾತ್ಮನೇ ಪತಿಯೆಂಬುದು ಈ ಶ್ರುತಿಯ ತಾತ್ಪರ್ಯ. "ಅಥೈತದ್ವಾಮೇಕ್ಷಿಣಿಪುರುಷರೂಪಮೇಷಾಸ್ಯಪತ್ನೀವಿರಾಟ್ತಯೋರೇಷಸಂಸ್ತಾ "— ಈ ವಾಮನೇತ್ರಜ್ಯೋತಿರ್ಮಂಡಲ ಮಧ್ಯದಲ್ಲಿ ಜೀವಾತ್ಮನಿರ್ಪನಾಗಿ, ಈತನೇ ಆ ಪರಮಾತ್ಮಂಗೆ ಸತಿ; ಆ ಸತಿಪತಿಗಳ ಕೂಟವೇ ಐಕ್ಯವೆಂಬುದು ಈ ಶ್ರುತಿಯ ತಾತ್ಪರ್ಯವಪ್ಪುದರಿಂದೀತಾರಕಮಂಡಲಂಗಳ ಯೋಗವೇ ತತ್ತ್ವಮಸ್ಯಾದಿಮಹಾವಾಕ್ಯಾರ್ಥ ಮಿದೇ ಜೀವಪರಮೈಕ್ಯ ಮಿದೇ ಲಿಂಗಾಂಗಸಂಬಂಧ ಮಿದೇ ಶಿವಜೀವರ ಸಾಮರಸ್ಯಸಾಧನವೆಂಬುದಭಿಪ್ರಾಯಂ. ॥೩೩॥

ಸೂ॥ ಈ ಲೋಕವ್ಯವಹಾರದೊಳಚೇತನಂಗಳಾದ ಚಿತ್ರಪ್ರತಿಮೆಗಳಲ್ಲಿಯ ನಯನಗತಂಗಳಾದ ಕೃಷ್ಣಕರ್ನಿಕಾರೇಖೆಯೇ ಅವಕೆ ಜೀವಕಳೆಯೆನಿಸಿಕೊಂಬುದಾಗಿ, ಈ ಜೀವನ ಚೈತನ್ಯಕೆ ಮುಖ್ಯಾಧಾರಂಗಳಾದ ತಾರಕದ್ವಯಯೋಗದಿಂ ಕಾಣ್ಬಲಕ್ಷ್ಯಮಂ ಮೂರುಪ್ರಕಾರದಿಂ ವಿಭಾಗಿಸಲ್ಬೇಕೆಂದು ಪೇಳ್ದಪಂ:—

ಶ್ಲೋ॥ ಬಾಹ್ಯಾಂತರ್ಮಧ್ಯಲಕ್ಷ್ಯೇಷುಬ್ರಹ್ಮದರ್ಶನತತ್ಪರಃ ।
ದೃಷ್ಟಾದೃಷ್ಟಸ್ವರೂಪಾಣಿನನುತಾನಿವಿಲೋಕಯ ॥೩೭॥

ಟೀ॥ ನನು-ಎಲೈಸ್ನೇಹಿತನೆ, ಬ್ರಹ್ಮದರ್ಶನತತ್ಪರಃ-ತಾರಕಬ್ರಹ್ಮಾವಲೋಕನದಲ್ಲಿ ತಾತ್ಪರ್ಯವುಳ್ಳಾತನಾಗಿ, ಬಾಹ್ಯಾಂತರ್ಮಧ್ಯಲಕ್ಷ್ಯೇಷು-ಬಾಹ್ಯಲಕ್ಷ್ಯಅಂತರ್ಲಕ್ಷ್ಯಮಧ್ಯಲಕ್ಷ್ಯಂಗಳಲ್ಲಿ, ತಾನಿ-ತನ್ನಿಂದನುಭೂತಂಗಳಾಗಿರ್ಪಂಥ, ದೃಷ್ಟಾದೃಷ್ಟಸ್ವರೂಪಾಣಿ-ಬಾಹ್ಯವಾಗಿ ದೃಷ್ಟರೂಪಗಳಾಗಿರ್ಪಂಥ ಅಭ್ಯಂತರಗಳಾಗಿ ಅದೃಷ್ಟರೂಪಗಳಾಗಿರ್ಪಂಥ ಮಧ್ಯಸ್ಥವಾಗಿ ದೃಷ್ಟಾದೃಷ್ಟಸ್ವರೂಪಂಗಳಾಗಿರ್ಪಂಥವನ್ನಾಗಿ, ವಿಲೋಕಯ-ನೋಡು. (ತಾತ್ಪರ್ಯ—"ಪ್ರಣೋಧನುಶ್ಶರೋಹ್ಯಾತ್ಮಾಬ್ರಹ್ಮತಲ್ಲಕ್ಷ್ಯಮುಚ್ಯತೇ । ಅಪ್ರಮತ್ತೇನವೇದ್ಧವ್ಯಂಶರವತ್ತನ್ಮಯೋಭವೇತ್"-ಪ್ರಣವೆಂಬ ಬಿಲ್ಲಿನೊಳಾತ್ಮನೆಂಬ ಬಾಣವಂ ತೊಟ್ಟು ಬ್ರಹ್ಮವೆಂಬ ಲಕ್ಷ್ಯವಂ ಮೋಸವಿಲ್ಲದಿಸಲಾ ಬಾಣ ಮಾಲಕ್ಷ್ಯದೊಳ್ಸಮರಸ ಮಪ್ಪುದೆಂಬ ಶೃತಿಪ್ರಮಾಣದಿಂ ಪೇಳ್ವ ಲಕ್ಷ್ಯದ ಸವಲೋಕನಂ ಗೈವುದೆಂಬುದಭಿಪ್ರಾಯಂ. ॥೩೭॥

ಸೂ॥ ಈ ಪೂರ್ವೋದಿತವಾದ ಲಕ್ಷ್ಯತ್ರಯಂಗಳೊಳಗೆ ಪ್ರಥಮದಲ್ಲಿ ಅಂತರ್ಲಕ್ಷ್ಯಸ್ವರೂಪವಂ ಗ್ರಂಥದ್ವಯದಿಂ ಪೇಳ್ದಪಂ:—

ಶ್ಲೋ॥ ಮೂಲಕಂದಾದ್ದಂಡಲಗ್ನಾಂಬ್ರಹ್ಮನಾಡೀಂಶಶಿಪ್ರಭಾಂ ।
ತಸ್ಯಾಮಧ್ಯೇತಟಿತ್ಕೋಟಿನಿಭಾಂತಾಮೂರ್ಧ್ವಗಾಮಿನೀಂ॥
ಮನಸಾಲಕ್ಷಯೇನ್ಮೂರ್ತಿಂಸದೃಶೀಂಬಿಸತಂತುನಾ ।
ಆಬ್ರಹ್ಮರಂಧ್ರಪರ್ಯಂತಗತಾಂಸಿದ್ಧಿಪ್ರದಾಂಸ್ಮರೇತ್ ॥೩೮॥

ಟೀ॥ ಮೂಲಕಂದಾತ್-ಮೂಲಾಧಾರಕಂದದದೆಸೆಯಿಂದ, "ಕಂದಸ್ಥಾನಂಮುನಿಶ್ರೇಷ್ಠಮೂಲಾಧಾರಂನವಾಂಗುಲಂ । ಚತುರಂಗುಲಮಾಯಾಮವಿಸ್ತಾರಂಮುನಿಸತ್ತಮ" ಎಂಬುದಾಗಿ) ದಂಡಲಗ್ನಾಂ-ಪಶ್ಚಿಮಭಾಗದ ಅಸ್ಥಿದಂಡದಲ್ಲಿರ್ಪಂಥ, ಶಶಿಪ್ರಭಾಂ-ಪೂರ್ಣಚಂದ್ರನ ಕಾಂತಿಯೋಪಾದಿಯ ಕಾಂತಿಯುಳ್ಳಂಥ, ಬ್ರಹ್ಮನಾಡೀಂ-ಸುಷುಮ್ನಾನಾಡಿಯನು, ಸ್ಮರೇತ್-ಸ್ಮರಿಸುವುದು. ತಸ್ಯಾಃ-ಆ ಬ್ರಹ್ಮನಾಡಿಯ, ಮಧ್ಯೇ-ಮಧ್ಯದಲ್ಲಿ, ತಟಿತ್ಕೋಟಿನಿಭಾಂ-ಕೋಟಿಮಿಂಚುಗಳಿಗೆ ಸಮನಾಗಿರ್ಪಂಥ, ತಾಂ-ಆ ಪ್ರಸಿದ್ಧವಾದಂಥ, ಊರ್ಧ್ವಗಾಮಿನೀಂ-ಮೇಲನೆದ್ದುತಿರ್ಪಂಥ, ಬಿಸತಂತುನಾ-ತಾವರೆಯನೂಲಿನೊಡನೆ, ಸದೃಶೀಂ-ಸಮಾನವಾದಂಥ, ಆ ಬ್ರಹ್ಮರಂಧ್ರಪರ್ಯಂತಗತಾಂ-ಬ್ರಹ್ಮರಂಧ್ರಪರ್ಯಂತವಾಗಿ ಎದ್ದುಲ್ಪಟ್ಟಂಥ, ಸಿದ್ಧಿಪ್ರದಾಂ-ಸಕಲಸಿದ್ಧಿಗಳಂ ಕೊಡುವಂಥ, ಮೂರ್ತಿಂ-ಪರಿಗ್ರಹಶಕ್ತಿಮೂರ್ತಿಯನು, ಮನಸಾ-ಮನಸ್ಸಿನಿಂದ, ಲಕ್ಷಯೇತ್-ಲಕ್ಷಿಸುವುದು. ॥೩೮॥

ಸೂ॥ ಮರಳಿ ಪ್ರಕಾರಾಂತರದಿಂದೆ ಅಂತರ್ಲಕ್ಷ್ಯವಂ ಪೇಳ್ದಪಂ:—

ಶ್ಲೋ॥ ಲಲಾಟೋರ್ಧ್ವೇಶಿಥವಾಲಕ್ಷ್ಯೇಯೋಗೀಗೋಲಾಟಮಂಡಲೇ।
ವಿಸ್ಫುರತ್ತಾರಕಾಕಾರಂಮನಸಾಲಕ್ಷಯೇತ್ಸದಾ ॥೩೯॥

ಟೀ॥ ಅಥವಾ-ಪರಿಪಾಕತತ್ತರತಮ್ಯದಿಂ ಪೂರ್ವೋದಿತವಾದ ಲಕ್ಷ್ಯವು ಮನೋಗೋಚರವಾಗದ ಪಕ್ಷದಲ್ಲಿ, ಯೋಗೀ-ರಾಜಯೋಗಾಭ್ಯಾಸಂ ಮಾಡುವಾತನು, ಲಲಾಟೋರ್ಧ್ವೇ-ಲಲಾಟದ ಊರ್ಧ್ವಭಾಗವಾದಂಥ, ಲಕ್ಷ್ಯೇ-ಲಕ್ಷಿಸಲುಯೋಗ್ಯವಾಗಿರ್ಪಂಥ ಗೋಲಾಟಮಂಡಲೇ-ಊರ್ಧ್ವಮುಖಾವಲೋಕನದ ನಿಲುಕಡೆಯಸ್ಥಾನದಲ್ಲಿ, ವಿಸ್ಫುರತ್ತಾರಕಾಕಾರಂ-ಮಿನುಗುತ್ತಿರ್ಪ ನಕ್ಷತ್ರಾಕಾರವನು, ಮನಸಾ-ಅಂತರ್ಮುಖವಾದ ಮನಸ್ಸಿನಿಂದ, ಸದಾ-ಅನವರತವೂ, ಲಕ್ಷಯೇತ್-ಲಕ್ಷಿಸುವುದು. ॥೩೯॥

ಸೂ॥ ಅನಂತರದಲ್ಲಿ ಮಂದಾಧಿಕಾರಿಗೆ ಕಾಣಿಸುವ ನಾದರೂಪವಾದ ಅಂತರ್ಲಕ್ಷ್ಯಮಂ ಪೇಳ್ದಪಂ:—

ಶ್ಲೋ॥ ಅಥವಾಕರ್ಣಯೋರ್ದ್ವಾರೇತರ್ಜನೀಭ್ಯಾಂನಿರೋಧಯೇತ್। ಶ್ರೀಹಟ್ಟೇಮಸ್ತಕೇ ನಾದಂ ಘುಮ್ಘುಮ್ಕಾರಂ ಶೃಣೋತಿಚ ॥೪೦॥

ಸೂ॥ ಅನಂತರದಲ್ಲಿ ಮಂದಾಧಿಕಾರಿಗೆ ಕಾಣಿಸುವ ನಾದರೂಪವಾದ ಅಂತರ್ಲಕ್ಷ್ಯಮಂ ಪೇಳ್ದಪಂ:—

ಟೀ॥ ಅಥವಾ-ಹಿಂದೆಪೇಳ್ದ ತಾರಕಾಕಾರವಾದ ಲಕ್ಷ್ಯವು ಮನೋಗೋಚರವಾಗದ ಪಕ್ಷದಲ್ಲಿ, ಕರ್ಣಯೋಃ-ಶ್ರೋತ್ರಂಗಳ, ದ್ವಾರೇ-ರಂಧ್ರಗಳನು, ತರ್ಜನೀಭ್ಯಾಂ-ತರ್ಜನಿಗಳೆಂಬಂಗುಲಿಗಳಿಂದ, ನಿರೋಧಯೇತ್-ಮಿಗಿಲಾಗಿ ಒತ್ತುವುದು. ತೇನ- ಅದರಿಂದ, ಶ್ರೀಹಟ್ಟೇ-ಶ್ರೀಹಟ್ಟವೆಂಬ ಸಂಜ್ಞೆಯುಳ್ಳಂಥ, ಮಸ್ತಕೇ-ಕಪಾಲಕುಹರದಲ್ಲಿ, ಘುಮ್ಘುಮ್ಕಾರಂ-ಘುಮುಘುಮುಧ್ವನರೂಪವಾಗಿರ್ಪಂಥ, ನಾದಂಚ-ಪ್ರಣವಘೋಷವನು, ಶೃಣೋತಿ-ಕೇಳುತ್ತಿಹನು. ॥೪೦॥

ಸೂ॥ ಮಂದಾಧಿಕಾರಿಗೆ ನಾದಸಾಕ್ಷಾತ್ಕಾರಕ್ಕುಪಾಯಮಂ ಪೇಳ್ದು ಬಿಂದುಸಾಕ್ಷಾತ್ಕಾರಕ್ಕುಪಾಯಮಂ ಪೇಳುತ್ತಂತರ್ಲಕ್ಷ್ಯಪರಿಸಮಾಪ್ತಿಯಂ ಪೇಳ್ದಪಂ:-

ಶ್ಲೋ॥ ಚಕ್ಷುರ್ಮಧ್ಯೇಶಿಥವಾನೀಲಜ್ಯೋತೀರೂಪಂವಿಲಕ್ಷಯೇತ್।
ಅಂತರ್ಲಕ್ಷ್ಯಮಿದಂಜ್ಞೇಯಂಬಹಿರ್ಲಕ್ಷ್ಯಮಥಶೃಣು॥೪೧॥

ಟೀ॥ ಅಥವಾ- ಈ ಪೂರ್ವೋದಿತವಾದ ನಾದಶ್ರವಣಕ್ಕೆ ಅಲಸಿದೊಡೆ, ಚಕ್ಷುರ್ಮಧ್ಯೇ-ನೇತ್ರಂಗಳ ಮಧ್ಯದಲ್ಲಿಯು, ನೀಲಜ್ಯೋತೀರೂಪಂ-ನೀಲವರ್ಣವಾದ ಜ್ಯೋತೀರೂಪವನು, ವಿಲಕ್ಷಯೇತ್-ವಿಶೇಷವಾಗಿ ಲಕ್ಷಿಸುವುದು. ಇದಂ-ಈ ಪೂರ್ವೋಕ್ತವಾದ ಸ್ವರೂಪವು, ಅಂತರ್ಲಕ್ಷ್ಯಂ-ಮನೋಮಾತ್ರಕ್ಕೆ ಗೋಚರವಾದಂತ

ರ್ಲಕ್ಷ್ಯವೆಂದು, ಜ್ಞೇಯಂ-ಅರಿಯಲು ಯೋಗ್ಯವು. ಅಥ- ಅನಂತರದಲ್ಲಿ, ಬಹಿರ್ಲಕ್ಷ್ಯಂ-ದೇಹದಿಂಬಾಹ್ಯವ ವಿಲಕ್ಷಿಸಲು ಯೋಗ್ಯವಾದ ಬಹಿರ್ಲಕ್ಷ್ಯವನು, ಶೃಣು-ಕೇಳು. ॥೪೧॥

ಸೂ॥ ಪ್ರಾಣಕಲಾಸಮೇತವಾದ ಪ್ರಾಣವಾಯುವು ನಾಸಾಪುಟದಲ್ಲಿ ಪಂಚಭೂತಾತ್ಮಕವಾಗಿ ಚರಿಸುವುದಾಗಿ, ಆ ಸೂಕ್ಷ್ಮಪಂಚಭೂತಂಗಳಲ್ಲಿಯ ಪಂಚಕಲಾವರ್ಣಂಗಳಂ ಬಾಹ್ಯದಲ್ಲಿ ಲಕ್ಷಿಸುವುದೇ ಬಹಿರ್ಲಕ್ಷ್ಯವೆಂದು ಪೇಳ್ದಪಂ:—

ಶ್ಲೋ॥ ನಾಸಾಗ್ರದೇಶಾಚ್ಚ ಚತುಷ್ಷಡಷ್ಟೌ ತಥಾದಶದ್ವಾದಶಸಂ
ಖ್ಯಕಾಂಗುಲೌ ಬಹಿಸ್ಸ್ಮರೇನ್ನೀಲಸುಧೂಮರಕ್ತತರಂಗ
ಪೀತಾತ್ಮಸುತತ್ವಪಂಚಕಂ ॥೪೨॥

ಟೀ॥ ನಾಸಾಗ್ರದೇಶಾಚ್ಚ-ನಾಸಿಕಾಗ್ರಸ್ಥಾನದ ಪೆಸೆಯಿಂದ, ಬಹಿಃ-ಹೊರಗೆ, ಚತುಃ ನಾಲ್ಕು, ಷಟ್-ಆರು, ಅಷ್ಟೌ-ಎಂಟು, ತಥಾ-ಹಾಂಗೆ, ದಶ-ಹತ್ತು, ದ್ವಾದಶ- ಹನ್ನೆರಡೆಂಬ, ಸಂಖ್ಯಕಾಂಗುಲೌ-ಲೆಕ್ಕವುಳ್ಳ ಅಂಗುಲಿಗಳ ಪ್ರಮಾಣದಲ್ಲಿ, ನೀಲಸುಧೂಮರಕ್ತತರಂಗಪೀತಾತ್ಮ-ನೀಲ-ಕೃಷ್ಣವರ್ಣ, ಸುಧೂಮ-ಲೇಸಾದಧೂಮವರ್ಣ, ರಕ್ತ-ಅರುಣವರ್ಣ, ತರಂಗ-ತೆರೆಗಳವರ್ಣ, ಪೀತಾತ್ಮ-ಹಳದಿಯವರ್ಣ ಇವುಗಳ ರೂಪವಾದ, ಸುತತ್ವಪಂಚಕಂ-ಲೇಸಾದಾಕಾಶಾದಿ ಪಂಚತತ್ವವನು, ಸ್ಮರೇತ್-ಸ್ಮರಿಸುವುದು.(ತಾತ್ಪರ್ಯ-ನಾಸಾಗ್ರದಿಂ ಮುಂದೆ ನಾಲ್ಕು ಅಂಗುಲ ಪ್ರಮಾಣದಲ್ಲಿ ನೀಲವರ್ಣವಾದಾಕಾಶವನು, ಆರಂಗುಲದಲ್ಲಿ ಧೂಮವರ್ಣವಾದ ವಾಯುವನು, ಎಂಟಂಗುಲದಲ್ಲಿ ರಕ್ತವರ್ಣವಾದಗ್ನಿಯನು, ಹತ್ತಂಗುಲದಲ್ಲಿ ತೆರೆಗಳ ವರ್ಣವಾದಪ್ಪುವನು, ಹನ್ನೆರಡಂಗುಲದಲ್ಲಿ ಹೊಂಬಣ್ಣವಾದ ಪೃಥ್ವಿಯನು ಲಕ್ಷಿಸುವುದೇ ಬಹಿರ್ಲಕ್ಷ್ಯವೆಂಬುದಭಿಪ್ರಾಯಂ॥

ಸೂ॥ ಪುನರಪಿ ಪ್ರಕಾರಾಂತರಂಗಳಿಂ ಬಹಿರ್ಲಕ್ಷ್ಯಂಗಳಂ ಪೇಳ್ದಪಂ:—

ಶ್ಲೋ॥ ಅಥವಾಸಂಮುಖಾಕಾಶಂ ಸ್ಥಿರದೃಷ್ಟ್ಯಾವಿಲೋಕಯೇತ್ ।
ಜ್ಯೋತಿರ್ಮಯೂಖಾದೃಶ್ಯಂತೇಯೋಗಿಭಿರ್ಧೀರಮಾನಸೈಃ ॥

ಟೀ॥ ಅಥವಾ-ಪರಿಪಾಕತಾರತಮ್ಯದಿಂ ಪೂರ್ವೋದಿತವಾದ ಲಕ್ಷ್ಯವು ಲೋಚನಕೆ ಗೋಚರವಾಗದ ಪಕ್ಷದಲ್ಲಿ, ಸಂಮುಖಾಕಾಶಂ-ನೇತ್ರಕ್ಕೆ ಇದಿರಾದ ಬಯಲನು, ಸ್ಥಿರದೃಷ್ಟ್ಯಾ-ನಿಮೇಷೋನ್ಮೇಷಂಗಳಿಂ ಚಲಿಸದ ದೃಷ್ಟಿಯಿಂದೆ, ವಿಲೋಕಯೇತ್-ನೋಡುವುದು. ಆ ನೋಟದಿಂ, ಜ್ಯೋತಿರ್ಮಯೂಖಾಃ-ಶಬ್ದತನ್ಮಾತ್ರಾಶ್ರಿತವಾದ ಸದಾಶಿವಜ್ಯೋತಿಯ ಕಿರಣಂಗಳು, ಧೀರಮಾನಸೈಃ-ನಿಶ್ಚಲಚಿತ್ತರಾದಂಥ, ಯೋಗಿಭಿಃ-ಯೋಗೀಶ್ವರರಿಂದ, ದೃಶ್ಯಂತೇ-ಕಾಣಲ್ಪಡುತ್ತಿದ್ದಾವು. (ತಾತ್ಪರ್ಯ—"ಆಕಾಶಂಬ್ರಹ್ಮ ಆಕಾಶೇವೈ ಸೂರ್ಯಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣ್ಯಗ್ನಿರಾಕಾಶೇ ಆ.

ಕಾಶಮುದಾಸ್ತೇತಿ" ಆಕಾಶದೊಳುತ್ತರಕಬ್ರಹ್ಮಂ ಪೂರ್ಣವಾಗಿಪ್ಪುದರಿಂದ ಸೂರ್ಯ ಚಂದ್ರವಿದ್ಯುನ್ನಕ್ಷತ್ರಾಗ್ನಿ ರೂಪದಿಂದೊಳಗೆ ಬೆಳಗುತ್ತಿರ್ಪುದಾಗಿ ಯಾಕಾಶಮು ನೋಳ್ಪುದೆಂಬ ಶ್ರುತಿಪ್ರಮಾಣದಿಂದಾಕಾಶಾವಲೋಕನದಿಂದೆ ಪರಮಾತ್ಮ ಜ್ಯೋತಿಯು ಸಾಕ್ಷಾತ್ಕಾರವಪ್ಪುದೆಂಬುದಭಿಪ್ರಾಯಂ.) ॥೪೩॥

ಸೂ॥ ಈ ದೃಷ್ಟಿಯು ಸ್ಥಿರತ್ವವೇ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಪ್ಪುದಾಗಿ ಅದಕ್ಕುಪಾಯಮಂ ಪೇಳ್ದಪಂ:—

ಶ್ಲೋ॥ ದೃಷ್ಟ್ಯಗ್ರೇವಾಪ್ಯಪಾಂಗೇವಾತಪ್ತಕಾಂಚನಸನ್ನಿಭಾಂ ।
ಭೂಮಿಂಸಂಲಕ್ಷಯೇದ್ದೃಷ್ಟಿಸ್ಸ್ಥಿರಾಭವತಿಯೋಗಿನಃ॥೪೪

ಟೀ॥ ದೃಷ್ಟ್ಯಗ್ರೇವಾ-ಲೋಚನಾಗ್ರವಲ್ಲಿಯಾದರೂ, ಅಪಾಂಗೇವಾ-ಕಡೆಗಣ್ಣಿನಲ್ಲಿಯಾದರೂ, ತಪ್ತಕಾಂಚನಸನ್ನಿಭಾ-ಕರಗಿದ ಕುಂದಣಕ್ಕೆ ಸಮಾನವಾದಂಥ, ಭೂಮಿಂ-ರಜೋಗುಣಾತ್ಮಕವಾದ ಭೂಮಿಯನು, ಸಂಲಕ್ಷಯೇತ್-ಚೆನ್ನಾಗಿ ಲಕ್ಷಿಸುವುದು. ಯೋಗಿನಃ-ಯೋಗೀಶ್ವರಂಗೆ, ದೃಷ್ಟಿಃ-ನೋಟವು, ಸ್ಥಿರಾ-ಚಲಿಸದೆಯಿರ್ಪಂತಹುದು, ಭವತಿ-ಆಗುತ್ತಿದ್ದೀತು. ॥೪೪॥

ಶ್ಲೋ॥ ಅಥವಾ ಶಿರಸಶ್ಚೋರ್ಧ್ವೇದ್ವಾದಶಾಂಗುಲಸಂಮಿತೇ ।
ಜ್ಯೋತಿಃಪುಂಜಂನಿರಾಕಾರಂಲಕ್ಷಯೇನ್ಮುಕ್ತಿದಂಭವೇತ್॥

ಟೀ॥ ಅಥವಾ-ಈ ಪೂರ್ವೋದಿತವಾದ ಲಕ್ಷ್ಯವಂ ಮೀರುವಪಕ್ಷದಲ್ಲಿ, ಶಿರಸಃ, ಮಸ್ತಕದ, ಊರ್ಧ್ವೇ-ಮೇಗಣಭಾಗವಾದಂಥ, ದ್ವಾದಶಾಂಗುಲಸಂಮಿತೇ-ಹನ್ನೆರಡಂಗುಲ ಪ್ರಮಾಣದಲ್ಲಿ, ನಿರಾಕಾರಂ-ಪೀತರಕ್ತಾದ್ಯಾಕಾರವಿಲ್ಲದಂಥ, ಜ್ಯೋತಿಃಪುಂಜಂ-ಶುದ್ಧಸಾತ್ವಿಕವಾದ ಬೆಳಗಿನೊಬ್ಬುಳಿಯನು, ಲಕ್ಷಯೇತ್-ಲಕ್ಷಿಸುವುದು, ಅದು, ಮುಕ್ತಿದಂ-ಮೋಕ್ಷವನು ಕೊಡುವಂತಹುದು. ಭವೇತ್-ಅಹುದು. (ತಾತ್ಪರ್ಯ-ಉತ್ತರೋತ್ತರವಾಗಿ ಅಂಗುಲಿದ್ವಯಂಗಳಿಂ ಪ್ರಮಾಣಿಸಿದ ಸೂಕ್ಷ್ಮಪಂಚಭೂತಂಗಳ ಮೇಲಣ ಭಾಗದಲ್ಲಿ ನಿರುಪಾಧಿಕವಾದ ಕಾಂತಿಪುಂಜಮಂ ಲಕ್ಷಿಸಲದರಿಂ ಕೈವಲ್ಯವಪ್ಪುದೆಂಬುದಭಿಪ್ರಾಯಂ.) ॥೪೫॥

ಸೂ॥ ಯೋಗೀಶ್ವರಂಗೆಲ್ಲಿನೋಡಿದೊಡಲ್ಲಿಯೇ ಲಕ್ಷ್ಯವಾಗುವ ಉಪಾಯಮಂ ಪೇಳ್ದಪಂ:—

ಶ್ಲೋ॥ ಯತ್ರಯತ್ರಾರ್ಥವಾನ್ಯೋಗೀತತ್ರತತ್ರವಿಲಕ್ಷಯೇತ್ ।
ಆಕಾಶಮೇವಯಸ್ತಸ್ಯಚಿತ್ತಂಭವತಿತಾದೃಶಂ ॥೪೬॥

ಟೀ॥ ಯಃ-ಆವನಾನೊಬ್ಬಯೋಗೀಶ್ವರನು, ಯತ್ರಯತ್ರ-ಎಲ್ಲಿಯೆಲ್ಲಿ, ಅರ್ಥವಾನ್-ಬಾಹ್ಯಾಂತಃಕರಣಕ್ಕೆ ಗೋಚರವಾದ ವಿಷಯವುಳ್ಳಾತನಾಗುವನೋ, ತತ

ತತ್ರ-ಅಲ್ಲಿಅಲ್ಲಿ, ಆಕಾಶವೇವ-ಅವರವರನಿರಾಕಾರವನೇ, ವಿಲಕ್ಷಯೇತ್-ವಿಶೇಷದಿಂಲಕ್ಷಿಸುವನೊ, ತಸ್ಯ-ಆತನ, ಚಿತ್ತಂ-ಅರಿವು, ತಾದೃಶಂ-ಆ ಆಕಾಶದಂತೆನಿರಾಲಂಬವು, ಭವತಿ-ಆಗುತ್ತಿದ್ದೀತು.(ತಾತ್ಪರ್ಯ-ಮರದಿಂದಲಾದ ಸ್ತ್ರೀಪ್ರತಿಮೆಯನು ಸ್ತ್ರೀರೂಪವಾಗಿ ಕಂಡಾತಂಗೆ ಮೋಹಕವಪ್ಪುದಾಗಿ, ಮರನೆಂದು ಕಂಡಾತಂಗೆ ಮೋಹಕವಿಲ್ಲವಂತೆ ಷಡಧ್ವಾತ್ಮಕವಾಗಿ ಜಗತ್ತನು ಕಾರ್ಯರೂಪದಿಂ ಕಂಡಾತಂಗೆ ಭೋಗವಪ್ಪುದಾಗಿ ಪರಮಕಾರಣವಾದ ಬಿಂದುಮಾಯಾರೂಪದಿಂ ನಿರಾಕಾರವಾಗಿ ಪ್ರಪಂಚವಂ ಕಾಣಲಾತಂಗೆ ಮೋಕ್ಷವಪ್ಪುದೆಂಬುದಭಿಪ್ರಾಯಂ.) ||೪೬||

ಸೂ|| ಈ ಪ್ರಕಾರದಿಂ ಬಹಿರ್ಲಕ್ಷ್ಯವಂ ಪೇಳ್ದು ಮಧ್ಯಲಕ್ಷ್ಯವಂ ಪೇಳಲುದ್ಯೋಗಿಸುತಿರ್ದಪಂ:—

ಶ್ಲೋ|| ಇತ್ಯನೇಕವಿಧಾಕಾರಂ ಬಹಿರ್ಲಕ್ಷ್ಯಮುದೀರಿತಂ ।
ಶೃಣುಷ್ವಮಧ್ಯಲಕ್ಷ್ಯಂಚ ಕಥಿತಂಪೂರ್ವಸೂರಿಭಿಃ ||೪೭||

ಟೀ|| ಇತಿ-ಈ ಪೂರ್ವೋಕ್ತಪ್ರಕಾರದಿಂದೆ, ಅನೇಕವಿಧಾಕಾರಂ-ಅನೇಕಪ್ರಕಾರವಾಗಿರ್ಪಂಥ, ಬಹಿರ್ಲಕ್ಷ್ಯಂ-ಬಹಿರ್ಲಕ್ಷ್ಯವು, ಉದೀರಿತಂ-ಪೇಳಲ್ಪಟ್ಟಿತು. ಅನಂತರವಲ್ಲಿ, ಪೂರ್ವಸೂರಿಭಿಃ-ಪೂರ್ವ-ಮೊದಲ, ಸೂರಿಭಿಃ-ಯೋಗೀಶ್ವರರಿಂದೆ, ಕಥಿತಂ-ಪೇಳಲ್ಪಟ್ಟಂಥ, ಮಧ್ಯಲಕ್ಷ್ಯಂಚ-ಮಧ್ಯಲಕ್ಷ್ಯವನೂ, ಶೃಣುಷ್ವ-ಕೇಳು.

ಸೂ|| ಪರಿಪಾಕತಾರತಮ್ಯದಿಂ ಬಹುವಿಧವಾದ ಮಧ್ಯಲಕ್ಷ್ಯಸ್ವರೂಪಂಗಳಂ ಪೇಳ್ದಪಂ:—

ಶ್ಲೋ|| ಶ್ವೇತಾದಿವರ್ಣಾನಥಖಂಡಚಂದ್ರಸೌದಾಮಿನೀವಹ್ನಿಶಿಖೇನಬಿಂಬಾನ್ । ಜ್ವಲನ್ನಭೋವಾ ಸ್ಥಲಹೀನಮೇಕಂವಿಲಕ್ಷಯೇತ್ತತ್ಖಲುಮಧ್ಯಲಕ್ಷ್ಯಂ ||೪೮||

ಟೀ|| ಶ್ವೇತಾದಿವರ್ಣಾನ್-ಶ್ವೇತ-ಧವಳವರ್ಣವನ್ನು ಮತ್ತೂ ಆದಿಶಬ್ದದಿಂ ಕೃಷ್ಣಧೂಮ್ರಾದಿವರ್ಣಂಗಳನು, ಅಥ-ಅನಂತರವಲ್ಲಿ, ಖಂಡಚಂದ್ರಸೌದಾಮಿನೀ ವಹ್ನಿಶಿಖೇನಬಿಂಬಾನ್-ಖಂಡಚಂದ್ರ-ಅರ್ಧಚಂದ್ರನು,ಸೌದಾಮಿನೀ-ಮಿಂಚಿನಬಳ್ಳಿ, ವಹ್ನಿಶಿಖಾ-ಅಗ್ನಿಜ್ವಾಲೆ, ಇನಬಿಂಬಾನ್-ಸೂರ್ಯಬಿಂಬ ಇವುಗಳನಾದರೂ, ಸ್ಥಲಹೀನಂ-ಒಳಗುಹೊರಗೆಂಬ ಸ್ಥಲವಿಭಾಗವಿಲ್ಲದಿರ್ಪಂಥ, ಏಕಂ-ಒಂದಾಗಿರ್ಪಂಥ, ಜ್ವಲನ್ನಭೋವಾ-ಜ್ವಲಿಸುತ್ತಿರ್ಪ ಬಯಲನಾದರೂ, ವಿಲಕ್ಷಯೇತ್-ಲಕ್ಷಿಸುವುದು. ತತ್-ಅದು, ಮಧ್ಯಲಕ್ಷ್ಯಂಖಲು-ಮಧ್ಯಲಕ್ಷ್ಯವಲಾ. (" ನೀಹಾರಧೂಮಾರ್ಕಜಲಾನಲಾನಾಂಖದ್ಯೋತವಿದ್ಯುತ್ಸ್ಫಟಿಕಶಶೀನಾಂ । ಏತಾನಿರೂಪಾಣಿಪುರಸ್ಸರಾಣಿಬ್ರಹ್ಮಣ್ಯ

ಭಿವ್ಯಕ್ತಿಕರಣೆಯೋಗೇ" ಎಂಬ ಶ್ರುತಿಪ್ರಮಾಣದಿಂ ದೇಹಿಮಧ್ಯಮಾದಿಸ್ವರೂಪಂಗಳಿಂ ತೋರುವ ಭೇದಂಗಳಂ ಮಧ್ಯಲಕ್ಷ್ಯವೆನಿಸುವ ತಾರಕಬ್ರಹ್ಮಸ್ವರೂಪಗಳೆಂದರಿವುದು.) ॥೪೪॥

ಸೂ॥ ಅನಂತರದಲ್ಲಿ ಮಧ್ಯಲಕ್ಷ್ಯಂಗಳಾದ ಪಂಚಾಕಾಶಸ್ವರೂಪಂಗಳಂ ಪೇಳ್ದಪಂ:—

ಶ್ಲೋ॥ ನಿರಾಕಾರಂಪಶ್ಯೇದ್ಗುಣರಹಿತಮಾಕಾಶಮಥವಾತಮೋ
ರೂಪಂಗಾಢಸ್ಫುರದುರುತರಾಕಾಶಮಥವಾ। ಮಹಾಕಾ
ಶಂಕಾಲಾನಲನಿಭಮಥಾತ್ಯಂತರುಚಿರಂಪರಂತತ್ವಾಕಾ
ಶಂರವಿಶತನಿಭಂಸೂರ್ಯಖಮಿತಿ ॥೪೫॥

ಟೀ॥ ಮೊದಲಲ್ಲಿ, ನಿರಾಕಾರಂ-ಪೃಥಿವ್ಯಾದಿಚತುರ್ಭೂತಂಗಳಂತೆ ಆಕಾರವಿಲ್ಲದಿರ್ಪಂಥ, ಗುಣರಹಿತಂ-ನೀಲಲೋಹಿತಾದಿವರ್ಣಂಗಳಿಲ್ಲದಿರ್ಪಂಥ, ಆಕಾಶಂ-ಪಂಚಮಭೂತಾಕಾಶವನು, ಪಶ್ಯೇತ್-ಸ್ಥಿರದೃಷ್ಟಿಯಿಂನೋಡುವುದು, ಅಥ-ಅನಂತರದಲ್ಲಿ ವಾ-ಮೇಣು,ತಮೋರೂಪಂ-ತಮೋಗುಣಾತ್ಮಕ ದಪ್ಪುದರಿಂದೆ ನೀಲವರ್ಣವಾಗಿರ್ಪಂಥ, ಗಾಢಸ್ಫುರದುರುತರಾಕಾಶಂ-ದೃಷ್ಟಿಸಿತೋರುವ ಸ್ಥೂಲಾಕಾಶವನು, ಪಶ್ಯೇತ್-ಕಾಣ್ಬುದು. ಅಥ-ಅನಂತರದಲ್ಲಿ,ವಾ-ಮೇಣು, ಕಾಲಾನಲನಿಭಂ-ರಜೋಗುಣಾತ್ಮಕವಪ್ಪುದರಿಂ ಕಾಲಾಗ್ನಿಗೆ ಸಮಾನವಾದಂಥ, ಮಹಾಕಾಶಂ-ಮಹದಾಕಾಶವನು, ಪಶ್ಯೇತ್-ಕಾಣ್ಬುದು. ಅಥ-ಅನಂತರದಲ್ಲಿ, ಅತ್ಯಂತರುಚಿರಂ-ಸತ್ವಗುಣಾತ್ಮಕವಪ್ಪುದರಿಂದತ್ಯಂತಮನೋಹರವಾಗಿರ್ಪಂಥ, ಪರಂ-ಮುಖ್ಯವಾಗಿರ್ಪಂಥ, ತತ್ವಾಕಾಶಂ-ತತ್ವಾಕಾಶವನು, ಪಶ್ಯೇತ್-ಕಾಣ್ಬುದು. ಅಥ-ಅನಂತರದಲ್ಲಿ, ರವಿಶತನಿಭಂ-ಕೋಟಿಸೂರ್ಯರ್ಗೆ ಸಮಾನವಾದಂಥ, ಸೂರ್ಯಖಂ-ಸೂರ್ಯಾಕಾಶವೆನಿಸುವ ಬಿಂದ್ವಾಕಾಶವನು,ಇತಿ ಈಪ್ರಕಾರದಿಂ, ಪಶ್ಯೇತ್-ಕಾಣ್ಬುದು. (ತಾತ್ಪರ್ಯ—"ಆಕಾಶೇರಮತ ಆಕಾಶೇನ ಜಾಯತ ಆಕಾಶಮಭಿಜಾಯತ ಆಕಾಶಮುಪಾಸ್ವ" ಎಂಬ ಶ್ರುತಿಪ್ರಮಾಣದಿಂದೆ ಚತುರ್ಭೂತಂಗಳ ನೊಳಕೊಂಡುದು ಭೂತಾಕಾಶ, ಅದನೊಳಕೊಂಡುದು ನೀಲವರ್ಣವಾದ ಸ್ಥೂಲಾಕಾಶ, ಅದನೊಳಕೊಂಡುದು ಅರುಣವರ್ಣವಾದ ಮಹದಾಕಾಶ, ಅದನೊಳಕೊಂಡುದು ಶ್ವೇತವರ್ಣವಾದ ತತ್ವಾಕಾಶ, ಆ ತ್ರಿಗುಣಾತ್ಮಕವಾದ ಪ್ರಕೃತಿಮಾಯೆಗಳನೊಳಕೊಂಡುದು ಬಿಂದ್ವಾಕಾಶವಾದಕಾರಣ, ಯೋಗೀಶ್ವರನು ಕಣ್ಣುಮುಂದಣ ಬಯಲಿನೊಳಗೆ ಕ್ರಮದಿಂದೀಯಾಕಾಶಂಗಳಂ ಕಾಣ್ಬುದೆಂಬುದಭಿಪ್ರಾಯಂ.) ॥೪೫॥

ಸೂ॥ ಬಳಿಕಹೊರಗೆ ಪೂರ್ಣವಪ್ಪುದರಿಂ ಮಧ್ಯಲಕ್ಷ್ಯವೆನಿಸುವ ಪಂಚಾಕಾಶಂಗಳಂ ವಿಭಾಗಿಸಿ ಕಂಡ ಯೋಗೀಶ್ವರಂ ಗಾಗುವಫಲಮುಂ ಪೇಳ್ದಪಂ:—

ಶ್ಲೋ॥ ವ್ಯೋಮಪಂಚಕಮೇತದ್ಧಿ ತದ್ಬಾಹ್ಯಾಭ್ಯಂತರಸ್ಥಿತಂ ।
ಯಃಪಶ್ಯತಿನರೋಲಕ್ಷ್ಯೇಸವ್ಯೋಮಸದೃಶೋಭವೇತ್ ॥೩೦

ಟೀ॥ ಏತತ್-ಈ ಪೂರ್ವೋಕ್ತವಾಗಿರ್ಪಂತಹುದು, ವ್ಯೋಮಪಂಚಕಂಹಿ-ಆಕಾಶಪಂಚಕವಲಾ, ಬಾಹ್ಯಾಭ್ಯಂತರಸ್ಥಿತಂ-ಪಿಂಡಾಂಡದೊಳಹೊರಗೆ ವ್ಯಾಪಿಸಿರ್ಪಂಥ, ತತ್-ಆಪಂಚಾಕಾಶವನು, ಯಃ-ಆವನಾನೊರ್ವ, ನರಃ-ಪುರುಷನು, ಲಕ್ಷ್ಯೇ-ಮಧ್ಯಲಕ್ಷ್ಯದಲ್ಲಿ, ಪಶ್ಯತಿ-ಕಾಣುತ್ತಿರ್ದ್ದಾನೋ, ಸಃ-ಆ ಯೋಗೀಶ್ವರನು, ವ್ಯೋಮಸದೃಶಃ-ಆಕಾಶಕ್ಕೆಸಮಾನವಾಗಿರ್ಪಾತನು, ಭವೇತ್-ಆಗುವನು, (ತಾತ್ಪರ್ಯ-ಈ ಆಕಾಶವನುಸಂಧಾನದಿಂದೆ ಆಕಾಶದಂತೆ ಅಖಂಡಿತನಿರ್ಲೇಪನಿರಾವರಣಾದಿಸ್ವರೂಪನಪ್ಪನೆಂಬುದಭಿಪ್ರಾಯಂ.) ॥೩೦॥

ಸೂ॥ ಈಪ್ರಕಾರದಿಂ ಲಕ್ಷ್ಯತ್ರಯರೂಪವಾದ ತಾರಕಸ್ವರೂಪಮಂ ಪೇಳ್ದು ಅದರ ಆಧಿಕ್ಯಮಂ ಪೇಳುತ್ತೆ ಅವನೇ ಅಭ್ಯಾಸಿಸಲ್ಬೇಕೆಂದಾಚಾರ್ಯನು ಶಿಷ್ಯಂಗೆ ನಿರೂಪಿಸುತಿರ್ದಪಂ:—

ಶ್ಲೋ॥ ತಾರಣಾಚ್ಚ ಗುರುಶಿಷ್ಯಯೋರ್ದ್ವಯೋಸ್ತಾರಕೋಽಯ
ಮಿತಿಯೋಗಸಂಜ್ಞಕಃ । ತಾರಕಂಭವಮಹಾಬ್ಧಿತಾರಕಂ
ತತ್ತ್ವಮೇವಪರಿಶೀಲನಂಕುರು ॥೩೧॥

ಟೀ॥ ಭೋಸಖೇ-ಎಲೆಸ್ನೇಹಿತನಾದಶಿಷ್ಯನೆ, ಅಯಂ-ಈಯೋಗವು, ಗುರುಶಿಷ್ಯಯೋಃ-ಕಾರುಣ್ಯದೊಡನೆಕೂಡಿ ಅನುಗ್ರಾಹಕನಾದ ಗುರುವೆಂಬ ವಿನಯದಿಂ ಕೂಡಿ ಅನುಗ್ರಾಹ್ಯನಾದ ಶಿಷ್ಯನೆಂಬ, ದ್ವಯೋಃ-ಈರ್ವರ, ತಾರಣಾಚ್ಚ-ಸಮೀಪಸ್ಥಗಂಮಾಡಿ ಸೇರಿಸುವುದರಿಂದಲೂ, ತಾರಕಃ-ತಾರಕವು, ಯೋಗಸಂಜ್ಞಕಃ-ಯೋಗವೆಂಬ ಹೆಸರುಳ್ಳುದು.("ಅನುಗ್ರಾಹ್ಯಸ್ಯವಿನಯೀತಥಾನುಗ್ರಾಹಕಸ್ಯಚ। ಕಾರುಣ್ಯೇತ್ವನಯೋರ್ಯಸ್ಮಾತ್ತಯೋರ್ಯೋಗಸ್ಸುದುರ್ಲಭಃ" ಎಂದು ಆಗಮಪ್ರಮಾಣವುಂಟಾಗಿ, ಈ ಗುರುಶಿಷ್ಯಸಂಬಂಧವಮಂ ಮಾಳ್ಪುದಾಗಿ, ಈ ತಾರಕವೇ ಯೋಗವೆನಿಸುವುದೆಂಬುದಭಿಪ್ರಾಯಂ) ಇತಿ-ಇದು-ಕಾರಣವಾಗಿ, ಭವಮಹಾಬ್ಧಿತಾರಕಂ-ಸಂಸಾರಸಾಗರವಂ ದಾಂಟಿಸುವಂಥ, ತತ್-ಆ, ತಾರಕಮೇವ-ಕಾರಕವನೇ, ತ್ವಂ-ನೀನು,ಪರಿಶೀಲನಂ-ಅಭ್ಯಾಸನವನು, ಕುರು-ಮಾಡು. (ತಾತ್ಪರ್ಯ—" ಓಮಿತಿಬ್ರಹ್ಮ ಓಮಿತೀದಂಸರ್ವಂ ಓಮಿತಿಪ್ರಯುಕ್ತ್ವಮಾತ್ಮಜ್ಯೋತಿಃ ಸಕೃದಾವರ್ತ್ತತೇ ಅಥಕಸ್ಮಾದುಚ್ಯತೇ ತಾರಕಂ ಯಸ್ಮಾದುಚ್ಚಾರ್ಯಮಾಣವಿವ ಗರ್ಭಜನ್ಮಜರಾಮರಣಸಂಸಾರಮಹದ್ಭಯಾತ್ತಾರಯತಿತಸ್ಮಾದುಚ್ಯತೇತಾರಂ "-ಓಂಕಾರವೇ ಬ್ರಹ್ಮವೆನಿಸುವುದು. ಓಂಕಾರವೇ ಸರ್ವವ್ಯಾಪಕವು. ಓಂಎಂದು ಒಂದುವೇಳೆ ಉಚ್ಚರಿಸಿದ ಮಾತ್ರದಲ್ಲಿಯೇ ಆತಂಗೆ ಪರಮಾ

ತ್ಮಜ್ಯೋತಿ ಯಭಿಮುಖವಪ್ಪುದು. ಈ ಓಂಕಾರವೆಂಬ ನಾಮವೇನುಕಾರಣ ವೆನಲ್ ಓಂಎಂದುಚ್ಚರಿಸಿದಮಾತ್ರದಲ್ಲಿಯೇ ಗರ್ಭ ಜನ್ಮ ಜರಾಮರಣಾದಿ ಸಂಸಾರಭೀತಿಯಂ ದಾಂಟಿಸುವುದಾಗಿ ತಾರಕವೆನಿಸಿಕೊಂಬುದು, ಎಂಬ ಶ್ರುತಿಪ್ರಮಾಣದಿಂದವೂ, ತ್ರಿಸ್ಥಾನಾತ್ಮಕವಾದ ಅಕ್ಷರತ್ರಯಂಗಳಿಂ ವಿಚಿತ್ರರೂಪವಾಗಿ ಕಾಣಿಸುವ ತಾರಕಯೋಗವನೇ ಅಭ್ಯಾಸಂಮಾಳ್ಪುದೆಂಬುದಭಿಪ್ರಾಯಂ) ॥೫೧॥

ಸೂ॥ ಈ ರಾಜಯೋಗದ ಅವಾಂತರಭೇದಂಗಳಾದ ಸಾಂಖ್ಯಯೋಗ ತಾರಕಯೋಗಂಗಳಿಗೆ ಸಫಲಸಮಾನತೆಯಂ ಪೇಳ್ದು, ಪಟಲದ ಪರಿಸಮಾಪ್ತಿಯಂ ಸೂಚಿಸುತಿರ್ದಪಂ:—

ಶ್ಲೋ॥ ಫಲಮೇಕಂದ್ವಿಧಾಚರ್ಯಾಯಥಾರ್ಥಂಸಾಂಖ್ಯತಾರಯೋಃ ।
ಉಪಾಧಿರಹಿತಸ್ಸಾಂಖ್ಯೋಯೋಗಸ್ಸೋಪಾಧಿಕಸ್ತ್ವಯಂ॥

ಟೀ॥ ಸಾಂಖ್ಯತಾರಯೋಃ-ಸಾಂಖ್ಯಯೋಗತಾರಕಯೋಗಂಗಳಿಗೆ, ಯಥಾರ್ಥಂ-ಸತ್ಯವಾದಂಥ, ಫಲಂ-ಪರಮಾತ್ಮಸ್ವರೂಪಲಾಭವೆಂಬ ಫಲವು, ಏಕಂ-ಒಂದೆಯಾಗಿರ್ಪಂತಹುದು.ಚರ್ಯಾ-ಆ ಉಭಯಯೋಗಂಗಳವರ್ತನವು,ದ್ವಿಧಾ-ಎರಡುಪ್ರಕಾರವು, ಅದುಹೇಂಗೆಂದೊಡೆ-ಸಾಂಖ್ಯಃ-ಸಾಂಖ್ಯಯೋಗವು,ಉಪಾಧಿರಹಿತಃ-ಧ್ಯೇಯಾಕಾರವಾದ ವಸ್ತುವಿನ ಅವಲಂಬನವಿಲ್ಲದಿರ್ಪಂತಹುದು, ಅಯಂ-ಈ,ಯೋಗಸ್ತು-ತಾರಕಯೋಗವಾಯಿತ್ತಾದೊಡೆ, ಸೋಪಾಧಿಕಃ-ಧ್ಯಾನಕ್ಕೆ ಅವಲಂಬನವಾದನೇಕಲಕ್ಷ್ಯಂಗಳೊಡನೆ ಕೂಡಿದಂತಹುದು. (ಪರಮಾತ್ಮಾನುಸಂಧಾನವಿಲ್ಲದೆ ಕ್ರಮದಿಂ ತತ್ವಂಗಳ ಹೊರೆಯು ನತಿಗಳೆದು ಅಖಂಡಿತವಾಗಿ ನಿಂದ ನಿಜಸ್ವರೂಪದುಳಿವೆಯೇ ಸಾಂಖ್ಯಯೋಗವು; ನಾದಬಿಂದುಕಲಾತ್ಮಕವಾದ ಪರಮಾತ್ಮಾನುಸಂಧಾನಪೂರ್ವಕದಿಂ ತತ್ವಂಗಳಂ ಕಳೆದುನಿಂದ ನಿಜದುಳಿವೆಯೇ ತಾರಕಯೋಗವು. ಅದು ಕಾರಣ, ಫಲಸಮಾನವಾದರುಂ ತಾರಕಯೋಗಾಭ್ಯಾಸವೇ ವಿಶೇಷವೆಂಬುದಭಿಪ್ರಾಯಂ. "ಯಥಾವೈರಾಜಸಚಿವೋರಾಜಾನಂದ್ರಷ್ಟುಮುದ್ಯತಃ । ಸ್ಥಾನಾತ್ಸ್ಥಾನಾತ್ಪರಿತ್ಯಜ್ಯಪರಿವಾರಪರಿಚ್ಛದಾನ್ ॥ ವಿಸೃಜ್ಯಕೇವಲೋಭೂತ್ವಾಚಾಗ್ರ್ಯಕ್ಷೀಕುರುತೇನೃಪಂ । ತದ್ವಜ್ಜೀವೋಪಿಯ್ಯುರ್ಬದ್ಧಸ್ತತ್ಸರ್ವಂವಿನಿವರ್ತ್ಯಚ ॥ ಶಕ್ತೇರೂರ್ಧ್ವಸ್ಥಿತಂಶಂಭುಂಕೇವಲೋಯಾತಿತನ್ಮಯಂ। ತಾರಕೋಽಮೋಕ್ಷದಃಪ್ರೋಕ್ತಸ್ಸದಸಾನ್ನಿಧ್ಯಸಾಧನಂ" ಎಂದುದಾಗಿ.॥

ಇತಿ ಶ್ರೀಮದ್ವೇದವೇದಾಂತಗಮ ಪುರಾಣಸ್ಮೃತೀತಿಹಾಸಪ್ರತಿಪಾದಿತ ಶ್ರೀವೀರಶೈವ ಮಾರ್ಗಸ್ಥಾಪನಾಚಾರ್ಯ ಶ್ರೀಬಸವಾರಾಧ್ಯ ವಿರಚಿತಕರ್ನಾಟಕ ಟೀಕಾವಿರಾಜಿತಾಯಾಂ-ಶ್ರೀಚೆನ್ನಸದಾಶಿವಯೋಗೀಶ್ವರವಿರಚಿತಾಯಾಂ- ಶಿವಯೋಗಪ್ರದೀಪಿಕಾಯಾಂ-ಸಾಂಖ್ಯತಾರಕಯೋಗ ಪಟಲಶ್ಚತುರ್ಥಃ



## ಶ್ರೀ ಶಿವಾಯ ಪರಬ್ರಹ್ಮಣೇನಮಃ.

## (ಅಥ ಪಂಚಮಃಪಟಲಃ.)

ಸೂ॥ ಅನಂತರದಲ್ಲಿ ಆಚಾರ್ಯನು ಈ ಪೂರ್ವೋದಿತವಾದ ತಾರಕಯೋಗಸಿದ್ಧಿಗೆ ಸಾಧನಂಗಳಾದ ಬಹುವಿಧೋಪಾಯಂಗಳಂ ಪೇಳಲಾ ಲಕ್ಷ್ಯಗಳೊಳಗೆ ಅತಿಗೋಪ್ಯವಾದ ದಿವ್ಯಲಕ್ಷ್ಯಮಂ ಕುರುಹಿಡಲುದ್ಯೋಗಿಸುತಿರ್ದಪಂ:—

ಶ್ಲೋ॥ ಪುನಶ್ಚಾತಿರಹಸ್ಯಂಚಜ್ಯೋತಿಷಾಂನಿಲಯಂಮಹತ್ ।
ದಿವ್ಯಲಿಂಗಸ್ಥಲಂದೃಷ್ಟಮಂತರ್ಲಕ್ಷ್ಯಾತ್ಮಕಂಶೃಣು ॥೧॥

ಟೀ॥ ಎಲೆಶಿಷ್ಯನೆ, ಪುನಶ್ಚ-ಮರಳಿಯೂ, ಅತಿರಹಸ್ಯಂ-ತತ್ವತಾತ್ವಿಕಮಧ್ಯದೊಳ್ ಶಾಸ್ತ್ರವಮೂಹಂಗಳೊಳತಿಗೋಪ್ಯವಾದಂಥ, ಜ್ಯೋತಿಷಾಂ-ಊರ್ಧ್ವಭುವನ ಮಧ್ಯಭುವನ ಅಧೋಭುವನದ ಬೆಳಗುಗಳಿಗೆ, ನಿಲಯಂಚ-ಆಶ್ರಯವಾಗಿರ್ಪಂಥ ಮಹತ್-ಸಕಲಪ್ರಪಂಚವ ನೊಳಕೊಂಬುದರಿಂ ಮಹದ್ರೂಪವಾದಂಥ, ಅಂತರ್ಲಕ್ಷ್ಯಾತ್ಮಕಂ-ಅಂತರ್ಲಕ್ಷ್ಯರೂಪವಾದಂಥ, ದೃಷ್ಟಂ-ಪ್ರತ್ಯಕ್ಷಪ್ರಮಾಣಗೋಚರವಾದಂಥ, ದಿವ್ಯಲಿಂಗಸ್ಥಲಂ-ದಿವ್ಯವಾದ ಲಿಂಗಸ್ಥಲವನು, ಶೃಣು-ಕೇಳು. (ತಾತ್ಪರ್ಯ-ಸುಷುಪ್ತ್ಯವಸ್ಥೆಯಲ್ಲಿ ಸಕಲವ್ಯವಹಾರಕ್ಕೆ ಲಯಸ್ಥಾನವೆನಿಸುವುದಾಗಿ, ಜಾಗ್ರದವಸ್ಥೆಯಲ್ಲಿ ಸಕಲಕ್ಕೆ ಗಮನಸ್ಥಾನವೆನಿಸುವುದಾಗಿ, ಊರ್ಧ್ವಮುಖವಾಗಲ್-ಲಯಸ್ಥಾನವೆನಿಸಿ, ಅಧೋಮುಖವಾಗಲ್ ಗಮನಸ್ಥಾನವೆನಿಪುದರಿಂ ಲಿಂಗಸ್ಥಾನವೆನಿಸಿ, ಕದಂಬಗೋಳಕಾಕಾರವಾದ ಅಕಾರ ಉಕಾರ ಮಕಾರಂಗಳೆಂಬ ಮಂಡಲತ್ರಯಮಧ್ಯವರ್ತಿಯಾಗಿರ್ದು ಸಾಕ್ಷಾತ್ಕಾರಮೆನಿಸಿದ ಶಿವಲಿಂಗವೇ ಅಂತರ್ಲಕ್ಷ್ಯವೆಂಬುದಭಿಪ್ರಾಯಂ. "ಕದಂಬಗೋಳಕಾಕಾರಸ್ಸ್ಫುರತ್ಕಿರಣಮಾಲಿಕಃ" ಎಂದುದಾಗಿ.) ॥೧॥

ಸೂ॥ "ಪದ್ಮಕೋಶಪ್ರತೀಕಾಶಂಹೃದಯಂಚಾಪ್ಯಧೋಮುಖಂ । ತಸ್ಯಾಂತೇಸುಷಿರಂಸೂಕ್ಷ್ಮಂತಸ್ಮಿನ್ಸರ್ವಂಪ್ರತಿಷ್ಠಿತಂ" ಎಂಬ ಶ್ರುತಿಪ್ರಮಾಣದಿಂದೆ ಜ್ಞಾನಾನುಗ್ರಹೋನ್ಮುಖನಾದಾಚಾರ್ಯನು ಈ ಅಂತರ್ಲಕ್ಷ್ಯವನೇ ಶಿಷ್ಯಂಗೆ ಕೈದೋರಿಕೆಯಾಗಿ ಪೇಳ್ದಪಂ:—

ಶ್ಲೋ॥ ನಾಂತಸ್ಥಂನಬಹಿರ್ವ್ಯಾಪ್ತಮಪರೋಕ್ಷಸ್ವರೂಪಕಂ ।
ಆಕಾಶಾಭ್ಯಂತರಾಕಾಶಮಂತರ್ಲಕ್ಷ್ಯಂತದೇವಹಿ ॥೨॥

ಟೀ॥ ಯತ್-ಆವುದಾನೊಂದುಲಕ್ಷ್ಯರೂಪವಾದವಸ್ತು, ಅಂತಸ್ಥಂ-ಅಂತರಂಗದಲ್ಲಿಯೇ ಇರ್ದಂತಹುದು, ನ-ಅಲ್ಲ. (ಭಾವಶುದ್ಧಿಯಿಂ ಬಲಿದ ಧ್ಯೇಯಮೂರ್ತಿಯಂತೆ ಭಾ

ವಮಾತ್ರಕ್ಕೆ ಗೋಚರವಲ್ಲವೆಂಬುದರ್ಥಂ) ಬಹಿರ್ವ್ಯಾಪ್ತಂ-ಬಾಹ್ಯದಲ್ಲಿಯೇ ವ್ಯಾಪಿಸು ತ್ತಿರ್ಪಂತಹುದು, ನ-ಅಲ್ಲ. (ಭೂತಪಂಚಕಾದಿಗಳ ವರ್ಣಂಗಳಂತೆ ಬಾಹ್ಯದಲ್ಲಿಯೇ ಇದಿರಿಟ್ಟು ಕಾಣಿಸಿಕೊಂಬುದಲ್ಲವೆಂಬುದರ್ಥಂ) ಅಪರೋಕ್ಷಸ್ವರೂಪಕಂ-ದೇಹಳಿದೀಪ ನ್ಯಾಯದಂತೆ ಹೊರಗೊಳಗೆ ಬೆಳಗುತ್ತ ಪ್ರತ್ಯಕ್ಷರೂಪವಾದಂಥ, ಆಕಾಶಾತ್ಯಂತರ ಕಾಶಂ-ಹೃದಯಾಕಾಶಮಧ್ಯದ ಗೋಳಕಾಕಾರವಾದ ದಿವ್ಯಾಕಾಶವುಂಟೋ, ತದೇ ವ-ಅದೇ, ಅಂತರ್ಲಕ್ಷ್ಯಂಹಿ-ಅಂತರ್ಲಕ್ಷ್ಯವಲಾ. (ತಾತ್ಪರ್ಯ—" ಯದಿದಮಸ್ಮಿನ್ ಬ್ರಹ್ಮಪುರೇದಹರಂ ಪುಂಡರೀಕಂವೇಶ್ಮ ದಹರೋಽಸ್ಮಿನ್ನಂತರಾಕಾಶಃ ತಸ್ಮಿನ್ಯದಂತ ಸ್ತದನ್ವೇಷ್ಟವ್ಯಂ,,-ಈ ಅಕ್ಷರತ್ರಯರೂಪದಿಂ ಬ್ರಹ್ಮಪುರವೆನಿಸುವ ಮಂಡಲತ್ರಯ ದಲ್ಲಿ ಆವುದಾನೊಂದು ಹೃದಯಕಮಲವೆಂಬ ಮನೆಯಲ್ಲಿಯು ಬಿಂದ್ವಾಕಾಶಮಧ್ಯದ ಲ್ಲಿ ಪರಮಾತ್ಮನು ಅರಸಲು ಯೋಗ್ಯನು, ಎಂಬ ಶ್ರುತಿಪ್ರಮಾಣದಿಂದೀ ಹೃದಯಾಕಾಶಮ ಧ್ಯದ ದಿವ್ಯಲಿಂಗಸ್ಥಲವೇ ಅಂತರ್ಲಕ್ಷ್ಯವೆಂಬುದಭಿಪ್ರಾಯಂ.) ||೨||

ಸೂ|| ಈ ದಿವ್ಯಲಕ್ಷ್ಯಮಂ ಕಾಣ್ಬುದಕ್ಕೆ ಪರಮೋಪಾಯವಾದ ಮುದ್ರಾಸ್ವ ರೂಪಮಂ ಪೇಳ್ದಪಂ:—

ಶ್ಲೋ|| ಲಕ್ಷ್ಯಲೀನಮನಸಾಽನಿಲೇನ ಯೋ ವರ್ತತೇಽಚಲಿತತಾರ
ಯಾಭವೇತ್ | ಖೇಚರೀಯಮಥಸೈವಶಾಂಭವೀ ಮುದ್ರ
ಯಾ ಸತು ತಯಾಜಗದ್ಗುರುಃ ||೩||

ಟೀ|| ಯಃ-ಆವನಾನೊರ್ವಯೋಗೀಶ್ವರನು, ಲಕ್ಷ್ಯಲೀನಮನಸಾ-ಪೂರ್ವೋಕ್ತ ವಾದ ದಿವ್ಯಲಿಂಗವೆಂಬಂತರ್ಲಕ್ಷ್ಯದಲ್ಲಿ ಮುಳುಗಿದ ಮನದಿಂದಪ್ಪ, ಅನಿಲೇನ-ಆ ಮನದೊಡನೆಕೂಡಿ ನಿಂದ ವಾಯುವಿನಿಂದಪ್ಪ, ಅಚಲಿತತಾರಯಾ-ಮನೋಮಾರು ತಂಗಳ ನಿಶ್ಚಲತ್ವದಿಂ ಚಲಿಸದ ತಾರಕಮಂಡಲದಿಂದಪ್ಪ, ವರ್ತತೇ-ವರ್ತಿಸುತ್ತಿರ್ದ್ದನೋ ಇಯಂ-ಇದು, ಖೇಚರೀ-ಖೇಚರೀಮುದ್ರೆಯು, ಭವೇತ್-ಅಹುದು. ಅಥ-ಅನಂತರ ದಲ್ಲಿ, ಸೈವ-ಆ ಖೇಚರೀಮುದ್ರೆಯೇ, ಶಾಂಭವೀ-ಶಾಂಭವೀಮುದ್ರೆಯೆನಿಸುವುದು;ತ ಯಾಮುದ್ರಯಾ-ಆ ಖೇಚರೀಮುದ್ರೆಯಿಂದೆ, ಸತು-ಆ ಯೋಗೀಶ್ವರನಾದೊಡೆ, ಜಗ ದ್ಗುರುಃ-ಲೋಕಾಚಾರ್ಯನೆನಿಸುವನು. (ತಾತ್ಪರ್ಯ—" ಮುದ್ರೇಯಂಶಾಂಭವೀಚಿ ತ್ತಮಂತಶ್ಚಕ್ಷುರ್ಬಹಿಸ್ಸ್ಥಿರಂ,, ಎಂದುದಾಗಿ, ಈ ಖೇಚರೀಮುದ್ರಾಭ್ಯಾಸಮಂ ಮಾ ಡುವಾತನು ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥಾತ್ರಯಂಗಳಂ ಕ್ರಮದಿಂ ದೃಷ್ಟಿ ಮನೋಮಾರುತಂಗಳ ನಿಶ್ಚಲತ್ವದಿಂ ಗಲಿಸಿ ಲೋಕಪೂಜ್ಯನಪ್ಪನೆಂಬುದಭಿಪ್ರಾಯಂ. " ಸ್ಥಿರತ್ವಮಾಗತಾದೃಷ್ಟಿರ್ಜಾಗ್ರತ್ವಂನಾಶಯೇತ್ಸದಾ | ಮನಸ್ಸ್ಥಿರತ್ವಮಾಪನ್ನಂ ಸ್ವಪ್ನಂನಾಶಯತಿಧ್ರುವಂ || ಪವನೇನಿಶ್ಚಲೇಯತ್ರಸುಷುಪ್ತಿಃಕ್ಷಯಮಾಗತಾ " ಎಂ ದುದಾಗಿ.) ||೩||

ಸೂ॥ ನಿರಾಯಾಸದಿಂ ತಾರಕಬ್ರಹ್ಮಸಾಕ್ಷಾತ್ಕಾರಮಂ ಮಾಳ್ಪುದಾಗಿ ಈ ಅಂತಃಖೇಚರೀಮುದ್ರೆಯೇ ಬಾಹ್ಯಖೇಚರಿಯಿಂದತಿವಿಶಿಷ್ಟವೆಂದು ಪೇಳ್ದಪಂ:—

ಶ್ಲೋ॥ ಲೋಕೇಽಂತಃಖೇಚರೀಮುದ್ರಾಮಜ್ಞಾತ್ವಾಬಾಹ್ಯಖೇಚರೀಂ। ಅವಲಂಬ್ಯತ್ವರಾಃಕೇಚಿಜ್ಜಿಹ್ವಾಚ್ಛೇದನಕರ್ಮಣಿ ॥೪॥

ಟೀ॥ ಲೋಕೇ-ಈಲೋಕದಲ್ಲಿ, ಕೇಚಿತ್-ಕೆಲಯೋಗಿಗಳು, ಅಂತಃಖೇಚರೀಮುದ್ರಾಂ-ಈಪೂರ್ವೋದಿತವಾದ ಸೂಕ್ಷ್ಮಖೇಚರೀಮುದ್ರೆಯನು, ಅಜ್ಞಾತ್ವಾ-ಅರಿಯದೆ, ಬಾಹ್ಯಖೇಚರೀಂ-ಬಹುಪ್ರಯಾಸವಾದ ಲಂಬಿಕಾಯೋಗವೆನಿಸುವ ಬಾಹ್ಯಖೇಚರಿಯನು, ಅವಲಂಬ್ಯ-ಆಶ್ರಯಿಸಿ, ಜಿಹ್ವಾಚ್ಛೇದನಕರ್ಮಣಿ-ನಾಲಗೆಯಸೀಳ್ವವ್ಯಾಪಾರದಲ್ಲಿ, ತ್ವರಾಃ-ಆತುರವುಳ್ಳವರಾಗುತ್ತಿಹರು. (ತಾತ್ಪರ್ಯ—„ಕಪಾಲಕುಹರೇಜಿಹ್ವಾಪ್ರವಿಷ್ಟಾವಿಪರೀತಗಾ। ಭ್ರುವೋರಂತರ್ಗತಾದೃಷ್ಟಿರ್ಮುದ್ರಾಭವತಿಖೇಚರೀ„ ಎಂಬ ಬಾಹ್ಯಖೇಚರಿಮಭ್ಯಾಸದಿಂ ಕಪಾಲಕುಹರಾಂತರ್ಗತವಾದ ಶ್ಲೇಷ್ಮರಸಾಸ್ವಾದನಮಂ ಮಾಳ್ಪಹಠಯೋಗಿಯಿಂದಮಾ ಈ ಸೂಕ್ಷ್ಮಖೇಚರೀಮುದ್ರಾಭ್ಯಾಸದಿಂ ಪರಮಾನಂದರಸಾಸ್ವಾದನಮಂ ಮಾಳ್ಪ ರಾಜಯೋಗೀಶ್ವರನೇ ವಿಶಿಷ್ಟನೆಂಬುದಭಿಪ್ರಾಯಂ.)॥೪॥

ಸೂ॥ „ನಾಂತಸ್ಥಂನಬಹಿಸ್ಸ್ಥಂ„ ಎಂಬ ಗ್ರಂಥದಲ್ಲಿ ಸೂಚಿತವಾದ ಈ ದಿವ್ಯಲಿಂಗದ ಸ್ಥಲದೊಳ್ ಕಾಣ್ಬುದೆಂದು ಕೈದೋರ್ಪಯಾಗಿ ಗ್ರಂಥದ್ವಯದಿಂ ಪೇಳ್ದಪಂ:—

ಶ್ಲೋ॥ ತಾಲುಮೂಲದ್ವಾದಶಾಂತಮಧ್ಯಂಪ್ರತ್ಯಕ್ಕಲಾತ್ಮಕಂ।
ಯತ್ತಸ್ಮಿನ್ಜ್ಯೋತಿಷಿಮನೋದತ್ವಾನಿಜಹೃದಿಕ್ರಮಾತ್ ॥೫॥

ಟೀ॥ ತಾಲುಮೂಲದ್ವಾದಶಾಂತಮಧ್ಯಂ-ತಾಲುಮೂಲ-ಷೋಡಶಸ್ವರಾತ್ಮಕವಾದಂಥ ವಿಶುದ್ಧಿಚಕ್ರದ, ದ್ವಾದಶಾಂತ-ದ್ವಾದಶಾಂತವೆನಿಸುವ ಬ್ರಹ್ಮರಂಧ್ರದ, ಮಧ್ಯಂ-ಮಧ್ಯಸ್ಥಾನವಾದಂಥ, ಪ್ರತ್ಯಕ್ಕಲಾತ್ಮಕಂ-ಸಾಕ್ಷಾತ್ಕಾರವಾದ ಚೈತನ್ಯಕಲಾಸ್ವರೂಪವಾದಂಥ, ಯತ್-ಆವುದಾನೊಂದುಸ್ಥಾನವುಂಟೋ, ತಸ್ಮಿನ್ಜ್ಯೋತಿಷಿ-ಆ ತೇಜೋರೂಪವಾದಂಥ,ನಿಜಹೃದಿ-ನಿಜವಾದ ದಿವ್ಯಹೃದಯವೆನಿಸುವ ಸ್ಥಾನದಲ್ಲಿ, ಕ್ರಮಾತ್-ಈ ಪೂರ್ವೋದಿತವಾದ ಖೇಚರೀಮುದ್ರಾಭ್ಯಾಸಕ್ರಮದತ್ತಣಿಂದೆ, ಮನಃ-ಮನಸ್ಸನು, ದತ್ವಾ-ನಿಲಿಸಿ, ಪಶ್ಯೇತ್-ದಿವ್ಯಲಿಂಗಮಂ ಕಾಣ್ಬುದೆಂದು ಮುಂದಣ ಕ್ರಿಯೆಯೊಡನೆ ಸಂಬಂಧವು. (ತಾತ್ಪರ್ಯ-ವಿಶುದ್ಧಿ ಚಕ್ರಬ್ರಹ್ಮಚಕ್ರಂಗಳ ಮಧ್ಯಸ್ಥಾನವೆನಿಸಿ ಸಾಕ್ಷಾತ್ಕಾರವಾಗಿ ಲೋಚನದ್ವಯಾಂತರ್ಗತವಾದ ಜ್ಯೋತಿರ್ಮಂಡಲಾತ್ಮಕವೇ ಹೃದಯಾಕಾಶವೆನಿಸುವುದಾಗಿ, ಈ ಹೃದಯಾಕಾಶದಲ್ಲಿ ಖೇಚರೀಮುದ್ರೆಯಿಂ ದಿವ್ಯಲಿಂಗಮಂ ಕಾಣ್ಬುದಾಗಿ „ ಸಪಷೋಽಂತಹೃದಯಆಕಾಶಃ ತಸಿನ್ನಯಂಪುರು

ಷೋಽಮನೋಮಯಃ ಅಮೃತೋಹಿರಣ್ಮಯಃ ಅಂತರೇಣ ತಾಲುಕೇ ಯಏಷಸ್ತನ ಇವಾವಲಂಬತೇ ಸೇಂದ್ರಯೋನಿಃ ಯತ್ರಾಸೌಕೇಶಾಂತೋವಿವರ್ತತೇ,,—ತಾಲುವಿನಕೇ ಶಾಂತಮಧ್ಯದಲ್ಲಿ ದಿವ್ಯಲಿಂಗಕ್ಕೆ ಪೀಠವಾಗಿ ಜೋಲಾಡುವ ಸ್ತನದೋಷಾದಿಯಲ್ಲಿ ಗೋಳಕವಾಗಿರ್ದಪುದು. ಆ ಇದು ಅಂತರ್ಹೃದಯಾಕಾಶವೆನಿಸುವುದು. ಅಲ್ಲಿ ಮನೋಮಯನಾದ ಅಮೃತರೂಪನಾದ ಹಿರಣ್ಮಯನಾದ ಪುರುಷನೂರ್ಧ್ವಮುಖನಾಗಿ ವರ್ತಿಸುವನೆಂಬಶ್ರುತಿಪ್ರಮಾಣದಿಂದೀಹೃದಯದೊಳೀಲಿಂಗವಂ ಕಾಣ್ಬುದೆಂಬುವಭಿಪ್ರಾಯಂ.॥

ಶ್ಲೋ॥ ದೃಷ್ಟಿಸ್ತುಪೂರ್ಣಿಮಾಜ್ಞೇಯಾದೃಶ್ಯಮಾದೌತಮೋಮಯಂ । ತನ್ಮಧ್ಯೇಮನಸಾಪಶ್ಯೇಜ್ಜ್ಯೋತಿರ್ಲಿಂಗಂಸುನಿಶ್ಚಲಂ ॥೬॥

ಟೀ॥ ಆದೌ-ಪ್ರಥಮಾಭ್ಯಾಸನಲ್ಲಿ, ದೃಷ್ಟಿಸ್ತು-ಆ ಯೋಗೀಶ್ವರನ ನೋಟವಾದೊಡೆ, ಪೂರ್ಣಿಮಾ-ವ್ಯಾಪಕಸ್ವರೂಪವುಳ್ಳುದಾಗಿ, ಜ್ಞೇಯಾ-ಅರಿಯುಲುಯೋಗ್ಯವು, ದೃಶ್ಯಂ-ಅದರಿಂದನೋಡಯೋಗ್ಯವಾದಲಕ್ಷ್ಯವು, ತಮೋಮಯಂ-ಕೃಷ್ಣತಾರಾರೂಪವಾದ ಬಿಂದುಸ್ವರೂಪವೆಂದರಿಯುಲುಯೋಗ್ಯವು. ತನ್ಮಧ್ಯೇ-ಆ ಕೃಷ್ಣತಾರಾಮಂಡಲಧಮಧ್ಯದಲ್ಲಿ, ಮನಸಾ-ಶುದ್ಧಚಿತ್ತದಿಂದ, ಸುನಿಶ್ಚಲಂ-ಅತ್ಯಂತವೂ ಚಲಿಸದಿರುವಂಥ, ಜ್ಯೋತಿರ್ಲಿಂಗಂ-ಪರಮಾತ್ಮಜ್ಯೋತಿಸ್ವರೂಪವಾದಲಿಂಗವನು, ಪಶ್ಯೇತ್-ಕಾಣ್ಬುದು. (ತಾತ್ಪರ್ಯ—“ ಚಕ್ಷುರ್ವೈಬ್ರಹ್ಮಚಕ್ಷುರ್ವೈಬ್ರಹ್ಮೇತ್ಯಪಶ್ಯತೋಹಿಕಿಂಸ್ಯಾತ್ಪರಮಂಬ್ರಹ್ಮಸ್ವೈನಂಚಕ್ಷುರ್ಜಹಾತಿ”ಇಲ್ಲಿ ನಯನವೇ ತಾರಕಬ್ರಹ್ಮವು;ನಯನವೇ ಬ್ರಹ್ಮವೆಂದು ಕಾಣದಾತಂಗೆ ಏನಪ್ಪುದು? ಪರಬ್ರಹ್ಮನೀನೇತ್ರವಂಬಿಟ್ಟರದು. ಎಂಬ ಶೃತಿಗಳ ಪ್ರಮಾಣದಿಂದೀನೇತ್ರಮಧ್ಯಸ್ಥಿತವಾದ ಕೃಷ್ಣತಾರಾಮಂಡಲವೇ ದಿವ್ಯಲಿಂಗಸ್ಥಲವಾದ ಬಿಂದುವೆನಿಸಿಕೊಂಬುದಾಗಿ, ಅದನೇ ಲಕ್ಷಿಸುವುವೆಂಬುವಭಿಪ್ರಾಯಂ “ ಕೃಷ್ಣಂಸ್ವಚ್ಛಂತುಯನ್ನಿತ್ಯಂನೇತ್ರಮಧ್ಯೇವ್ಯವಸ್ಥಿತಂ । ಸಪಿಂಡಂಶಿವಿಜ್ಞೇಯೋಯತ್ರಾತ್ಮಾದೃಶ್ಯತೇಸ್ಥಿತಃ ॥ ಚಕ್ಷುರ್ಮಧ್ಯಸ್ಥಿತಾಯಾತುಶಕ್ತಿಃಪ್ರಣವರೂಪಿಣೀ । ಸಾಬ್ರೈಂದವೀತಮಃಪಾರೇತಮೂಪ್ರೇಣವ್ಯವಸ್ಥಿತಾ,, ಎಂದುದಾಗಿ) ॥೬॥

ಸೂ॥ ಈ ದಿವ್ಯಲಿಂಗಾನುಸಂಧಾನಕ್ಕೆ ಸಾಧನವಾದ ಖೇಚರೀಮುದ್ರೆಯುಳ್ಳ ನಾಸಿಕಾಗ್ರವೆಂಬ ಸ್ಥಾನಭೇದದಿಂ ಶಾಂಭವೀಮುದ್ರೆಯೆಂದು ಪೇಳ್ದಪಂ:—

ಶ್ಲೋ॥ ನಾಸಾಗ್ರದತ್ತನಿಮಿಷೋನ್ಮಿಷಬಾಹ್ಯದೃಷ್ಟ್ಯಾಲಕ್ಷ್ಯೇತ್ಸದಾಶಿವವಿಮರ್ಶಕಗೂಢದೃಷ್ಟ್ಯಾ । ಜ್ಯೋತಿಸ್ಸ್ವರೂಪಮಚಲಂಹೃದಿಬಾಹ್ಯಹೀನಂಪಶ್ಯಂತಿಯೇತ ಇಹ ಸಾಯಮಿನಃಕೃತಾರ್ಥಾಃ ॥೭॥

ಟೀ॥ ನಾಸಾಗ್ರದತ್ತನಿಮಿಷೋನ್ಮಿಷಬಾಹ್ಯದೃಷ್ಟ್ಯಾ-ನಾಸಿಕಾಗ್ರದಲ್ಲಿರಿಸಲ್ಪಟ್ಟ ನಿಮಿಷೋನ್ಮೇಷಗಳಿಲ್ಲದ ನೇತ್ರಂಗಳುಳ್ಳಂಥ, ಸದಾಶಿವವಿಮರ್ಶಕಗೂಢದೃಷ್ಟ್ಯಾ-ಸಕಲನಿಷ್ಕಲಾತ್ಮಕವಾದ ದಿವ್ಯಲಿಂಗವನಾರತಲ್ಲಿ ಮುಳುಗಿದ ನೋಟದಿಂದ, ಲಕ್ಷ್ಯೇ-ಲಕ್ಷಿಸಲುಯೋಗ್ಯವಾಗಿರ್ಪಂಥ, ಹೃದಿ-ಹೃದಯದಲ್ಲಿ, ಅಚಲಂ-ಚಲಿಸದಿರ್ಪಂಥ, ಜ್ಯೋತಿಸ್ಸ್ವರೂಪಂ-ಜ್ಯೋತಿರ್ಮಂಡಲಾಕಾರವನು, ಬಾಹ್ಯಹೀನಂ-ಬಾಹ್ಯವ್ಯಾಪಾರವಿಲ್ಲದಿಹಣ ಹೇಂಗಹುದುಹಾಂಗೆ, ಯೇ-ಆರುಕೆಲಯೋಗೀಶ್ವರರು, ಪಶ್ಯಂತಿ-ಕಾಣುತ್ತಿದ್ದಾರೋ, ತೇ-ಆ ದಿವ್ಯಲಿಂಗವುಂ ಕಾಣ್ಬಂಥ, ಸುಯಮಿನಃ-ಯತೀಶ್ವರರು, ಇಹ-ಈಲೋಕದಲ್ಲಿ, ಕೃತಾರ್ಥಾಃ-ಜೀವನ್ಮುಕ್ತರಾಗುವರು. (ತಾತ್ಪರ್ಯ-ಈಮುದ್ರೆಯೊಳ್ ನಾಸಿಕಾಗ್ರದದೃಷ್ಟಿಯಿಂದೆ ನಾದಾನುಸಂಧಾನವಂ ಮಾಳ್ಪ ಮನದೊಳ್ಕೂಡಲು ಪೂರ್ವಶಾಂಭವಿಯೆನಿಪುದು. ಆ ನಾಸಿಕಾಗ್ರದೃಷ್ಟಿಯೂ ಮನವೂ ನಾದಬ್ರಹ್ಮದಲ್ಲಿ ಮುಳುಂಗ ಉತ್ತರಶಾಂಭವಿಯೆನಿಸುವುದಾಗಿ, ಈಶಾಂಭವೀದ್ವಯದಿಂ ನಾದಾನುಸಂಧಾನವಂ ಮಾಳ್ಪುದೆಂಬುದಭಿಪ್ರಾಯಂ.) "ಅಂತರ್ಲಕ್ಷ್ಯಂಬಹಿರ್ದೃಷ್ಟಿರ್ನಿಮೇಷೋನ್ಮೇಷವರ್ಜಿತಂ । ಏಷಾಸಾ ಶಾಂಭವೀಮುದ್ರಾಸರ್ವತಂತ್ರೇಷುಗೋಪಿತಾ ॥ ಶಾಂಭವೀದ್ವಿವಿಧಾಪ್ರೋಕ್ತಾ ಪೂರ್ವೋತ್ತರವಿಭೇದತಃ" ಎಂದುದಾಗಿ.) ॥೭॥

ಸೂ॥ ಈ ದಿವ್ಯಲಿಂಗವನೇ ಪೂರ್ವೋದಿತವಾದ ಮುದ್ರೆಯಿಂ ಕಾಣ್ಬ ಭೇದವಂ ಪೇಳ್ದಪಂ:—

ಶ್ಲೋ॥ ಪಶ್ಚಿಮಾಭಿಮುಖಂಲಿಂಗಮಭಿನ್ನವಲಯಾಕೃತಿಂ ।
ತ್ವಂಪೂರ್ವಾಭಿಮುಖೋಭೂತ್ವಾಪಶ್ಯಪಶ್ಯಮಹಾದ್ಭುತಂ॥೮॥

ಟೀ॥ ಪಶ್ಚಿಮಾಭಿಮುಖಂ-ಪಶ್ಚಿಮದ್ವಾರವೆನಿಸುವ ದಿವ್ಯಾನಂದಸ್ಥಾನವಾದ ಭ್ರೂಮಧ್ಯದ ಸುಷುಮ್ನೆಗಭಿಮುಖವಾದಂಥ, ಅಭಿನ್ನವಲಯಾಕೃತಿಂ-ಲೋಚನದ್ವಯದ ಮಧ್ಯದಲ್ಲಿ ಎರಡೆನಿಸಿಯೂ ಮುದ್ರೆಯಿದೇ ಭ್ರೂಮಧ್ಯದಲ್ಲಿ ಅಭಿನ್ನಮಂಡಲಾಕಾರವಾದಂಥ, ಲಿಂಗಂ-ದಿವ್ಯಲಿಂಗವನು, ತ್ವಂ-ನೀನು, ಪೂರ್ವಾಭಿಮುಖಃ-ಆ ಲಿಂಗಾವಲೋಕನಕ್ಕೆಸಂಮುಖವಪ್ಪಂತೆ ಪೂರ್ವಾಭಿಮುಖವುಳ್ಳಾತನು, ಭೂತ್ವಾ-ಆಗಿ, ಮಹಾದ್ಭುತಂ-ಮಹಾಶ್ಚರ್ಯವಪ್ಪಂತೆ, ಪಶ್ಯಪಶ್ಯ-ಮರಳಿಮರಳಿನೋಡು. (ತಾತ್ಪರ್ಯ-ಸತ್ವರಜಸ್ತಮೋಗುಣ ಗಳೆಂಬ ಮಂಡಲತ್ರಯಂಗಳ ಬೆಳಗ ನೊಳಕೊಂಡ ತಾರಾಮಂಡಲಂಗಳೆರಡಂ ಭ್ರೂಮಧ್ಯಸ್ಥಾನದೊಳೈಕ್ಯವಂಮಾಡಿ, ಶಾಂಭವೀಮುದ್ರಾನುಸಂಧಾನದಿಂ ಮರಳಿಮರಳಿ ಆಲೋಕನಂಗೈಯಲಾ ಮುಂದೆ ಪೇಳ್ವ ಮಹದಾಶ್ಚರ್ಯಂಗಳತಿಶೀಘ್ರದಿಂ ಕಾಣಿಪುವಾಗಿ, "ತಯೋಃಶೇಷಸಂಸ್ಥಾಪೋಯಃಪಿಷಾಂತರ್ಹೃದಯಾಕಾಶಃ ಯದಿತದಂತರ್ಹೃದಯೇ ಜಾಲಕವಿವಾಥ್ಯನಯೋಃಶೇಷಾಕೃತಿಃ" ಆವಾ ಮದಕ್ಷಿಣನೇತ್ರಂಗಳಲ್ಲಿ ಸತೀಪತಿರೂಪವಾದ ಚಿಂಸುಮ್ಮಯದ ಕೂಟವೇ ಅಂತರ್ಹೃದಯಾಕಾಶವೆನಿಪುದು.

ಈ ಅಂತರ್ಹೃದಯ ಮಧ್ಯದಲ್ಲಿ ಗವಾಕ್ಷದಂತಿಪ್ಪ ಪರಮಸೂಕ್ಷ್ಮದ್ವಾರದಲ್ಲಿ ಈ ಜ್ಞಾನಪರಮರ ದಿವ್ಯಪ್ರಕಾಶಂ ಪಸರಿಸುವುದೆಂಬ ಶ್ರುತಿಪ್ರಮಾಣದಿಂ ಪತ್ರ್ಯೈಶ್ವರ್ಯಂಗಳ್ ಕಾಣಿಪುವೆಂಬುವಭಿಪ್ರಾಯಂ .“ ಮೂಲಾವಲೋಕಿನೀ ಪೂರ್ವಮುಖೀ ಸಂಧಾನರೂಪಿಣೀ। ಬೋಧಮುದ್ರಾಧ್ಯಾನಮುದ್ರಾ ಶಾಂಭವೀತ್ಯೇಕವಾಚಕಂ ” ಎಂತುದಾಗಿ, ಈ ಶಾಂಭವೀಮುದ್ರಾನುಸಂಧಾನವೇ ಪೂರ್ವಾಭಿಮುಖವೆನಿಸುವುದು.) ॥೭॥

ಸೂ॥ ಈ ದಿವ್ಯಲಿಂಗಸ್ವರೂಪವನುಂ ಶ್ರುತಿಪ್ರಮಾಣದಿಂ ತೋರಿಸುತ್ತೆ ಅದು ದಿವ್ಯಜ್ಞಾನಿಗಳ್ಗೆಯೇ ಗೋಚರವಪ್ಪುದೆಂದು ಪೇಳುತ್ತದರ ಸ್ಥಾನವುಂ ಪ್ರಕಾರಾಂತರದಿಂ ಪೇಳ್ದಪಂ:—

ಶ್ಲೋ॥ ಯದಾಪೋಜ್ಯೋತಿರೋಂಕಾರಬ್ರಹ್ಮಾಮೃತಶಿವಾತ್ಮಕಂ ॥
ಪಶ್ಯಂತಿ ಸೂರಯೋಽಶಾಂತಂ ತದ್ವಿಷ್ಣೋಃ ಪರಮಂಪದಂ॥

ಟೀ॥ ಆಪೋಜ್ಯೋತಿಃ-ಲೋಚನಾಂತರ್ಗತವಾದ ಜಲದೊಳಗಣ ಜ್ಯೋತಿಯಾಗಿರ್ಪಂಥ, ಓಂಕಾರಬ್ರಹ್ಮ-ತಾರಕಬ್ರಹ್ಮವೆನಿಸಿಕೊಂಬಂಥ, ಅಮೃತಶಿವಾತ್ಮಕಂ-ನಿತ್ಯನಿರ್ಮಲಾತ್ಮಕವಾದಂಥ, ಯತ್-ಆವುದಾನೊಂದು ದಿವ್ಯಲಿಂಗವನು, ಸೂರಯಃ-ಜ್ಞಾನಿಗಳಾದ ಯೋಗೀಶ್ವರರು, ಅಶಾಂತಂ-ಅನವರತವೂ, ಪಶ್ಯಂತಿ-ಕಾಣುತ್ತಹರೋ, ತತ್-ಆ ಲಿಂಗವು, ವಿಷ್ಣೋಃ-ವಿಷ್ಣುಸಂಜ್ಞೆಯುಳ್ಳ ಮೂಲಪ್ರಕೃತಿರೂಪವಾದ ತಮೋಗುಣದ ದೆಸೆಯಿಂದ, ಪರಮಂ-ಮೇಲಾಗಿರ್ಪಂಥ, ಪದಂ-ಸ್ಥಾನವು. (ತಾತ್ಪರ್ಯ—“ ಆಪೋಜ್ಯೋತಿರಸೋಽಮೃತಂ ಬ್ರಹ್ಮ ತದ್ವಿಷ್ಣೋಃಪರಮಂಪದಂ” ಎಂಬ ಶ್ರುತಿಪ್ರಮಾಣದಿಂದವೂ, “ ಲಿಂಗಮೂರ್ತಿ ಶಿವಜ್ಯೋತಿಸ್ತಮಸಶ್ಚೋಪರಿಸ್ಥಿತಂ” ಎಂಬ ಪುರಾಣಪ್ರಮಾಣದಿಂದವೂ ತಾರಾಮಂಡಲಾಗ್ರದಲ್ಲಿ ತಾರಕಬ್ರಹ್ಮಮುಂ ಕಾಣ್ಬುದೆಂಬುವಭಿಪ್ರಾಯಂ.) ॥೮॥

ಸೂ॥ ನಿರ್ಮಲಾಂತಃಕರಣನಾದ ಯೋಗೀಶ್ವರಂಗೆ ವಿಚಿತ್ರವಾಗಿ ತೋರುವ ದಿವ್ಯಲಿಂಗದ ಸ್ವರೂಪವನುಂ ಪೇಳ್ದಪಂ:—

ಶ್ಲೋ॥ ಪೂರ್ಣೇಂದುಬಿಂಬಮಿವ ಸನ್ಮಣಿದೀಪಿಕೇವ ಮಧ್ಯಾಹ್ನ
ಸೂರ್ಯಇವ ವಹ್ನಿಶಿಖೇವನಿತ್ಯಂ ॥ ವಿದ್ಯುತ್ಪ್ರಭೇವಶಿವಲಿಂ
ಗಮಹೋವಿಚಿತ್ರಂ ಲಕ್ಷ್ಯಾಂತರೇಜ್ವಲತಿಪಶ್ಯತುಚಕ್ಷುರಗ್ರೇ

ಟೀ॥ ಪೂರ್ಣೇಂದುಬಿಂಬಮಿವ-ಷೋಡಶಕಲಾಸಂಪೂರ್ಣವಾದ ಚಂದ್ರಮಂಡಲದಂತೆ, ಸನ್ಮಣಿದೀಪಿಕೇವ-ಸತ್-ನಕ್ಷತ್ರನಂತೆ, ಮಣಿದೀಪಿಕೇವ-ರತ್ನದೀಪದಂತೆ, ಮಧ್ಯಾಹ್ನಸೂರ್ಯಇವ-ಮಧ್ಯಾಹ್ನಸಮಯದ ಸೂರ್ಯಮಂಡಲದಂತೆ, ವಹ್ನಿಶಿಖೇವ-ಅಗ್ನಿಜ್ವಾಲೆಯಂತೆ, ವಿದ್ಯುತ್ಪ್ರಭೇವ-ಮಿಂಚಿನಬಳ್ಳಿಯಂತೆ, ಶಿವಲಿಂಗಂ-ಶುದ್ಧಸಾತ್ವಿಕಾ

ದುಗುಣಾತ್ಮಕವಾದ ಶಿವಲಿಂಗವು, ಲಕ್ಷ್ಯಾಂತರೇ-ಅಂತರ್ಲಕ್ಷ್ಯವೆನಿಸಿದ ಬಿಂದುಪೀಠಮಧ್ಯದಲ್ಲಿ, ವಿಚಿತ್ರಂ-ನಾನಾಪ್ರಕಾರವಾಗಿ, ಚಕ್ಷುರಗ್ರೇ-ಖೇಚರೀಮುದ್ರೆಯಿಂ ಮುದ್ರಿತವಾದ ಲೋಚನಾಗ್ರದಲ್ಲಿ, ಜ್ವಲತಿ-ಬೆಳಗುತ್ತಿದ್ದೀತು. ಪಶ್ಯತು-ನೋಡು. 'ಅಹೋ-ಆಶ್ಚರ್ಯವು. (ತಾತ್ಪರ್ಯ-ತಾರಕಬ್ರಹ್ಮವೆನಿಸುವ ಶಿವಲಿಂಗವೇ "ಬಿಂದುಮಧ್ಯಗತಂ ಸೂಕ್ಷ್ಮಸುಷಿರಂಜ್ಯೋತಿರೂಪಕಂ" ಎಂಬ ದಿವ್ಯನಾಳದಲ್ಲಿ ಯೋಗೀಶ್ವರರ್ಗೆ ದಿವ್ಯಾನಂದಮಂ ಪುಟ್ಟಿಸಲನಂತರೂಪದಿಂ ತೋರ್ಪುದಾಗಿ, "ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವಭಾಸ್ವರಾ। ನೀವಾರಶೂಕವತ್ತನ್ವೀ ಪೀತಾಭಾಸ್ವತ್ಯಣೂಪಮಾ" ಎಂಬ ಶ್ರುತಿಪ್ರಮಾಣದಿಂದವು, "ಸಓಂಕಾರೋಯಓಂಕಾರಃ ಸಪ್ರಣವೋಯಃಪ್ರಣವಃ ಸಸರ್ವವ್ಯಾಪೀ ಯಸ್ಸರ್ವವ್ಯಾಪೀ ಸೋಽನಂತೋಯೋಽನಂತಃ ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ಯದ್ವೈದ್ಯುತಂ ತತ್ಪರಬ್ರಹ್ಮೇತಿ ಸಏಕೋರುದ್ರಃ ಸಈಶಾನಸ್ಸಭಗವಾನ್ ಸಮಹೇಶ್ವರಃ ಸಮಹಾದೇವಃ"-ಕೃಷ್ಣತಾರಾಮಂಡಲಮಧ್ಯದಲ್ಲಿ ತೇಜೋರೂಪವಾದ ಪರಮಸೂಕ್ಷ್ಮದ್ವಾರಮುಂಟು. ಅಲ್ಲಿ ಕಾರ್ಮೋಡದ ಮಧ್ಯದ ಮಿಂಚಿನಬಳ್ಳಿಯಂತೆ ದೀಪ್ತವಾಗಿ ನೀವಾರಧಾನ್ಯದ ಮುಳ್ಳುಮೊನೆಯಂತೆ ಅಣುಮಾತ್ರವೆನಿಸಿ ಹೊಂಬಣ್ಣದಿಂ ಬೆಳಗುವ ಪ್ರಣವಶಕ್ತಿಯೇ ಓಂಕಾರಪ್ರಣವ ಸರ್ವವ್ಯಾಪಿ ಅನಂತತಾರಸೂಕ್ಷ್ಮ ಶುಕ್ಲವೈದ್ಯುತ ಪರಬ್ರಹ್ಮ ಏಕರುದ್ರ ಈಶಾನ ಭಗವಾನ್ ಮಹೇಶ್ವರ ಮಹಾದೇವ ಎಂಬದಿವ್ಯನಾಮಂಗಳಿಗೆ ವಾಚ್ಯವೆನಿಸಿಕೊಂಬುದೆಂಬ ಶ್ರುತಿಪ್ರಮಾಣದಿಂದೆ ವಿಚಿತ್ರರೂಪವಾದ ತಾರಕಬ್ರಹ್ಮವೇ ಪರಮಾತ್ಮರೂಪನಪ್ಪುದರಿಂದವನೆ ಲಕ್ಷಿಸುವುದೆಂಬುದಭಿಪ್ರಾಯಂ.) ॥೧೦॥

ಸೂ॥ ಬಾಹ್ಯಕ್ರಿಯಾವಿಲಾಸಂಗಳಂ ನಿಲಿಸಿ ಈ ಜ್ಞಾನಲಿಂಗಮಂ ಮಾನಸಕುಸುಮಂಗಳಿಂ ಪೂಜಿಪುದೆಂದು ಪೇಳ್ದಪಂ:—

ಶ್ಲೋ॥ ಆತ್ಮಲಿಂಗಮಿದಂ ಪಶ್ಯನ್ಕಿಮನ್ಯೈಃ ಕರ್ಮವಿಭ್ರಮೈಃ ॥
ಅಹಿಂಸಾದ್ಯಷ್ಟಪುಷ್ಪೈಸ್ತನ್ಮಾನಸೈರಂಗ ಪೂಜಯ ॥೧೧॥

ಟೀ॥ ಅಂಗ-ಎಲೆಸ್ನೇಹಿತನೆ, ಇದಂ-ಈ ಲೋಚನಾಗ್ರದಲ್ಲಿ ತೋರುವಂಥ, ಆತ್ಮಲಿಂಗಂ-ಬಿಂದುನಾದಾತ್ಮಕವಾದ ಪ್ರಾಣಲಿಂಗವಂ, ಪಶ್ಯನ್-ಕಾಣುತ್ತಿದ್ದಾತನಾಗುತವು, ಮಾನಸೈಃ-ಮನೋಜನಿತಂಗಳಾಗಿರ್ಪಂಥ, ಅಹಿಂಸಾದ್ಯಷ್ಟಪುಷ್ಪೈಃ-ಅಹಿಂಸೆ ಮೊದಲಾದೆಂಟು ಕುಸುಮಂಗಳಿಂದೆ, ತತ್-ಆ ಲಿಂಗವನೇ, ಪೂಜಯ-ಪೂಜಿಸು. ಅನ್ಯೈಃ-ಉಳಿದಂಥ, ಕರ್ಮವಿಭ್ರಮೈಃ-ಕ್ರಿಯಾವ್ಯವಹಾರಂಗಳಿಂದೆ, ಕಿಂ-ಏನು? ಕ್ರಿಯಾಲಿಂಗಮಂ ಜ್ಞಾನಗೂಡಿದ ಕ್ರಿಯೆಯಿಂ ಪೂಜಿಪುದಾಜ್ಞಾನಲಿಂಗಮಂ ಜ್ಞಾನಮಾತ್ರದಿಂದವೆ ಪೂಜಿಪುದಾಗಿ, "ದಹರಂ ವಿಪಾಪ್ಮಂ ಪರವೇಶ್ಮಭೂತಂ ಹೃತ್ಪುಂಡರೀಕಂ ಪುರಮಧ್ಯಸಂಸ್ಥಂ-ತತ್ರಾಪಿ ದಹರಂ ಗಗನಂ ವಿಶೋಕಂ ತಸ್ಮಿನ್ಯದಂತಸ್ತದುಪಾಸಿತವ್ಯಂ"-ಪಾಪರಹಿತ

ಮಾದ ಪರಮಾಶ್ರಯವಾದ ಬ್ರಹ್ಮಪುರಮಧ್ಯಸ್ಥವಾದ ಹೃದಯಕಮಲವುಂಟೋ ಆ ಕಮಲದಲ್ಲಿ ಪುಗಲ್ಪಾರದ ಪರಿಶೋಭಿತವಾದ ಬಿಲದ್ವಾರವುಂಟು. ಆ ಬಿಲದಲ್ಲಿ ದಿವ್ಯಲಿಂಗವುಂಟು. ಆ ದಿವ್ಯಲಿಂಗವೇ ಪೂಜಿಸಲು ಯೋಗ್ಯವೆಂಬ ಶೃತಿಪ್ರಮಾಣದಿಂದೀಕ್ಷಿಸು ಮಂಗಳಿಂದುಪಾಸ್ತಿಯಂ ಮಾಡಲ್ವೇಕೆಂಬುದಭಿಪ್ರಾಯಂ.) ||೧೧||

ಸೂ|| ಅನಂತರದಲ್ಲಿ ಈ ಅಷ್ಟಪುಷ್ಪಂಗಳ ಸ್ವರೂಪಮಂ ಪೇಳ್ದಪಂ:—

ಶ್ಲೋ|| ಪುಷ್ಪಾಣ್ಯಹಿಂಸೇಂದ್ರಿಯನಿಗ್ರಹಶ್ಚ ದಯಾಕ್ಷಮಾಜ್ಞಾನಮಥಾಷ್ಟಯಾನಿ । ಧ್ಯಾನಂತಪಸ್ಸತ್ಯಮಮೀಭಿರೇವಂ ಪ್ರಪೂಜಯೇದಾತ್ಮನಿಸಿದ್ಧಲಿಂಗಂ ||೧೨||

ಟೀ|| ಅಹಿಂಸಾ-ಆವಪ್ರಕಾರದಿಂದವೂ ಪ್ರಾಣಿಗಳಿಗೆ ದುಃಖಮಂಮಾಡದಿರ್ಪ ಹಿಂಸೆಯು, ಇಂದ್ರಿಯನಿಗ್ರಹಶ್ಚ-ತಾನೇಮೇಲಿಕ್ಕಿಬಂದ ಪರಸ್ತ್ರೀಯನೂ ಮಾತೃಭಾವದಿಂತಿಳವ ಇಂದ್ರಿಯನಿಗ್ರಹವೂ, ದಯಾ-ಶತ್ರುವಾಗಲಿ ಮಿತ್ರನಾಗಲಿ ಅವರಂರಕ್ಷಿಸಲ ಬುದ್ಧಿಯೆನಿಸುವ ದಯೆಯು, ಕ್ಷಮಾ-ಸಮರ್ಥನಾಗಿಯೂ ಅಪಕಾರಮಂ ಸೈರಿಸುವ ಕ್ಷಮೆಯು, ಜ್ಞಾನಂ-ನಿತ್ಯಾನಿತ್ಯವಿವೇಕವು, ಅಥ-ಅನಂತರದಲ್ಲಿ, ಧ್ಯಾನಂ-ಪರಮಾತ್ಮಚಿಂತನವು, ತಪಃ-ಧರ್ಮಾರ್ಥವಾಗಿ ದೇಹಶೋಷಣವು, ಸತ್ಯಂ-ಗುರುಪ್ರಯೋಜನವೆ ಪರೋಪ್ರಯೋಜನ ಹೊರತಾಗಿ ಅಸತ್ಯವ ನುಡಿಯದಿಹುದೆಂಬ, ಆಷ್ಟಯಾನಿ-ಹೆಸರುಳ್ಳ, ಈ ಎಂಟು, ಪುಷ್ಪಾಣಿ-ಪುಷ್ಪಂಗಳೆನಿಸಿಕೊಂಬುವು. ಅಮೀಭಿಃ-ಈ ಪುಷ್ಪಂಗಳಿಂದೆ, ಆತ್ಮನಿ-ಪ್ರಾಣಕಲಾಧಾರವಾದ ಹೃದಯಪೀಠದಲ್ಲಿ, ಸಿದ್ಧಲಿಂಗಂ—"ಹೃದಯಕಮಲಮಧ್ಯೇದೀಪವದ್ವೇದಸಾರಃ" ಎಂಬ ಶೃತಿಪ್ರಮಾಣದಿಂ ಗುರೂಪದೇಶದಿಂದಾದ ಮುದ್ರೆಯಿಂ ಸಿದ್ಧವಾದ ದಿವ್ಯಲಿಂಗವನು, ಏವಂ-ಈ ಪ್ರಕಾರದಿಂದೆ, ಪ್ರಪೂಜಯೇತ್-ಚೆನ್ನಾಗಿ ಪೂಜಿಸುವುದು. (ತಾತ್ಪರ್ಯ-ಕರಪೀಠದಲ್ಲಿ ಕಂಡ ಲಿಂಗವಾ ಪುಷ್ಪದ ಪೂಜೆಯಿಂದಲ್ಲದೆ ಫಲಮಂ ಕೊಡದಂತೆ ಬಿಂದುಪೀಠದಲ್ಲಿ ಕಂಡ ದಿವ್ಯ ಲಿಂಗವನೀ ಕುಸುಮಂಗಳಿಂ ಪೂಜಿಸಿದಲ್ಲದೆ ಮೋಕ್ಷಮಂ ಕುಡದಾಗಿ, "ಸತ್ಯಂವದ ಧರ್ಮಂಚರ ಯಾನ್ಯನವದ್ಯಾನಿಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ"—ಸತ್ಯವನೇನುಡಿ,ಧರ್ಮವನೇ ಆಚರಿಸು, ನಿರ್ದೋಷವಾದ ಕೃತ್ಯಂಗಳು ಮಾಡಲು ಯೋಗ್ಯಂಗಳು, ದೋಷಕೃತ್ಯಂಗಳ ಮಾಡಲಾಗದು-ಎಂಬ ಶೃತಿಗಳ ಪ್ರಮಾಣದಿಂ ಸ್ವೇಚ್ಛಾಚಾರಿಯಾಗಬಾರದೆಂಬುದಭಿಪ್ರಾಯಂ.) ||೧೨||

ಸೂ|| ಈ ಪೂರ್ವೋಕ್ತವಾದ ಮುದ್ರಾಭೇದಂಗಳಿಂ ಕಾಣಿಸಿದ ಲಕ್ಷ್ಯಂಗಳಲ್ಲಿ ನಿಷ್ಠಬುದ್ಧಿಯುಳ್ಳಾತನೇ ರಾಜಯೋಗೀಶ್ವರನೆಂದು ಪೇಳ್ದಪಂ:—

ಶ್ಲೋ|| ಯೋಸಿಮಾಲದಸಿಮಾಲದಂಬಕೋ ದೇಹಪೂರಪರಿವರ್ಜಿ

ತಾನಿಲಃ । ಸರ್ವಸಂಶಯವಿಹೀನಮಾನಸೋರಾಜಯೋಗ
ಪದಭಾಕ್ಸವಿವಹಿ ||೧೩||

ಟೀ|| ಯಃ-ಆವನಾನೊರ್ವಯೋಗಿಯುಂ, ನಿಮೀಲನನಿಮೀಲಪಂಬಕಃ-ಲಕ್ಷ್ಯಾನುಸಂಧಾನಾರ್ಥವಾಗಿ ಅರ್ಧಾವಲೋಕವೆನಿಸು ಪರೆಮುಗಿದನೇತ್ರವುಳ್ಳಾತನಾಗುತವೂ, ರೇಚಪೂರಪರಿವರ್ಜಿತಾನಿಲಃ-ರೇಚಕಪೂರಕಂಗಳಿಂ ತೊಲಗಿದ ಕೇವಲಕುಂಭಕವುಳ್ಳಾತನಾಗುತವೂ, ಸರ್ವಸಂಶಯವಿಹೀನಮಾನಸಃ-ಸಕಲಸಂಶಯಂಗಳಿಂ ತೊಲಗಿದ ಮನವುಳ್ಳಾತನಾಗುತವೂ ಇರ್ಪನೋ, ಸಏವ-ಆತನೇ, ಹಿ-ಪ್ರಸಿದ್ಧವಾಗಿ, ರಾಜಯೋಗಪದಭಾಕ್-ರಾಜಯೋಗಪಮಂ ಭಜಿಸುವಾತನಾಗುವನು. (ತಾತ್ಪರ್ಯ-ಗುರೂಪದೇಶದಲ್ಲಿ ಆ ವುಪದೇಶದಿಂದಾದ ಮುದ್ರಾಭೇದಂಗಳಲ್ಲಿ ಆ ಮುದ್ರೆಗಳಂ ಕಾಣಿಸುವ ಲಕ್ಷ್ಯಂಗಳಲ್ಲಿ ಆ ಲಕ್ಷ್ಯಾನುಸಂಧಾನದಿಂ ತೋರುವ ದಿವ್ಯಪ್ರಕಾಶಂಗಳಲ್ಲಿ ಆ ಪ್ರಕಾಶಾವಲೋಕನದಿಂದಪ್ಪ ಮುಕ್ತಿಪದದಲ್ಲಿ ಸಂಶಯಮಂ ಮಾಡುವಾತಂಗೆ ಯೋಗಸಿದ್ಧಿಯಾಗದೆಂಬುವಭಿಪ್ರಾಯಂ.) ||೧೩||

ಸೂ|| ಹಠಯೋಗಿಗಷ್ಟಾವಧಾನಮಂ ಪೇಳ್ದಂತೆ ರಾಜಯೋಗಿಗೆಯೂ ಹಠಗೂಡಿದ ಅಷ್ಟಾವಧಾನಮಂ ಪೇಳ್ದಪಂ:—

ಶ್ಲೋ|| ಶೃಂಗಾಟಕೇಯಸ್ತುಮನೋನಿಯಮ್ಯ ತ್ರಿಕೋಣಗಾಮೀ
ಶಶಿಭಾಸ್ಕರಾಭ್ಯಾಂ । ಬಾಹ್ಯಾಂತರಂಗಪ್ರವಣೈಕಗೋ
ಭಿರಷ್ಟಾವಧಾನೀಹಠರಾಜಯೋಗೀ ||೧೪||

ಟೀ|| ಯಃ-ಆವನಾನೊರ್ವಯೋಗೀಶ್ವರನು, ಶೃಂಗಾಟಕೇ-ಗಂಧದ್ವಾರಶಬ್ದದ್ವಾರಂಗಳ ಕೂಟಸ್ಥಾನವಾದ ತ್ರಿಕೂಟಸಂಜ್ಞೆಯುಳ್ಳ ಶೃಂಗಾಟಕಸ್ಥಲವಲ್ಲಿ,ಮನಃ-ಮನಸ್ಸನು, ನಿಯಮ್ಯ-ಖೇಚರೀಮುದ್ರೆಯಿಂ ಚಲಿಸದಂತೆ ನಿಯಮಿಸಿ, ಶಶಿಭಾಸ್ಕರಾಭ್ಯಾಂ ಇಡೆಪಿಂಗಳೆಗಳೆಂಬ ಚಂದ್ರಸೂರ್ಯನಾಡಿಗಳೊಡನೆ, ತ್ರಿಕೋಣಗಾಮೀ-ಪರಯೋಗಿಯೆನಿಸುವ ಊರ್ಧ್ವಕುಂಡಲಿಸ್ಥಲವಪ್ಪುದರಿಂ ತ್ರಿಕೋಣಾಕಾರವಾದ ಸ್ಥಾನವನೆಯ್ದುತಿರ್ಪನಂಥ, ಬಾಹ್ಯಾಂತರಂಗ ಪ್ರವಣೈಕಗೋಭಿಃ-ಬಾಹ್ಯಾಂತರಂಗ-ಒಳಗು ಹೊರಗು ಮಧ್ಯವೆಂಬ ಮೂರುಸ್ಥಾನಂಗಳಲ್ಲಿ, ಪ್ರವಣ-ತತ್ಪರವಾದ, ಏಕ-ಮುಖ್ಯವಾದ ಗೋಭಿಃ-ಲಕ್ಷ್ಯತ್ರಯಂಗಳಿಂದವೂ,ಅಷ್ಟಾವಧಾನೀ-ಎಂಟು ಅವಧಾನವುಳ್ಳಂಥಾತನುಂಟೋ, ಸಃ-ಆತನೇ, ಹಠರಾಜಯೋಗೀ-ಹಠಗೂಡಿದ ರಾಜಯೋಗಿಯೆನಿಸುವನು. (ತಾತ್ಪರ್ಯ-ಚಲಿಸದ ಮನದಿಂದವೂ ಮನದೊಡನೆ ಕೂಡಿ ನಿಲಿಸಿದ ಮಾರುತನಿಂದವೂ ಲಕ್ಷ್ಯತ್ರಯದಿಂದವೂ ಅಲ್ಲಿ ನಿಲಿಸಿದ ದೃಷ್ಟಿತ್ರಯದಿಂ ಕೂಡಿದಷ್ಟಾವಧಾನವುಳ್ಳಾತನೇ ರಾಜಯೋಗಿಯೆಂಬುವಭಿಪ್ರಾಯಂ.) ||೧೪||

ಸೂ॥ ಈ ಮನೋದೃಷ್ಟಿ ಮಾರುತಂಗಳಂ ಮುದ್ರಾಭೇದದಿಂ ಮುದ್ರಿಸಿ ನಿಲಿಸುವ ಪ್ರಯಾಸಕ್ಕೆ ಅವಧಿಯಂ ಪೇಳುತೀ ರಾಜಯೋಗದಿಂದಪ್ಪ ಫಲವಂ ಪೇಳ್ದಪಂ:-

ಶ್ಲೋ॥ ದೃಗ್ದೃಶ್ಯಭಾವಸಂಬಂಧಾ ದುನ್ಮನ್ಯಂತಂ ವಿಚಿಂತಯ ।
ಶಿವಯೋಗಮಿದಂ ಗುಹ್ಯಂ ಜೀವನ್ಮುಕ್ತಿಕರಂ ಮುನೇ॥೧೪॥

ಟೀ॥ ಭೋ ಮುನೇ-ವೈಖರೀಮಧ್ಯಮೆಗಳೆಂಬುಭಯ ಬಾಹ್ಯ ವ್ಯವಹಾರಂಗಳನುಳಿದು ಮೌನಗುಣಾನ್ವಿತನಾದ ಎಲೆಶಿಷ್ಯನೆ, ದೃಗ್ದೃಶ್ಯಭಾವಸಂಬಂಧಾತ್-ಧ್ಯಾನರೂಪವಾದ ದೃಕ್ಕಿನ ಧ್ಯೇಯರೂಪವಾದ ಲಕ್ಷ್ಯದ ಕೂಟದದೆಸೆಯಿಂದ, ಉನ್ಮನ್ಯಂತಂ-ಉನ್ಮನೀಜ್ಯೋತಿಯ ನಿಲುಕಡೆಯ ಪರ್ಯಂತವಾಗಿ, ವಿಚಿಂತಯ-ಚಿಂತಿಸು, ಗುಹ್ಯಂ-ಗೋಪ್ಯವಾದಂಥ, ಇದಂ-ಸಾಕ್ಷಾತ್ಕಾರವಾದಂಥ, ಶಿವಯೋಗಂ-ಶಿವಯೋಗವೆನಿಸುವ ರಾಜಯೋಗವು, ಜೀವನ್ಮುಕ್ತಿಕರಂ-ಜೀವನ್ಮುಕ್ತಿಯ ಮಾಡುವಂತಹುದು. (ತಾತ್ಪರ್ಯ-ಈ ಪೂರ್ವೋದಿತವಾದ ಲಕ್ಷ್ಯಾನುಸಂಧಾನದಿಂ ದುನ್ಮನಿಯ ಸಿದ್ಧಿಯ ಪಡೆದಾತಂ ಗೀತನುಕರಣಭುವನಭೋಗಾದಿಗಳಿರ್ದ್ದು ಮುಕ್ತನೆನಿಸುವನಾಗಿ " ಲಯವಿಕ್ಷೇಪರಹಿತಂಮನಃಕೃತ್ವಾಸುನಿಶ್ಚಲಂ। ಯದಾಯಾತ್ಯುನ್ಮನೀಭಾವಂತದಾತತ್ಪರಮಂಪದಂ॥ ಏತದ್ಜ್ಞಾನಂಚಮೋಕ್ಷಶ್ಚ ಶೇಷಾಸ್ತುಗ್ರಂಥವಿಸ್ತರಾಃ"-ಮನವ ನಾಸುಷುಪ್ತಿಯಲ್ಲಿ ಮರೆಯದಂತೆ ಜಾಗ್ರದಲ್ಲಿ ಕೆಪರವಂತೆ ನಿಶ್ಚಲವಂಮಾಡಿ, ಭ್ರೂಮಧ್ಯದ ಲಕ್ಷ್ಯದಲ್ಲಡಗಿಸಲು ಉನ್ಮನೀಸ್ವರೂಪವಪ್ಪುದಾಗಿ, ಅದೇ ಪರಮಪದ ಮದೇ ಜ್ಞಾನ ಮದೇ ಮೋಕ್ಷ ವೆನಿಸುವುದು. ಅದರಿಂ ದನ್ಯಮಾದರ್ಥವಂ ಪೇಳ್ವ ವಿಸ್ತಾರಗ್ರಂಥಂಗಳ್ವ್ಯರ್ಥಸವೆಂಬ ಶ್ರುತಿ ಪ್ರಮಾಣದಿಂ ದೀಯುನ್ಮನಿಯನೇ ಸಾಧಿಸಲ್ಬೇಕೆಂಬುದಭಿಪ್ರಾಯಂ.) ॥೧೪॥

ಸೂ॥ ಈರಾಜಯೋಗಾನುಸಂಧಾನದಿಂ ಕಾಣಿಸುವ ವಿಚಿತ್ರಪ್ರಭಾಮಂಡಲಕ್ಕೆ ದಿವ್ಯಾನಂದವಿಕ್ಷೇಪಭೂಮಿಯೆನಿಸುವ ಲೋಚನಂಗಳೇ ಮುಖ್ಯವೆಂದು ಪೇಳ್ದಪಂ:-

ಶ್ಲೋ॥ ರುಚಿಸ್ತಟಿದ್ಧೂಮ್ರಕಬಿಂದುನಾದಕಲಾಭಖದ್ಯೋತರವೀಂದುದೀಪಾಃ । ತತ್ಪ್ರತ್ಯಯಾ ನೇತ್ರಸುವರ್ಣಕಂಜಕಿಂಜಲ್ಕದಂಡಾ ವರರತ್ನಮುಖ್ಯಾಃ ॥೧೫॥

ಟೀ॥ ರುಚಿಃ-ದಿವ್ಯಪ್ರಕಾಶವು, ತಟಿತ್-ಮಿಂಚು, ಧೂಮ್ರ......ದೀಪಾಃ-ಧೂಮ್ರ-ಕೃಷ್ಣವರ್ಣವು, ಕ-ನಿರ್ಮಲೋದಕವು,ಬಿಂದು-ತಾರಾಮಂಡಲಾಕೃತಿಯು, ನಾದ-ದಶವಿಧನಾದವು, ಕಲಾ-ಶುದ್ಧಪ್ರಸಾದದನವಚ್ಛಿನ್ನಪ್ರಕಾಶವು, ಭ-ನಕ್ಷತ್ರವು, ಖದ್ಯೋತ-ಮಿಂಚುಬುಳುವು, ರವಿ-ಸೂರ್ಯಮಂಡಲವು, ಇಂದು-ಚಂದ್ರಮಂಡಲವು, ದೀಪಾಃ-ದೀಪಾದಿರೂಪಂಗಳು, ವರರತ್ನಮುಖ್ಯಾಃ-ಶ್ರೇಷ್ಠವಾದ ವಜ್ರವೈಡೂರ್ಯ ಮರಕತಮಾಣಿಕ್ಯಾದಿ ರತ್ನಪುಂಜಾಕಾರವಾಗಿ ತೋರುವಂಥ, ತತ್ಪ್ರತ್ಯಯಾಃ-ಆ ಅನುಭವಗೋಚರಗಳಾದಂಥ ಪ್ರತ್ಯಯಂಗಳು, ನೇತ್ರಸುವರ್ಣಕಂಜಕಿಂಜಲ್ಕದಂಡಾಃ-ಶ್ರೀ

ಕಾರಾದಿ ಕ್ಷಕಾರಾಂತವಾದ ದಿವ್ಯವರ್ಣಸ್ವರೂಪಂಗಳಿಂ ಮಂಡಲತ್ರಯಾತ್ಮಕವಾದ ಲೋಚನವೆಂಬ ಸುವರ್ಣಕಮಲದ ಕೇಸರನಾಳಂಗಳ ಸ್ವರೂಪಂಗಳಾಗುತ್ತಿಹವು: (ತಾತ್ಪರ್ಯ-ಯೋಗೀಶ್ವರನ ಲೋಚನಾಗ್ರದಲ್ಲಿ ತೋರುವ ಅನಂತಪ್ರತ್ಯಯಂಗಳೇ ದಿವ್ಯಹೃದಯದ ಸ್ಫುರಣೆಗಳಪ್ಪುದರಿಂದೆ ಈ ದಿವ್ಯಹೃದಯವೇ ರಾಜಯೋಗಕ್ಕೆ ಮುಖ್ಯವೆಂಬುವಭಿಪ್ರಾಯಂ.) ॥೧೬॥

ಸೂ॥ ಮಂದಾಧಿಕಾರಿಯಾದಾತಂಗೆ ಈಪ್ರತ್ಯಯಂಗಳ ಹೃದಯದೊಳತಿಶೀಘ್ರದಿಂ ಕಾಣಿಸುವ ದಿವ್ಯಮುದ್ರೆಯಂ ಪೇಳ್ದಪಂ:—

ಶ್ಲೋ॥ ವಕ್ತ್ರೇಣಾಪೂರ್ಯ ವಾಯುಂ ಹುತವಹನಿಲಯೇಽಪಾನಮಾ
ಕೃಷ್ಯ ಧೃತ್ವಾ ಸ್ವಾಂಗುಷ್ಠಾದ್ಯಂಗುಲೀಭಿರ್ನಿಜಕರತಲ
ಯೋಷ್ಷಡ್ಭಿರೇವಂ ನಿರುಧ್ಯ ॥ ಶ್ರೋತ್ರೇ ನೇತ್ರೇ ಚ ನಾ
ಸಾಪುಟಯುಗಳಮಥಾನೇನ ಮಾರ್ಗೇಣ ಧೀರಾಃ ಪಶ್ಯಂತಿ
ಪ್ರತ್ಯಯಾನ್ಸತ್ಪ್ರಣವಬಹುವಿಧಧ್ಯಾನಸಂಲೀನಚಿತ್ತಾಃ॥೧೭॥

ಟೀ॥ ವಕ್ತ್ರೇ-ಮುಖದ ಏಕದೇಶವಾದ ನಾಸಾಪುಟದಲ್ಲಿ, ವಾಯುಂಚ-ಪ್ರಾಣವಾಯುವನು, ಆಪೂರ್ಯ-ಚೆನ್ನಾಗಿ ಪೂರಿಸಿ, ಹುತವಹನಿಲಯೇ-ಅಗ್ನಿಸ್ಥಾನವೆನಿಸುವ ಅಧಃಕುಂಡಲಿನೀಸ್ಥಲದ ತ್ರಿಕೋಣಾಕಾರವಾದ ಮೂಲಾಧಾರದಲ್ಲಿಯು, ಅಪಾನಂ—ಅಪಾನವಾಯುವನು, ಆಕೃಷ್ಯ-ಆಕುಂಚನವಂಮಾಡಿ, ಧೃತ್ವಾ-ಧರಿಸಿ, ನಿಜಕರತಲಯೋಃ-ತನ್ನ ಕರತಲವೆರಡರಲ್ಲಿಯು, ಸ್ವಾಂಗುಷ್ಠಾದ್ಯಂಗುಲೀಭಿಃ-ತನ್ನಂಗುಷ್ಠ ತರ್ಜನೀಮಧ್ಯಮೆಗಳೆಂಬಂಥ, ಷಡ್ಭಿಃ-ಆರರಿಂದಲಾದರೂ, (ಅಂಗುಷ್ಠ ಮಧ್ಯಮೆ ಅನಾಮಿಕೆಗಳಿಂದಲಾದರೂ) ಶ್ರೋತ್ರೇ-ಶ್ರೋತ್ರರಂಧ್ರಂಗಳೆರಡನೂ, ನೇತ್ರೇಚ-ನೇತ್ರಂಗಳೆರಡನೂ, ನಾಸಾಪುಟಯುಗಳಂ-ನಾಸಿಕಾಪುಟಂಗಳೆರಡನೂ,ಏವಂ-ಈ ಗುರೂಪದೇಶಪ್ರಕಾರದಿಂದೆ, ನಿರುಧ್ಯ-ತಡೆದು, ಅಥ-ಅನಂತರದಲ್ಲಿ, ಅನೇನಮಾರ್ಗೇಣ—ಈ ಷಣ್ಮುಖೀಕರಣಮಾರ್ಗದಿಂದೆ, ಧೀರಾಃ-ನಿಶ್ಚಲತತ್ವಚಿತ್ತರಾದ ಯೋಗೀಶ್ವರರು, ಸತ್ಪ್ರಣವಬಹುವಿಧಧ್ಯಾನಸಂಲೀನಚಿತ್ತಾಃ-ಲೇಸಾದಪ್ರಣವದ ದಶವಿಧವಾದ ನಾದದಲ್ಲಿ ಮುಳುಂಗಿದ ಚಿತ್ತವುಳ್ಳಂಥವರಾಗುತ್ತ್ತವೂ, ಪ್ರತ್ಯಯಾನ್-ದಶವಿಧಬಿಂದುಸಾಕ್ಷಾತ್ಕಾರರೂಪವಾದ ಪ್ರತ್ಯಯಂಗಳನು, ಪಶ್ಯಂತಿ-ಕಾಣುತ್ತಿಹರು. (ತಾತ್ಪರ್ಯ-ಷಣ್ಮುಖೀಮುದ್ರೆಯಿಂ ಕಾಣಿಸುವ ಪ್ರತ್ಯಯಂಗಳ ಪ್ರಕಾರವೆಂತೆಂದೊಡೆ-ಭ್ರೂಮಧ್ಯದಲ್ಲಿ ಬೆಳಗುವ ನಯನದೀಪ್ತಿಯೇ ಬಿಂದುದೇವನ ಮಹಾಸ್ಥಾನವಪ್ಪುದರಿಂದೆ ಧೂಮ್ರವರ್ಣದಂತೆ ಮೇಘಪಟಲದಂತೆ. ಕಾಣ್ಬುದು ಶುದ್ಧತಮೋಗುಣಾತ್ಮಕವಾದ ಸ್ಥೂಲಬಿಂದುವೆನಿಸುವುದು. ಕುಂಕುಮವರ್ಣದಂತೆ ಖದ್ಯೋತಂಗಳಂತೆ ಕಾಣ್ಬುದು ಶುದ್ಧರಜೋಗುಣಾತ್ಮಕವಾದ ಮಧ್ಯಮಬಿಂದುವೆನಿಪುದು. ಶುದ್ಧಸ್ಫಟಿಕದಂತೆ ನಿರ್ಮಲಾಕಾರದಿಂ ಕಾ

ಣ್ಬುದು ಶುದ್ಧಸಾತ್ವಿಕವಾದ ಪರಮಬಿಂದುವೆನಿಸುವುದು. ಇದಕ್ಕೆ ಸಮ್ಮತಿ— "ನೇತ್ರಾಶ್ರಿತಾತುಯಾಭಾಮಾಭ್ರುವೋರ್ಮಧ್ಯೇವಿನಿರ್ಗತಾ । ಬಿಂದುದೇವಸ್ಯಸಂಸ್ಥಾನಂಪರಾತ್ಪರತರಂಮಹತ್ ॥ ಧೂಮ್ರಾಭ್ರಪಟಲಾಕಾರಂವಿಸ್ತೀರ್ಣಂಸರ್ವತೋಮುಖಂ । ದೃಶ್ಯತೇನಶ್ಯತೇಚೈವಸ್ಥೂಲಬಿಂದುರಿತಿಸ್ಮೃತಃ ॥ ದೀಪ್ತತಾಮ್ರನಿಭಶ್ಚೈವಖದ್ಯೋತಸದೃಶದ್ಯುತಿಃ । ಹರಿಕುಂಕುಮಸಂಕಾಶೋಮಧ್ಯಮೋಬಿಂದುರುಚ್ಯತೇ ॥ ನೇತ್ರಮಧ್ಯಸ್ಥಿತೋದೀಪ್ತಃಪೂರ್ಯತೇಸ್ವೇನತೇಜಸಾ । ಶುದ್ಧಸ್ಫಟಿಕಸಂಕಾಶೋಬಿಂದುರ್ಜ್ಞೇಯಃಪರಾತ್ಪರಃ" ಎಂದುದಾಗಿ, ಈ ಗುಣತ್ರಯಂಗಳ ಅನ್ಯೋನ್ಯಸಂಮೇಳನದಿಂದೀಬಿಂದುವೇ ದಶವಿಧವೆನಿಸುವುದು. ಅವರ ವಿಧವಾವುದೆಂದೊಡೆ-ಸಿತವೆಂದು ರಕ್ತವೆಂದು ಕೃಷ್ಣವೆಂದು ನೀಲವೆಂದು ಮೇಘವರ್ಣವೆಂದು ಪೀತರಕ್ತವೆಂದು ಪೀತವೆಂದು ಕಪಿಲವೆಂದು ಧೂಮ್ರವೆಂದು ಸ್ಫಟಿಕವರ್ಣವೆಂದು ದಶವಿಧವಾಗಿ ಕಾಣಿಸಲವರೊಳ್ ಸ್ಫಟಿಕವರ್ಣವೇ ಮುಕ್ತಿಸಾಧನವಪ್ಪುದಾಗಿ, ಅದನೇ ಸಾಧಿಪುದು. "ಮನೋನುಕೂಲೇನತು ಚಕ್ಷುಪೀಡನೇ ಗುಹಾನಿವಾತಾಶ್ರಯಣೇ ಪ್ರಯೋಜಯೇತ್ । ನೀಹಾರಧೂಮಾರ್ಕಜಲಾನಿಲಾನಾಂ ಖದ್ಯೋತವಿದ್ಯುತ್ಸ್ಫಟಿಕಶ್ಶಶೀನಾಂ । ಏತಾನಿರೂಪಾಣಿಪುರಸ್ಸರಾಣಿ ಬ್ರಹ್ಮಣ್ಯಭಿವ್ಯಕ್ತಿಕರಾಣಿಯೋಗೇ" ಎಂಬ ಶ್ರುತಿಪ್ರಮಾಣದಿಂದವೂ, "ಸಿತಂರಕ್ತಂತಥಾಕೃಷ್ಣಂ ನೀಲಮೇಘಸಮಪ್ರಭಂ । ಪೀತರಕ್ತಂಚಪೀತಂಚ ಕಪಿಲಂಧೂಮ್ರಮೇವಚ। ದಶಮಂಸ್ಫಟಿಕಾಭಂಚ ಫಲಮೇಷಾಂಪೃಥಕ್ಪೃಥಕ್" ಎಂಬಾಗಮಪ್ರಮಾಣದಿಂದವೂ, ಈ ದಶವಿಧನಾದಸ್ವರೂಪವೆಂತೆಂದೊಡೆ— "ಚಿಣಿತಿಪ್ರಥಮಃ ಚಿಣಿಚಿಣಿತಿದ್ವಿತೀಯಃ ಘಂಟಾನಾದಸ್ತೃತೀಯಃ ಶಂಖನಾದಶ್ಚತುರ್ಥಃ ಪಂಚಮಸ್ತಂತ್ರೀನಾದಃ ಷಷ್ಠಸ್ತಾಳನಾದಃ ಸಪ್ತಮೋವೇಣುನಾದಃ ಅಷ್ಟಮೋಭೇರೀನಾದಃ ನವಮೋಮೃದಂಗನಾದಃ ದಶಮೋಮೇಘನಾದಃ" ಎಂಬ ಶ್ರುತಿಪ್ರಮಾಣದಿಂದವೂ, ಈ ಬಿಂದುಸಾಕ್ಷಾತ್ಕಾರಂಗಳು ಚಕ್ಷುಪೀಡನವೆನಿಸುವ ಷಣ್ಮುಖೀಮುದ್ರೆಯಿಂದ ಲಪ್ಪುವೆಂಬುದಭಿಪ್ರಾಯಂ.) ||೧೭||

ಸೂ|| ಅತಿಮಂದನಾದಾತಂಗೆ ಈ ವಿಚಿತ್ರಪ್ರತ್ಯಯಂಗಳು ಕಾಣುವ ಉಪಾಯಮಂ ಪೇಳ್ದಪಂ:— .

ಶ್ಲೋ|| ದೃಷ್ಟ್ಯೋರ್ಯೋರವಿಸೋಮಪಾವಕಯುತಾಂ ಚಂದ್ರಾರ್ಕ
ಯೋರಾಗಮೇಕೃತ್ವಾನಿಶ್ಚಲಗೇಹದೀಪನಿಕಟೇವಾನಿರ್ಮ
ತೀನಾಮಪಿ ॥ ದೃಶ್ಯಂತೇಸ್ಫುರಿತಾಸ್ಸ್ಫುಟಾನಯನಯೋರ
ಗ್ರೇಚತತ್ಪ್ರತ್ಯಯಾ ಸ್ತೇಷಾಂತತ್ಪರಚೇತಸಾಂವಿಗಳಿತಾ
ತದ್ವ್ಯಾಪೃತೀನಾಂಕಿಮು ||೧೮||

ಟೀ|| ಯೇ-ಆರುಕೆಲಯೋಗಿಗಳು, ಚಂದ್ರಾರ್ಕಯೋಃ-ಬಾಹ್ಯವಾದ ಚಂದ್ರ

ಸೂರ್ಯರುಗಳ, ಆಗವೇ ವಾ-ಬರವಿನಲ್ಲಿಯಾದರೂ, ನಿಶ್ಚಲಗೇಹದೀಪನಿಕಟೇವಾ-ಚಲಿಸವೆ ಗೃಹದಲ್ಲಿ ಬೆಳಗುವ ದೀಪದ ಸಮೀಪದಲ್ಲಿಯಾದರೂ, ದೃಷ್ಟಿಂ-ದೃಷ್ಟಿಯನು, ತದ್ವಿಸೋಮಪಾವಕಯುತಾಂ-ಸೂರ್ಯಬಿಂಬ ಚಂದ್ರಬಿಂಬ ದೀಪಜ್ವಾಲೆಗಳಲ್ಲಿ ಕೂಡಲ್ಪಟ್ಟುದನ್ನಾಗಿ, ಕೃತ್ವಾ-ಮಾಡಿ, (ಷಣ್ಮುಖೀಮುದ್ರೆಯಿಂನೋಡುತ್ತಿಹರು) ನಿರ್ಮತೀನಾಮಪಿ-ಮತಿಹೀನರಿಗಾಯಿತ್ತಾದರೂ, ತೇಷಾಂ-ಅವರುಗಳಿಗೆ, ನಯನಯೋಃ-ಲೋಚನಂಗಳ, ಅಗ್ರೇ-ಮುಂದೆ, ಸ್ಫುರಿತಾಃ-ತೋರಲ್ಪಟ್ಟಂಥ, ತತ್ಪ್ರತ್ಯಯಾಶ್ಚ-ಆ ಪೂರ್ವೋಕ್ತವಾದ ಸಕಲಪ್ರತ್ಯಯಂಗಳೂ, ಸ್ಫುಟಾಃ-ವ್ಯಕ್ತಗಳಾಗಿ, ದೃಶ್ಯಂತೇ-ಕಾಣಲ್ಪಡುತ್ತಿಹವು, ವಿಗಳಿತಾತದ್ವ್ಯಾಪೃತೀನಾಂ-ಅನ್ಯವ್ಯಾಪಾರಂಗಳಿಲ್ಲದಿರ್ದಂಥ, ತತ್ಪರಚೇತಸಾಂ-ಆತಾರಕಾನುಸಂಧಾನದಲ್ಲಿ ಆಸಕ್ತವಾದ ಚಿತ್ತವುಳ್ಳವರ್ಗೆ, ಕಿಮು-ಹೇಳಲೇನು ? (ತಾತ್ಪರ್ಯ-ಈ ಗ್ರಂಥದಲ್ಲಿಯು ಚಮತ್ಕಾರದಿಂದೆ ಪೂರ್ವೋಕ್ತವಾದ ಪ್ರತ್ಯಯಂಗಳಿಂದನ್ಯವಾದ ಬಾಲಸೂರ್ಯನಂತೆ ಅಲತಗೆಯ ರಸನಂತೆ ಕುಸುಂಬೆಯಹೂವಿನ ರಸದಂತೆ ಹೊಗೆಯಿಲ್ಲದ ಇಂಗಳನಂತೆ ಬಹುವಿಧಪ್ರತ್ಯಯಂಗಳು ಕಾಣಿಸುತಿರ್ಪುವಾಗಿ, „ ನೇತ್ರಾಶ್ರಿತಾತಯಾಭಾಯಾತಸ್ಯಾಲಕ್ಷ್ಯಂವದಾನ್ಯಹಃ । ಯೇನವಿಜ್ಞಾನಮಾತ್ರೇಣಮುಚ್ಯತೇಜನ್ಮಬಂಧನಾತ್ ॥ ಮುಖಮಾನ್ಯತ್ಯತಿಷ್ಠೇತಲಾಕ್ಷಾವರ್ಣರಸೋಪಮಂ । ಆದಿತ್ಯೋದಯಸಂಕಾಶಂ ಕೌಸುಂಭರಸ ಸ್ನಿಭಂ ॥ ನಿರ್ಧೂಮಾಂಗಾರಸವೃಕಂಪಿಂಡೀಕೃತಮಿವಸ್ಥಿತಂ'' ಎಂದು ದಿವ್ಯಾಗಮದೊಳ್ಪೇಳ್ದ ಪ್ರತ್ಯಯಂಗಳ್ ಉಪಾಯದಿಂ ಜಡಮತಿಗಳ್ಗೆ ಕಾಣಿಪುವೆನಲಾಗಿ ನಿರ್ಮಲಬುದ್ಧಿಯುಳ್ಳವರ್ಗೆ ತಳುವದೆ ಕಾಣಿಸುತಿರ್ಪುವೆಂಬುದಭಿಪ್ರಾಯಂ.) ॥೧೭॥

ಸೂ॥ ದರ್ಪಣದಲ್ಲಿಯು ಪ್ರತಿಬಿಂಬದಂತೆ ಆಕಾಶದಲ್ಲಿಯು ಇಂದ್ರಚಾಪದಂತೆ ನಾದಬಿಂದುಕಲಾರೂಪದಿಂ ಸಕಲನಿಷ್ಕಲಾತ್ಮಕವಾದ ವಸ್ತುವೇ ಬಹುವಿಧಪ್ರತ್ಯಯಾಕಾರದಿಂ ಗೋಚರಿಪುದಾಗಿ ನಿಷ್ಕಲತತ್ವವೂ ನಿಷ್ಕಲಾತೀತವೂ ಪ್ರತ್ಯಯರೂಪದಿಂ ಗೋಚರಿಪುದೆಂದು ಪೇಳ್ದಪಂ:—

ಶ್ಲೋ॥ ಪ್ರಮಾಣಪ್ರತ್ಯಯಾತೀತಂ ಶಾಂತಂ ತೇಜೋಮಯಾತ್ಮ
ಕಂ । ತದತೀತಂಪರಂಬ್ರಹ್ಮಚೇತಿವಿದ್ವದ್ಭಿರೀರಿತಂ ॥೧೮॥

ಟೀ॥ ತೇಜೋಮಯಾತ್ಮಕಂ-ನಿಷ್ಕಲಪ್ರಕಾಶರೂಪವಾದಂಥ, ಶಾಂತಂ-ಶಾಂತತತ್ವವೆನಿಸುವ ಶಿವತತ್ವವು, ಪ್ರಮಾಣಪ್ರತ್ಯಯಾತೀತಂ-ಪ್ರತ್ಯಕ್ಷಗೋಚರವಾದ ಪ್ರತ್ಯಯಂಗಳ ಮೀರಿದಂತಹುದು ಎಂದು, ಪರಂಬ್ರಹ್ಮಚ-ಅವಕ್ಕುತ್ತರವಾದ ಪರಬ್ರಹ್ಮವು ಎಂದು, ತದತೀತಂ ಇತಿಚ-ಪ್ರಮಾಣಪ್ರತ್ಯಯಾತೀತವೆಂದೂ, ವಿದ್ವದ್ಭಿಃ-ತತ್ವಜ್ಞಾನಿಗಳಿಂದ, ಈರಿತಂ-ಹೇಳಲ್ಪಟ್ಟತು. (ತಾತ್ಪರ್ಯ-ಸದಾಶಿವತತ್ವವೇ ಯೋಗೀಶ್ವರರ ಶುದ್ಧಮನೋನಯನಕ್ಕೆ ಗೋಚರವಪ್ಪುದಾಗಿ, ದಿವ್ಯಾನಂದರೂಪವಾದ ನಿಷ್ಕಲವು ಗೋ

ಚೆರವಾಗದಾಗಿ, “ ನಿಷ್ಕಲಂನಿಷ್ಕ್ರಿಯಂಶಾಂತಂ ನಿರವದ್ಯಂನಿರಂಜನಂ । ಅಮೃತಸ್ಯಪರಂಸೇತುಂ ದಗ್ಧೇಂಧನಮಿವಾನಲಂ॥ನತತ್ರಸೂರ್ಯೋಭಾತಿನಚಂದ್ರತಾರಕಾನೇಮಾವಿದ್ಯುತೋಽಭಾಂತಿಕುತೋಽಯಮಗ್ನಿಃ”-ನಿಷ್ಕಲಾದಿರೂಪದಿಂದಿರ್ಪುದು ಶಾಂತತತ್ವವು; ಅದಕೆ ಮೇಲಾದ ಪರಬ್ರಹ್ಮವು ಕಾಷ್ಠವಿಲ್ಲದಗ್ನಿಯಂತೆ ಪರಮನಿರ್ವಾಣರೂಪವಾದಂತಹುದು, ಆ ವಸ್ತುವಿಲ್ಲಿ ಸೂರ್ಯಚಂದ್ರತಾರಕ ವಿದ್ಯುದ್ವಹ್ನಿರೂಪವಾದ ಪ್ರಕಾರಂಗಳ ತೋರಿಕೆಗಳಿಲ್ಲವೆಂಬ ಶ್ರುತಿಪ್ರಮಾಣದಿಂ ಮುಂದೆಪೇಳ್ವ ಅಮನಸ್ಕಯೋಗಸಿದ್ಧನಾಗಬೇಕೆಂಬುದಭಿಪ್ರಾಯಂ.) ॥೧೯॥

ಸೂ॥ ಈ ತಾರಕಾಭ್ಯಾಸದಿಂ ಸಿದ್ಧವಾದುನ್ಮನಿಯಲ್ಲಿ ಮನೋಲಯುವೇ ಭಾವಯೋಗವೆನಿಸುವುದೆಂದು ಪೇಳ್ದಪಂ:—

ಶ್ಲೋ॥ ಭಾವಯೊಗಮಸಂಕಲ್ಪವಿಕಲ್ಪಾಸ್ಪದಮದ್ಭುತಂ ।
ಸಂಪ್ರಾಪ್ತೋಯಸ್ತಸ್ಯಭವೇದವಸ್ಥಾಸೋನ್ಮನೀಹಿಯಾ॥೨೦॥

ಟೀ॥ ಅಸಂಕಲ್ಪವಿಕಲ್ಪಾಸ್ಪದಂ-ದೃಶ್ಯರೂಪವಾದ ದೃಗ್ರೂಪವಾದ ಸಂಕಲ್ಪವಿಕಲ್ಪಗಳಿಗೆ ಆಶ್ರಯವಲ್ಲದಿರ್ಪಂಥ, ಅದ್ಭುತಂ-ಆಶ್ಚರ್ಯವಾದಂಥ, ಭಾವಯೋಗಂ-ಉಂಟೆಂಬನುಮಾತ್ರವಾದಂಥ ನಿರ್ವಿಕಲ್ಪಕಜ್ಞಾನಯೋಗವನು, ಯಃ-ಆವಾತನು, ಸಂಪ್ರಾಪ್ತಃ-ಎಯ್ದಲ್ಪಟ್ಟಾತನ। ಟೋ, ತಸ್ಯ-ಆತಂಗೆ, ಯಾ-ಆವುದಾನೊಂದು, ಅವಸ್ಥಾ-ಅವಸ್ಥೆಯು, ಭವೇತ್-ಅಹುದೋ, ಸಾ-ಅದು, ಉನ್ಮನೀಹಿ-ಉನ್ಮನಿಯುಲಾ. (ತಾತ್ಪರ್ಯ-ಭ್ರೂಮಧ್ಯದಲ್ಲಿ ಬೆಳಗುವ ಉನ್ಮನೀಜ್ಯೋತಿಯುಲಿ ಮನಂಮುಳುಂಗಿ ಬಾಲಕರ ತಿಳಿವಿನಂತೆ ಉಂಟೆಂಬಮಾತ್ರದಿಂ ನಿಂದ ನಿಲುಕಡೆಯೇ ಭಾವಯೋಗ ಮದೇ ಉನ್ಮನ್ಯವಸ್ಥೆಯೆನಿಸುವುದೆಂಬುವಭಿಪ್ರಾಯಂ.) ॥೨೦॥

ಸೂ॥ ಆ ನಿಷ್ಕಲಯೋಗಸ್ವರೂಪವನೇ ಪ್ರಕಾರಾಂತರದಿಂ ಪೇಳ್ದಪಂ:—

ಶ್ಲೋ॥ ಆಧಾರಮಧ್ಯಹೃದ್ವ್ಯಾಪ್ತನಾದಬಿಂದುಕಲಾತ್ಮಕಂ ।
ತದತೀತಂ ಸ್ವರೂಪಂ ಯತ್ತದೇವ ಪರಮಂ ಪದಂ ॥೨೧॥

ಟೀ॥ ಆಧಾರಮಧ್ಯಹೃದ್ವ್ಯಾಪ್ತನಾದಬಿಂದುಕಲಾತ್ಮಕಂ-ಆರನೆಯಾಧಾರವೆನಿಸುವ ಆಜ್ಞಾಚಕ್ರದ ಮಧ್ಯಸ್ಥಾನದಲ್ಲಿಯು ಹೃದಯಮಂ ವ್ಯಾಪಿಸಿದ ನಾದಬಿಂದುಕಲಾರೂಪವಾದ ಪ್ರಣವವೇ ಸ್ವರೂಪವಾಗುಳ್ಳಂಥ, ತದತೀತಂ-ಆನಾದಬಿಂದುಕಳೆಗಳೆಂಬ ವಿಭಾಗವನು ಮೀರಿದಂಥ, ಯತ್-ಆವುದಾನೊಂದು, ಸ್ವರೂಪಂ-ನಿಷ್ಕಲರೂಪವುಂಟೋ, ತದೇವ-ಅದೇ, ಪರಮಂ-ಸಕಲಕ್ಕೆ ಮುಖ್ಯವಾದಂಥ, ಪದಂ-ಸ್ಥಾನವು. (ತಾತ್ಪರ್ಯ-ಭ್ರೂಮಧ್ಯದಲ್ಲಿ ದ್ವಾತ್ರಿಂಶದ್ದಳ ಷೋಡಶದಳ ದಶದಳಂಗಳೆಂಬ ಹೃದಯಪೀಠದ ಚತುರ್ವರ್ಣಳಮಧ್ಯದಲ್ಲಿ ನಾದಬಿಂದುಕಲಾವಿಭಾಗವಿಲ್ಲದೆ ನಿಂದ ನಿಷ್ಕಲಬ್ರಹ್ಮವೇ ಪರವಸ್ತುವೆನಿಪುದೆಂಬುದಭಿಪ್ರಾಯಂ.) ॥೨೧॥

ಸೂ|| ಈ ಪರವಸ್ತುವಿನಲ್ಲಿ ಮನೋಮಗ್ನತೆಯೇ ಜೀವಪರಮರ ಸಾಮರಸ್ಯ ವೆಂದು ಪೇಳ್ದಪಂ:—

ಶ್ಲೋ|| ಯಸ್ಸಮೇತಿಮನಸಾನಿರಾಶ್ರಯಂ ನಿರವಲಂಬಪದತತ್ವಮ
ವ್ಯಯಂ । ಭಾವನಾವಿರಹಿತಂ ನಿರಾಮಯಂ ಪರಶಿವಂಹೃ
ದಿ ಸತನ್ಮಯೋಭವೇತ್ ||೨೨||

ಟೀ|| ನಿರಾಶ್ರಯಂ-ಅಖಂಡಿತವಪ್ಪುದರಿಂದಾಶ್ರಯವಿಲ್ಲದಿರ್ಪಂಥ, ನಿರವಲಂಬಪ ದತತ್ವಂ-ನಿರಾಕಾರವಸ್ತುಸ್ವರೂಪವಾದಂಥ, ಅವ್ಯಯಂ-ಅವಿಭಾಗವಪ್ಪುದರಿಂ ನಾಶ ವಿಲ್ಲದಂಥ, ಭಾವನಾವಿರಹಿತಂ-ಬುದ್ಧಿಗೋಚರವಲ್ಲದಿರ್ಪಂಥ, ನಿರಾಮಯಂ-ಅನಾದಿ ದೋಷವಿಲ್ಲದಿರ್ಪಂಥ, ಪರಶಿವಂ-ಪರಶಿವತತ್ವವನು, ಹೃದಿ-ಹೃದಯಮಧ್ಯದಲ್ಲಿ, ಯಃ- ಆವನಾನೊರ್ವಯೋಗೀಶ್ವರನು, ಮನಸಾ-ಶುದ್ಧಮಾನಸದಿಂದ, ಸಮೇತಿ-ಚೆನ್ನಾಗಿಎ ಯ್ದುತ್ತಿಹನೋ, ಸಃ-ಆತನು, ತನ್ಮಯಃ-ಆ ಪರಶಿವಸ್ವರೂಪನು, ಭವೇತ್-ಆಗುವ ನು. (ತಾತ್ಪರ್ಯ-ನಿರ್ವಿಕಲ್ಪಾತ್ಮಕವಾದ ಪರವಸ್ತುವಿನಲ್ಲಿ ಮುಳುಂಗಿದ ಮನವು ಮರ ಳಿ ಅಂಕುರಿಸದಿರಲಾತನೇ ಪರಬ್ರಹ್ಮಸ್ವರೂಪನಪ್ಪ ನೆಂಬುದಭಿಪ್ರಾಯಂ.) ||೨೨||

ಸೂ|| ಈ ನಿರ್ವಿಕಲ್ಪಕಯೋಗಸಿದ್ಧನಾದಾತಂಗೆ ಮುಳುಂಗಿದ ಮನವು ಲೇಶಮಾ ತ್ರದಿಂ ದಂಕುರಿಸಲದೇ ಸಂಸಾರವೆಂದು ಪೇಳ್ದಪಂ:—

ಶ್ಲೋ|| ಅಣುಮಾತ್ರಂಯದಸ್ತೀತಿ ನಾಸ್ತೀತಿವಿದುಷಾಂಭುವಿ ।
ತದೇವಬಂಧಹೇತುತ್ವಾದ್ಭಾವಾಭಾವಾವುಭೌತ್ಯಜೇತ್||೨೩||

ಟೀ|| ಭುವಿ-ನಿರಾಲಂಬಸ್ಥಾನದಲ್ಲಿ, ವಿದುಷಾಂ-ಬಲ್ಲಯೋಗೀಶ್ವರರ್ಗೆ, ಅಸ್ತೀತಿ- ಉಂಟುಯೆಂಬ, ನಾಸ್ತೀತಿ-ಇಲ್ಲಯೆಂಬ, ಅಣುಮಾತ್ರಂ-ಲೇಶಮಾತ್ರವಾದ, ಯತ್- ಆವುದಾನೊಂದು ಮನದ ಮೊಳಕೆಯುಂಟೋ, ತದೇವ-ಅದೇ, ಬಂಧಹೇತುತ್ವಾತ್- ಸಂಸಾರಬಂಧನಕ್ಕೆ ನಿಮಿತ್ತವಾದಕಾರಣ, ಭಾವಾಭಾವೌ-ಉಂಟಲ್ಲವೆಂಬಂಥ, ಉಭೌ ಎರಡನೂ, ತ್ಯಜೇತ್-ಬಿಡುವುದು. (ತಾತ್ಪರ್ಯ-ಪೂರ್ಣಾನಂದಯೋಗೀಶ್ವರನು ಮು ಳುಂಗಿದ ಮನವನು ಲೇಶಮಾತ್ರವೂ ಮೊಳಕೆದೋರಿಸಬಾರದೆಂಬುದಭಿಪ್ರಾಯಂ ‹‹ಚಿ ತ್ತೇಚಲತಿಸಂಸಾರೋನಿಶ್ಚಲೇಮೋಕ್ಷಉಚ್ಯತೇ›› ಎಂದುದಾಗಿ) ||೨೩||

ಸೂ|| ಈ ಪೂರ್ವಗ್ರಂಥದಲ್ಲಿ ಸೂಚಿತವಾದರ್ಥವನೇ ಮರಳಿ ವಿಸ್ತಾರವಾಗಿ ಪೇಳ್ದಪಂ:—

ಶ್ಲೋ|| ಜ್ಞಾನಜ್ಞೇಯೌಧ್ಯಾನಧ್ಯೇಯೌಲಕ್ಷ್ಯಾಲಕ್ಷ್ಯೌಭಾವಾಭಾವೌ।
ಊಹಾಪೋಹಾಯೋದೃಗ್ದೃಶ್ಯೇ ಸರ್ವಂತ್ಯಕ್ತ್ವಾಜೀವ
ನ್ಮುಕ್ತಃ ||೨೪||

ಟೀ॥ ಯಃ-ಆವನಾನೊರ್ವಯೋಗೀಶ್ವರನು, ದೃಗ್ದೃಶ್ಯೇ-ನೋಡುವನೋಟವನು ನೋಡಿಸಿಕೊಂಬ ವಸ್ತುವನು,ಊಹಾಪೋಹೌ-ಆ ಕಾಣಿಸಿದ ವಸ್ತುವಿನಲ್ಲಿ ಅಹುದಾಗ ಬೇಕೆಂಬ ಅಲ್ಲವಾಗಬೇಕೆಂಬ ಮಾನಸವಿಕಲ್ಪಂಗಳನು, ಭಾವಾಭಾವೌ-ಅಹುದಲ್ಲವೆಂಬ ಬುದ್ಧಿಯ ಅಧ್ಯವಸಾಯಂಗಳನು, ಲಕ್ಷ್ಯಾಲಕ್ಷ್ಯೇ-ಭಾವಿಸದೆ ಮುದ್ರೆಗಳಿಂತೋರುವ ಲಕ್ಷ್ಯಾಲಕ್ಷ್ಯಂಗಳನು, ಧ್ಯಾನಧ್ಯೇಯೇ-ಲಕ್ಷ್ಯದನಂತರದಲ್ಲಿ ತೋರುವ ಧ್ಯಾನಧ್ಯೇಯಂಗಳನು, ಜ್ಞಾನಜ್ಞೇಯೇ-ಕಾರಣವುಂಮಿಾರುವ ಜ್ಞಾನಜ್ಞೇಯಂಗಳೆಂಬ, ಸರ್ವಂ-ಕ್ರಮದಿಂ ದ್ವಂದ್ವರೂಪವಾದ ಸಕಲವನು,ತ್ಯಕ್ತ್ವಾ-ಬಿಟ್ಟು, ವರ್ತಿಸುವಾತನುಂಟೋ ಆತನೇ, ಜೀವನ್ಮುಕ್ತಃ-ಜೀವನ್ಮುಕ್ತನೆನಿಸುವನು. (ತಾತ್ಪರ್ಯ-ಬಾಹ್ಯಾಂತಃಕರಣಂಗಳಲ್ಲಿ ದ್ವಂದ್ವಗ್ರಸ್ತವಾದ ವ್ಯಾಪಾರವಿಲ್ಲದೆ ಪೂರ್ಣಾವಸ್ಥೆಯಲ್ಲಿರ್ಪಾತನೇ ಜೀವನ್ಮುಕ್ತನೆಂಬುದಭಿಪ್ರಾಯಂ) ॥೭೪॥

ಸೂ॥ ಆ ಜೀವನ್ಮುಕ್ತನ ಇರವನೇ ಅವಸ್ಥಾತ್ರಯಂಗಳಲ್ಲಿ ದೃಷ್ಟಾಂತಪೂರ್ವಕದಿಂ ಪೇಳ್ದಪಂ:—

ಶ್ಲೋ॥ ಸರ್ವಾಸ್ವವಸ್ಥಾಸ್ವಕೃತಪ್ರಯತ್ನೋ ನಿಶ್ಚಿಂತಭಾವೋಮೃ
ತವತ್ಸತಿಷ್ಠೇತ್ । ಕಲ್ಲೋಲಹೀನಾಂಬುಧಿವನ್ನಿವಾತಪ್ರ
ದೀಪವತ್ತತ್ವಮಯಸ್ಸುಖೀಭವೇತ್ ॥೭೫॥

ಟೀ॥ ಸರ್ವಾಸು-ಸಮಸ್ತವಾಗಿರ್ಪಂಥ, ಅವಸ್ಥಾಸು ಅವಸ್ಥೆಗಳಲ್ಲಿ, ಅಕೃತಪ್ರಯತ್ನಃ-ಸ್ಥೂಲತನುವಿನಲ್ಲಿ ವ್ಯಾಪಾರವಿಲ್ಲದಾತನಾಗಿ, ನಿಶ್ಚಿಂತಭಾವಃ ಸೂಕ್ಷ್ಮತನುವಿನಲ್ಲಿ ಚಿಂತಾರಹಿತನಾಗಿ ಕಾರಣತನುವಿನಲ್ಲಿ ಭಾವಶೂನ್ಯನಾಗಿ, ತಿಷ್ಠೇತ್-ಇರುತಿರ್ಪಂಥ, ಸಃ-ಆತನು, ಕ್ರಮದಿಂದೆ, ಮೃತವತ್-ಪ್ರಾಣವಿಲ್ಲದಶರೀರದಂತೆ, ಕಲ್ಲೋಲಹೀನಾಂಬುಧಿವತ್-ನಿಸ್ತರಂಗಾಂಬುಧಿಯಂತೆ, ನಿವಾತಪ್ರದೀಪವತ್-ನಿವಾತಜ್ಯೋತಿಯಂತೆ, ತತ್ವಮಯಃ-ಅಖಂಡಿತವಾದ ಶಿವತತ್ವಸ್ವರೂಪನಾಗಿ, ಸುಖೀ-ನಿತ್ಯಾನಂದವುಳ್ಳಾತನು, ಭವೇತ್-ಆಗುವನು. ॥೭೫॥

ಸೂ॥ ಈ ಸಹಜಾವಸ್ಥೆಯಲ್ಲಿರ್ಪ ಯೋಗೀಶ್ವರಂಗೆ ಇದಿರಿಟ್ಟುಮಾಡುವ ಬಾಹ್ಯಾಭ್ಯಂತರ ಪೂಜಾವ್ಯವಹಾರವಿಲ್ಲವಾಗಿ ಅಜ್ಞಾನ ಪೂಜಾವಿಧಾನ ವತಿಗೋಪ್ಯವೆಂದು ಪೇಳ್ದಪಂ:—

ಶ್ಲೋ॥ ಶೃಣುಚಿತ್ಸ್ಥಿವಪೂಜಾಯಾಃ ಪ್ರಕಾರಂಕಥಯಾಮ್ಯಹಂ ।
ರಹಸ್ಯಂಸರ್ವಶಾಸ್ತ್ರಾರ್ಥಸಾರಂಸದ್ಯೋವಿಮುಕ್ತಿದಂ ॥೭೬॥

ಟೀ॥ ಎಲೈಸ್ನೇಹಿತನೆ, ಸರ್ವಶಾಸ್ತ್ರಾರ್ಥಸಾರಂ-ಸಕಲಶಿವಾಗಮಾರ್ಥಂಗಳ ಸಾರವಾದಂಥ, ಸದ್ಯೋವಿಮುಕ್ತಿದಂ-ಆ ಕ್ಷಣದಲ್ಲಿ ನಿಜಮೋಕ್ಷಮಂ ಕೊಡುವಂಥ, ರ

ಹಸ್ಯಂ-ಗೋಪ್ಯವಾದಂಥ, ಚಿಚ್ಛಿವಪೂಜಾಯಾಃ-ಜ್ಞಾನವಾತ್ರದಲಾಗುವ ಶಿವಪೂಜೆಯ, ಪ್ರಕಾರಂ-ವಿಧಾನವನು, ಅಹಂ-ನಾನು, ಕಥಯಾಮಿ-ಪೇಳುವೆನು. (ತಾತ್ಪರ್ಯ-ಜ್ಞಾನ ಪಾದದಲ್ಲಿ ಪೇಳ್ವ ದೀಕ್ಷಾಮಂತ್ರಾದಿಗಳ ಯೋಗಪಾದದಲ್ಲಿ ಪೇಳ್ವ ಯಮಾದಿಗಳ ಚ ರ್ಯಾಪಾದದಲ್ಲಿ ಪೇಳ್ವ ಸದಾಚಾರಂಗಳೆಂಬ ಸಕಲಾರ್ಥಂಗಳ ಉಳಿಮೆಯುಪ್ಪುದರಿಂ ದೀ ಜ್ಞಾನಪೂಜೆಯೇ ಅತಿರಹಸ್ಯವೆಂಬುದಭಿಪ್ರಾಯಂ.) ||೭೬||

ಸೂ|| ಈ ಜ್ಞಾನಪೂಜಾಸ್ವರೂಪವನೇ ಗ್ರಂಥದ್ವಯದಿಂ ಪೇಳ್ದಪಂ:—

ಶ್ಲೋ|| ನಿಶ್ಚಿಂತಾಯಚ್ಛಿವಧ್ಯಾನಂನಿಷ್ಕ್ರಿಯಾತಸ್ಯಪೂಜನಂ ।
ಪ್ರದಕ್ಷಿಣಂನಿಶ್ಚಲತ್ವಂ ಸೋಽಹಂಭಾವೋನಮಸ್ಕ್ರಿಯಾ ॥

ಟೀ|| ತಸ್ಯ-ಆಜೀವನ್ಮುಕ್ತಂಗೆ, ನಿಶ್ಚಿಂತಾ-ಇದಿರಿಟ್ಟು ಚಿಂತಿಸದಿಹುದೆಂಬ, ಯ ತ್-ಆವುದುಂಟೋ, ತತ್-ಅದೇ, ಶಿವಧ್ಯಾನಂ-ಶಿವಧ್ಯಾನವೆನಿಸುವುದು. ತಸ್ಯ-ಆಜೀ ವನ್ಮುಕ್ತಂಗೆ, ನಿಷ್ಕ್ರಿಯಾ-ಬಾಹ್ಯಕ್ರಿಯೆಯುಂಬಿಟ್ಟುದೇ, ಪೂಜನಂ-ಪೂಜೆಯು, ನಿ ಶ್ಚಲತ್ವಂ-ಮುಳುಂಗಿದಮನಂ ಮರಳಿಚಲಿಸದಿಹುದೇ, ಪ್ರದಕ್ಷಿಣಂ-ಪ್ರದಕ್ಷಿಣವೆನಿಸು ವುದು. ಸೋಽಹಂಭಾವಃ-ಸಕಾರಹಕಾರಂಗಳೆಂಬ ಬೀಜಾಕ್ಷರಂಗಳಳಿದುಳಿದು ನಿಂದ ಪರಿಪೂರ್ಣಪ್ರಣವದಲ್ಲಿಯು ಸಾಮರಸ್ಯವೇ, ನಮಸ್ಕ್ರಿಯಾ-ನಮಸ್ಕಾರವೆನಿಸುವುದು.

ಶ್ಲೋ|| ಮೌನಂಸಂಕೀರ್ತನಂತಸ್ಯ ಜಪಸ್ತು ಪರಿಪೂರ್ಣತಾ ।
ಕೃತ್ಯಾಕೃತ್ಯಜ್ಞತಾಶೀಲಂ ನಿರ್ವಾಣಂಸಮದರ್ಶನಂ ||೭೮||

ಟೀ|| ತಸ್ಯ-ಆ ಜೀವನ್ಮುಕ್ತಂಗೆ, ಮೌನಂ-ವೈಖರ್ಯಾದಿಶಬ್ದವ್ಯಾಪಾರವಳಿದು ದೇ, ಸಂಕೀರ್ತನಂ-ಸ್ತೋತ್ರವು, ಪರಿಪೂರ್ಣತಾ-ಅಖಂಡಿತವಾದ ಚೈತನ್ಯವುಂ ಕರ ಣಸಂಗದಿಂ ಖಂಡಿತವನಾಗದಿರ್ಪುದೇ, ಜಪಃ-ಜಪವು, ಕೃತ್ಯಾಕೃತ್ಯಜ್ಞತಾ-ವಿಧಿನಿ ಷೇಧಂಗಳ ನರಿಯುತಿಹುದೇ, ಶೀಲಂ-ಸದ್ವರ್ತನವು, ಸಮದರ್ಶನಂ-ಪರಮಾತ್ಮಂಗೆ ತಾ ನು ಸಮಾನವೆಂದರಿವ ಕೂಟವೇ, ನಿರ್ವಾಣಂ-ಆತ್ಮಾರ್ಪಣವೆಂಬ ಪೂಜೆಯು. (ಷೋಡಶೋಪಚಾರಂಗಳೊಳಗೆ ನಾನು ನಿನ್ನವನೆಂದು ತನ್ನ ನರ್ಪಿಸುವುದೇ ಆತ್ಮಾ ರ್ಪಣವೆನಿಸುವುದು.) ತಾತ್ಪರ್ಯ-ಲೋಕವ್ಯವಹಾರದಲ್ಲಿ ಸಮರಸಭಾವದಿಂ ಬೆರಸಿ ದ ಸ್ನೇಹಿತರ್ಗೆ ಬಾಹ್ಯೋಪಚಾರವೇ ಭಾರವಪ್ಪಂತೆ ‹‹ ದ್ವಾಸುಪರ್ಣಾಸಯುಜಾಸಖಾ ಯಾ›› ಜೀವಹಂಸ ಪರಮಹಂಸರೆಂಬೀರ್ವರೂ ಜ್ಞಾನಕ್ರಿಯೆಯೆಂಬುಭಯಪಕ್ಷವುಳ್ಳವ ರು ಸಮಾನವಾದ ಕೂಟವುಳ್ಳವರು ಪರಸ್ಪರಸ್ನೇಹಿತರುಗಳು ಎಂಬ ಶ್ರುತಿಪ್ರಮಾಣದಿಂದ ವೂ ‹‹ ಯದಾ ಪಶ್ಯಂ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋ ನಿಂ ತದಾವಿದ್ವಾನ್ ಪುಣ್ಯಪಾಪೇವಿಧೂಯ ನಿರಂಜನಃ ಪರಮಂಸಾಮ್ಯಮುಪೈತಿ›› ಆ ರಿಂದಲೂ ಕಾಣಲು ಶಕ್ಯನಲ್ಲದ ಸುವರ್ಣವರ್ಣನಾದ ಜಗತ್ಕರ್ತೃವಾದ ಶಬ್ದಬ್ರಹ್ಮ

ವೇ ಪೀತವಾಗಿಯುಳ್ಳ ಪರಮಪುರುಷನಾದ ಶಿವನನು ಆವಾಗ ಕಾಣ್ಬನೋ ಆಗಲು ವಿವೇಕಿಯಾದಾತನು ಪುಣ್ಯಪಾಪಂಗಳಂ ಕೊಡಹಿ ನಿರ್ಮಲನಾಗಿ ವಿಶಿಷ್ಟವಾದ ಶಿವಸಮಾನತೆಯು ನೆಯ್ದುವನೆಂಬ ದಿವ್ಯಶ್ರುತಿಪ್ರಮಾಣದಿಂದವೂ ಪರಮಾತ್ಮನಲ್ಲಿ ಸಮರಸಭಾವದಿಂ ಕೂಡಿದ ಜೀವನ್ಮುಕ್ತಂಗೆ ಬಹುವಿಧೋಪಚಾರಂಗಳಂ ಬಿಟ್ಟುದೇ ಪೂಜೆಯೆನಿಸುವುದೆಂಬುದಭಿಪ್ರಾಯಂ. " ನಾತ್ರಪೂಜಾನಮಸ್ಕಾರೋ ನಜಪೋಧ್ಯಾನಮೇವಚ। ಕೇವಲಂಜ್ಞೇಯಮಿತ್ಯುಕ್ತಂ ವೇದಿತವ್ಯಂನಕಿಂಚನ'' ಎಂದುದಾಗಿ.) ॥೭೮॥

ಸೂ॥ ಸುಷುಪ್ತನ ಕೈಯ ಕಂತುಕವು ಅಪ್ರಯತ್ನದಿಂ ಕಳೆವಂತೆ ಪೂಜೆ ಪೂರಿತವಾದ ಜೀವನ್ಮುಕ್ತನ ಬಾಹ್ಯಕ್ರಿಯೆಗಳಪ್ರಯತ್ನದಿಂ ಬಿಡಲಾತನ ನಿಜಾವಸ್ಥೆಯಂ ಪೇಳ್ದಪಂ:—

ಶ್ಲೋ॥ ಸರ್ವೇಂದ್ರಿಯಗುಣರಹಿತಾ ರೂಪಾತೀತಾನಿರಂಜನಾಶಾಂತಾ।
ಭಾವಾಭಾವವಿದೂರಾಸಹಜಾವಸ್ಥೇತಿಸಾಕಥಿತಾ ॥೭೯॥

ಟೀ॥ ಸರ್ವೇಂದ್ರಿಯಗುಣರಹಿತಾ-ಜಾಗ್ರದವಸ್ಥೆಯಂತೆ ಸಕಲೇಂದ್ರಿಯಂಗಳ ವ್ಯಾಪಾರಂಗಳ್ತನಗಿಲ್ಲದಂಥ, ರೂಪಾತೀತಾ-ಸ್ವಪ್ನಾವಸ್ಥೆಯಂತೆ ಕಲ್ಪಿತವಾದ ರೂಪು ತನಗಿಲ್ಲದಿರ್ಪಂಥ, ನಿರಂಜನಾ-ಸುಷುಪ್ತಿಯಂತೆ ತಮೋರೂಪವಲ್ಲದಿರ್ಪಂಥ, ಶಾಂತಾ-ತುರ್ಯಾವಸ್ಥೆಯಂತೆ ದಿವ್ಯಾನಂದದಿಚ್ಛೆಯಂ ಪುಟ್ಟಿಸದಂಥ, ಭಾವಾಭಾವವಿದೂರಾ-ತುರ್ಯಾತೀತದಂತೆ ಉಂಟಿಲ್ಲವೆಂಬ ತೋರಿಕೆಯ ಬೆಡಂಗಡೆಗೆ ಸಮೀಪವಲ್ಲ ದತಿದೂರವಾದಂಥ, ಸಾ-ಆ ಇರವು, ಸಹಜಾವಸ್ಥೇತಿ_ಸಹಜಾವಸ್ಥೆಯೆಂದು, ಕಥಿತಾ-ಪೇಳಲ್ಪಟ್ಟಿತು. (ತಾತ್ಪರ್ಯ-ಇಂದ್ರಿಯವ್ಯಾಪಾರವುಳ್ಳ ಜಾಗ್ರದಿಂ ಕಲ್ಪಿತರೂಪವುಳ್ಳ ಸ್ವಪ್ನದಿಂ ತಮೋರೂಪವಾದ ಸುಷುಪ್ತಿಯಿಂ ಬ್ರಹ್ಮಾನಂದವಭೋಗಾಸಕ್ತಿಯಾದ ತುರ್ಯದಿಂ ತೋರಿಕೆಯುಳಿದು ನಿಂದ ತುರ್ಯಾತೀತದಿಂ ತೊಲಗಿ ದೂರವಾದ ಸರ್ವಸಾಕ್ಷಿಕವಾಗಿನಿಂದ ನಿಲುಕಡೆಯೇ ಸಹಜಾವಸ್ಥೆಯೆನಿಪುದೆಂಬುದಭಿಪ್ರಾಯಂ.) ॥೭೯॥

ಸೂ॥ ಆಚಾರ್ಯನು ಅವಸ್ಥಾರೂಪಂಗಳಂ ಪೇಳಲುದ್ಯುಕ್ತನಾಗಿ ಕ್ರಮದಿಂದವರ ಪೆಸರಂಪೇಳ್ದಪಂ:—

ಶ್ಲೋ॥ ಜಾಗ್ರತ್ಸ್ವಪ್ನಸುಷುಪ್ತಿಶ್ಚ ತುರೀಯಂಚಷಡೇವಚ ।
ತುರ್ಯಾತೀತಂಚಸಹಜಂ ನಕಿಂಚಿಚ್ಚಿಂತಯೇತ್ತತಃ ॥೮೦॥

ಟೀ॥ ಜಾಗ್ರತ್ಸ್ವಪ್ನಸುಷುಪ್ತಿಶ್ಚ-ಜಾಗ್ರತ್-ಜಾಗ್ರದವಸ್ಥೆಯೆಂದು,ಸ್ವಪ್ನ-ಸ್ವಪ್ನವೆಂದು,ಸುಷುಪ್ತಿಶ್ಚ ಸುಷುಪ್ತಿಯೆಂದು, ತುರೀಯಂಚ-ತುರ್ಯವೆಂದು,ತುರ್ಯಾತೀತಂಚ-ತುರ್ಯಾತೀತವೆಂದು, ಸಹಜಂಚ-ಸಹಜಾವಸ್ಥೆಯೆಂದು, ಅವಸ್ಥೆಗಳು, ಷಡೇವಚ-ಆರೆಯೇ, ತತಃ-ಆ ಸಹಜಾವಸ್ಥೆಯಿಂದಂಮೇಲೆ, ಕಿಂಚಿತ್_ಬಾಪನೂ, ನಚಿಂತಯೇ

ತ್-ಚಿಂತಿಸಲಾಗದು. (ತಾತ್ಪರ್ಯ-ಸಹಜಾವಸ್ಥೆಯಿಂ ಮೇಲೆ ಅವಸ್ಥಾಕಲ್ಪನಕ್ಕೆ ತೆರಪಿಲ್ಲವೆಂಬುದಭಿಪ್ರಾಯಂ.) ॥೩೯॥

ಸೂ॥ ಭೋಗದಲ್ಲಿಯು ಅನುರಕ್ತನೇ ಜೀವನು, ವಿರಕ್ತನೇ ಮುಮುಕ್ಷುವಾದ ಕಾರಣದಿಂ ದೀಯವಸ್ಥೆಯಲ್ಲಿ ಭೋಗಾಧಿಕಾರಿಯಾದಾತನು ಯೋಗಾಧಿಕಾರಿಯಾಗನೆಂದು ಪೇಳ್ದಪಂ:—

ಶ್ಲೋ॥ ವಿಹಾಯ ಕರ್ಮಾಣ್ಯಘಸಂಯುತಾನಿ ಗೃಹ್ಣಾತಿ ಕರ್ಮಾಣಿ ಸುಖಾನ್ವಿತಾನಿ । ಸ್ವರ್ಗೋನ್ಮುಖೋ ಯಃ ಪುರುಷಃ ಪ್ರವೃತ್ತೋ ನೈವಾಧಿಕಾರೀ ಸತು ಜಾಗರೇಪಿ ॥೩೧॥

ಟೀ॥ ಯಃ-ಆವನಾನೊರ್ವ, ಪುರುಷಃ-ಪುರುಷನು, ಅಘಸಂಯುತಾನಿ-ಪಾಪದೊಡನೆ ಕೂಡಿದಂಥ, ಕರ್ಮಾಣಿ-ಮನೋವಾಕ್ಕಾಯಂಗಳಿಂ ಪುಟ್ಟುವ ಬಹುವಿಧವಾದ ದೋಷಕೃತ್ಯಂಗಳನು, ವಿಹಾಯ-ಬಿಟ್ಟು, ಶುಭಾನ್ವಿತಾನಿ-ಪುಣ್ಯಂಗಳಿಂ ಕೂಡಿದಂಥ, ಕರ್ಮಾಣಿ-ಸತ್ಕೃತ್ಯಂಗಳನು, ಗೃಹ್ಣಾತಿ-ಅಂಗೀಕರಿಸುತ್ತಿಹನೊ, ಸತು-ಆ ಪುಣ್ಯಾಪೇಕ್ಷೆಯುಳ್ಳಂಥ, ಸ್ವರ್ಗೋನ್ಮುಖಃ-ಸ್ವರ್ಗಾದಿಭೋಗದ ಬಯಕೆಯುಳ್ಳಂಥಾತನಾಗಿ, ಪ್ರವೃತ್ತಃ-ಪ್ರವರ್ತಿಸುತ್ತಿರ್ಪಂಥಾತನು, ಜಾಗರೇಪಿ-ಯೋಗಸಾಧನವಾದ ಜಾಗ್ರನವಸ್ಥೆಯಲ್ಲಿಯೂ, ಅಧಿಕಾರೀ-ಯೋಗ್ಯನು, ನೈವ-ಅಲ್ಲವೇ. (ತಾತ್ಪರ್ಯ-ಕೈಮುತಿಕನ್ಯಾಯದಿಂದುತ್ತರೋತ್ತರವಾದವಸ್ಥೆಗೆ ಮುನ್ನವೆ ಯೋಗ್ಯನಲ್ಲವೆಂಬುದಭಿಪ್ರಾಯಂ.) ॥೩೧॥

ಸೂ॥ ಅನಂತರದಲ್ಲಿ ಭೋಗಸಾಧನವಾದ ಜಾಗ್ರನವಸ್ಥೆಯಿಂದನ್ಯವಾದ ಯೋಗೋನ್ಮುಖವಾದ ಜಾಗ್ರದವಸ್ಥೆಯಂ ಪೇಳ್ದಪಂ:—

ಶ್ಲೋ॥ ಅಲಮಲಮಖಿಲಪದಸುಖೈಶ್ಚೇತಿ ಕದಾಚಿನ್ನಿವೃತ್ತಮಾನಸೋ ಯಃ । ಸತು ಜಾಗ್ರದವಸ್ಥಾಯಾಂ ತಿಷ್ಠನ್ಮೋಕ್ಷೋನ್ಮುಖೋ ಭವತಿ ॥೩೨॥

ಟೀ॥ ಅಖಿಲಪದಸುಖೈಃ-ಅಖಿಲ-ಸಮಸ್ತವಾದ, ಪದ-ಉತ್ತರೋತ್ತರಭುವನಂಗಳಲ್ಲಿಹ, ಸುಖೈಶ್ಚ-ಸ್ರಕ್ಚಂದನವನಿತಾದಿಸುಖಂಗಳಿಂದವೂ, ಅಲಮಲಮಿತಿ-ಸಾಕುಸಾಕುಎಂದು, ಕದಾಚಿತ್-ಶಕ್ತಿಪಾತಸಮಯದಲ್ಲಿ, ನಿವೃತ್ತಮಾನಸಃ-ಸಂಸಾರದಲ್ಲಿ ವಿಮುಖವಾದ ಮನಸ್ಸುಳ್ಳಂಥ, ಯಃ-ಆವನಾನೊರ್ವನುಂಟೋ, ಸತು-ಆತನಾಯಿತ್ತಾದೊಡೆ, ಜಾಗ್ರನವಸ್ಥಾಯಾಂ-ಜಾಗ್ರನವಸ್ಥೆಯಲ್ಲಿ, ತಿಷ್ಠನ್-ಇರುತ್ತಿರ್ಪಂಥಾತನಾಗಿ, ಮೋಕ್ಷೋನ್ಮುಖಃ-ಮೋಕ್ಷಪತ್ತಭಿಮುಖನು, ಭವತಿ-ಆಗುತ್ತಿಹನು. (ತಾತ್ಪರ್ಯ-ಭೋಗಾರ್ಥವಾಗಿ ಪಿಡಿದ ವಸ್ತುಗಳನು ಹೇಯಬುದ್ಧಿಯಿಂ ದೆಚ್ಚತ್ತು ಬಿಡುವಾತನೇ ಮುಮುಕ್ಷುವೆಂಬುದಭಿಪ್ರಾಯಂ.) ॥೩೨॥

ಸೂ॥ ಪೂರ್ವೋದಿತನಾದ ಲಕ್ಷ್ಯಂಗಳಂ ಶ್ರೋತ್ರನೇತ್ರಂಗಳಿಂ ಕಾಣ್ಬ ಸ್ಥೂಕ್ಷ್ಮ ಜಾಗರಣದಿಂದನ್ಯನಾದ ಜಾಗ್ರದವಸ್ಥೆಯಂ ಪೇಳ್ದಪಂ:—

ಶ್ಲೋ॥ ಸಂಸಾರೋತ್ತರಣಂಮಮಾಸ್ತಿ ಕಥಮಿತ್ಯಾಚಾರ್ಯಸಂಸೇವನಂ ವಿದ್ವತ್ಸಂಗಮಕಾಮತಾಂ ಸ್ಮೃತಿಸದಾಚಾರಂಶಮಂಮೌನಿತಾಂ । ವೈರಾಗ್ಯಂಶ್ರುತಿಶಾಸ್ತ್ರನಿಶ್ಚಯಧಿಯಂ ಕಾಮಾದ್ಯರಿಧ್ವಂಸನಂ ಯೋಗಾಭ್ಯಾಸಮುಪೈತಿ ದಂಭರಹಿತೋಜಾಗ್ರತ್ಸ್ವಭಾವಾನ್ವಿತಃ ॥೩೩॥

ಟೀ॥ ಮಮ-ಎನಗೆ, ಸಂಸಾರೋತ್ತರಣಂ-ಜನನಮರಣರೂಪವಾದ ಸಂಸಾರಮಂದಾಂಟುವುದು, ಕಥಂಅಸ್ತೀತಿ-ಹೇಂಗುಂಟಾಗುತ್ತಿದ್ದೀತೆಂದು, ಆಚಾರ್ಯಸಂಸೇವನಂ-ಸಮರ್ಥನಾದ ಶ್ರೀಗುರುವಿನ ಸೇವೆಯನು, ವಿದ್ವತ್ಸಂಗಂ-ವಿವೇಕಿಗಳಸಂಗವನು, ಅಕಾಮತಾಂ-ಇಹಲೋಕ ಪರಲೋಕ ಸುಖಂಗಳ ಬಯಸದಿಹತನವನು, ಸ್ಮೃತಿ ಸದಾಚಾರಂ-ಧರ್ಮಶಾಸ್ತ್ರೋಕ್ತವಾದ ಸದ್ವರ್ತನವನು, ಶಮಂ-ಶಾಂತಿಯನು-ಮೌನಿತಾಂ-ವ್ಯರ್ಥಾಲಾಪವಿಲ್ಲದಿಹತನವನ, ವೈರಾಗ್ಯಂ-ವಿರತಿಯನು, ಶ್ರುತಿಶಾಸ್ತ್ರನಿಶ್ಚಯಧಿಯಂ-ವೇದಶಾಸ್ತ್ರಂಗಳಿಂ ನಿಶ್ಚಯಮಾದ ಬುದ್ಧಿಯನು, ಕಾಮಾದ್ಯರಿಧ್ವಂಸನಂ-ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳೆಂಬರಿಗಳ ಕೆಡಿಸುವುದನು,ಯೋಗಾಭ್ಯಾಸಂ-ಯಮಾದಿಯೋಗಾಭ್ಯಾಸಗಳನು ಎಂಬಿವುಮೊದಲಾದ ವ್ಯಾಪಾರಗಳನು, ಜಾಗ್ರತ್ಸ್ವಭಾವಾನ್ವಿತಃ-ಜಾಗ್ರದವಸ್ಥೆಯಿಂ ಕೂಡಿದಾತನಾಗಿ,ದಂಭರಹಿತಃ-ಕಪಟವಿಲ್ಲದಿರ್ಪಂಥಾತನಾಗಿ, ಉಪೈತಿ-ಎಯ್ದುತ್ತಿಹನು. (ತಾತ್ಪರ್ಯ—" ಯಾತೇರುದ್ರಶಿವಾತನೂರಘೋರಾಪಾಪಕಾಶಿನೀ" ಎಲೆ ಪರಮೇಶ್ವರನೆ ಅಘೋರಾದಿಮೂರ್ತಿಗಳಂತೆ ಭಯಂಕರವಲ್ಲದೆ ಯಿರ್ಪಂಥ ಶಾಂತರೂಪವಾದ ನಾದಬಿಂದುಕಲಾತ್ಮಕವಾದ ನಿನ್ನ ಮೂರ್ತಿಯು ಪಾಪರಹಿತರಾದ ನಿರ್ಮಲಬುದ್ಧಿಯುಳ್ಳವರಲ್ಲಿ ಬೆಳಗುತ್ತಿರ್ಪುದೆಂಬ ಶ್ರುತಿಪ್ರಮಾಣದಿಂದೀಶುದ್ಧಜಾಗ್ರದವಸ್ಥಾವ್ಯಾಪಾರಂಗಳು ಮುಂದಣ ಮೋಕ್ಷಾವಸ್ಥೆಗಳಿಗೆ ಸಾಧನಂಗಳೆಂಬುದಭಿಪ್ರಾಯಂ.) ॥೩೩॥

ಸೂ॥ ಈ ಜಾಗ್ರದವಸ್ಥಾವ್ಯಾಪಾರಂಗಳು ದೇಹಾಂತರಮಂ ಕೊಟ್ಟರೂ ಕೆಡದೆ ಮುಮುಕ್ಷುಜನಕ್ಕೆ ಉತ್ತರಾವಸ್ಥೆಯ ನೆಯ್ದಿಸುವುವೆಂದು ಪೇಳ್ದಪಂ:—

ಶ್ಲೋ॥ ಮೃತೋಜಾಗ್ರದವಸ್ಥಾಯಾಂ ಯದಿಚೇದನ್ಯಜನ್ಮನಿ ।
ಸ್ವಪ್ನಾವಸ್ಥಾಂಗತೋಯಾತಿ ಪೂರ್ವಾಭ್ಯಾಸವಶಾದ್ಭವಿ ॥೩೪॥

ಟೀ॥ ಯಃ-ಆವಾತನು, ಜಾಗ್ರದವಸ್ಥಾಯಾಂ-ಈ ಪೂರ್ವೋದಿತವಾದ ಜಾಗ್ರದವಸ್ಥಾವ್ಯಾಪಾರದಲ್ಲಿ, ಯದಿ-ಎತ್ತಲಾನೂ, ಮೃತಶ್ಚೇತ್-ಆ ದೇಹವಂಬಿಟ್ಟಾತನಾದರೆ,

ಅನ್ಯಜನ್ಮನಿ-ಅನ್ಯವಾದ ಮುಂದಣಜನ್ಮದಲ್ಲಿ, ಪೂರ್ವಾಭ್ಯಾಸವಶಾತ್-ಪೂರ್ವಜನ್ಮದಲ್ಲಿ ಯ ಅಭ್ಯಾಸಸಂಸ್ಕಾರ ವಶದತ್ತಣಿಂದ, ಸ್ವಪ್ನಾವಸ್ಥಾಂ-ಉತ್ತರವಾದ ಸ್ವಪ್ನಾವಸ್ಥೆ ಯನು, ಗತಃ-ಎಯ್ದಿದಾತನಾಗಿ, ಭುವಿ-ಭೂಮಿಯಲ್ಲಿ, ಯಾತಿ-ಎಯ್ದುತ್ತಿಹನು. (ತಾತ್ಪರ್ಯ-ಈ ಸೂಕ್ಷ್ಮಶರೀರವು ಮೋಕ್ಷಾವಧಿಪ್ರಳಯಾವಧಿಯಲ್ಲಿಯಲ್ಲದೆ ಕೆಡದಾಗಿ, ಆ ಸೂಕ್ಷ್ಮತನುವನೇ ಜ್ಞಾನಕ್ರಿಯಾಜನಿತವಾದ ಸಂಸ್ಕಾರವಾಶ್ರಯಿಸಿರ್ಪುದಾಗಿ ಸ್ಥೂಲ ಶರೀರವಳಿದರೂ ಪೂರ್ವಜನ್ಮದ ಸಂಸ್ಕಾರವೇ ಉತ್ತರಜನ್ಮದಲ್ಲಿ ಫಲಿಸುವುದೆಂಬುದಭಿ ಪ್ರಾಯಂ.) ||೩೪||

ಸೂ|| ಅನಂತರವಲ್ಲಿ ಧ್ಯಾನಾನುಸಂಧಾನಮಾತ್ರದಿಂದೀಸ್ವಪ್ನಾವಸ್ಥೆಯಿಂ ದನ್ಯ ವಾದ ಸ್ವಪ್ನಾವಸ್ಥೆಯಂ ಪೇಳ್ದಪಂ:—

ಶ್ಲೋ|| ಸ್ವಪ್ನವದಖಿಲಂಲೋಕಂ ಪಶ್ಯನ್ ಶರದಭ್ರರೂಪಮಿವಚಿತ್ತೇ।
ತಿಷ್ಠತಿಸತ್ತಾಮಾತ್ರೇಸ್ವಪ್ನಾವಸ್ಥಾನ್ವಿತಶ್ಚರತಿ ||೩೫||

ಟೀ|| ಯಃ-ಆವನಾನೊರ್ವಯೋಗೀಶ್ವರನು, ಅಖಿಲಂ-ಸಮಸ್ತವಾದಂಥ, ಲೋ ಕಂ-ಪ್ರಪಂಚವನು, ಸ್ವಪ್ನವತ್-ಸ್ವಪ್ನದಲ್ಲಿತೋರಿದ ಪ್ರಪಂಚದೋಪಾದಿಯಲ್ಲಿ, ಶರ ದಭ್ರರೂಪಮಿವ-ಶರತ್ಕಾಲದಮೇಘಸ್ವರೂಪದಂತೆ, ಚಿತ್ತೇ-ಶುದ್ಧವಾದಮನದಲ್ಲಿ, ಪಶ್ಯನ್-ಕಾಣುತ್ತಮೂ, ಸತ್ತಾಮಾತ್ರೇ-ಉಂಟೆಂಬಮಾತ್ರದಲ್ಲಿ, ತಿಷ್ಠತಿ-ಇರುತ್ತಿಹ ನೋ, ಸಃ-ಆತನು, ಸ್ವಪ್ನಾವಸ್ಥಾನ್ವಿತಃ-ಸ್ವಪ್ನಾವಸ್ಥೆಯಿಂ ಕೂಡಿದಾತನಾಗಿ, ಚರತಿ- ಚರಿಸುತ್ತಿಹನು. (ತಾತ್ಪರ್ಯ-ಸ್ವಪ್ನಪ್ರಪಂಚದಲ್ಲಿ ಭೋಗವಂ ಪಡೆಯುವಂತೆ ಶರತ್ಕಾ ಲದ ಬೆಳ್ಮುಗಿಲಿನಲ್ಲಿ ಜಲವಂಪಡೆಯುದಂತೆ ಇದಿರಿಟ್ಟುತೋರಿದ ಪ್ರಪಂಚದಲ್ಲಿ ನಾನು ನ ನ್ನದೆಂಬಭಿಮಾನವಳಿದು ಉಂಟೆಂಬಮಾತ್ರದಲ್ಲಿಯೇ ಕಾಣ್ಬುದು ಸ್ವಪ್ನಾವಸ್ಥೆಯೆಂಬು ದಭಿಪ್ರಾಯಂ.) ||೩೫||

ಸೂ|| ಈ ಸ್ವಪ್ನದಿಂದುತ್ತರನಾದ ಸುಷುಪ್ತಿಯಂ ಪೇಳ್ದಪಂ:—

ಶ್ಲೋ|| ಗತೇದ್ವೈತಭಾವೇಸ್ಥಿತೇಶಾಂತದೇಶೇ ಪ್ರಕಾಶಸ್ವಭಾವೇ
ಚಿದಾನಂದಭಾನೌ । ಬಹಿರ್ವ್ಯಕ್ತಿಯುಕ್ತೋಽಪಿ ಹೃತ್ಪ
ದ್ಮವೃತ್ತಸ್ಸುಷುಪ್ತಿಸ್ಥಿತಶ್ಚಿತ್ರವದ್ಭಾತಿಯೋಗೀ ||೩೬||

ಟೀ|| ದ್ವೈತಭಾವೇ-ಧ್ಯಾನಧ್ಯೇಯ ಜ್ಞಾನಜ್ಞೇಯ ಭಾವಾಭಾವ ಮುಂತಾದ ದ್ವೈತಭಾವವು, ಗತೇ-ಹೋಗಲಾಗಿ, ಪ್ರಕಾಶಸ್ವಭಾವೇ-ನಿರುಪಾಧಿಕಜ್ಯೋತಿಸ್ವರೂ ಪವಾದಂಥ, ಚಿದಾನಂದಭಾನೌ-ಜ್ಞಾನರೂಪವಾಗಿ ಆನಂದರೂಪವಾಗಿ ಅವಿದ್ಯಾಂಧಕಾ ರಕ್ಕೆ ಸೂರ್ಯನಾಗಿರ್ಪಂಥ, ಶಾಂತದೇಶೇ-ಶಿವತತ್ವವೆಂಬ ಮಹದಾಶ್ರಯವು, ಸ್ಥಿತೇ-ಇ ರಲಾಗಿ, ಬಹಿರ್ವ್ಯಕ್ತಿಯುಕ್ತೋಽಪಿ-ಬಾಹ್ಯವಿಷಯೋನ್ಮುಖಂಗಳಾದ ಕರಣಂಗಳಲ್ಲಿ

ಕೂಡಿದಾತನಾದರೂ, ಹೃತ್ಪದ್ಮವೃತ್ತಿಃ-ಹೃದಯಕಮಲಮಧ್ಯದಲ್ಲಿಯೇ ಪ್ರವರ್ತಿಸಲ್ಪಟ್ಟಂಥ, ಸುಷುಪ್ತಿಸ್ಥಿತಃ-ಸುಷುಪ್ತ್ಯವಸ್ಥೆಯಲ್ಲಿರ್ಪಂಥ, ಯೋಗೀ-ಯೋಗೀಶ್ವರನು, ಚಿತ್ರವತ್-ಚಿತ್ರಪ್ರತಿಮೆಯೋಪಾದಿಯಲ್ಲಿ, ಭಾತಿ-ಒಪ್ಪುತ್ತಿದ್ದಾನು. ಅಹೋ-ಆಶ್ಚರ್ಯವು. (ತಾತ್ಪರ್ಯ-ನಿರ್ವಿಕಾರ್ಯವಾದ ಚೈತನ್ಯಸಂವಿಧಾನಮಾತ್ರದಿಂ ಪ್ರಾರಬ್ಧವಾಸನಾನ್ವಿತವಾದ, ಕರಣಂಗಳ್ಗೆ ಹಿಮ್ಮುಖವಾದರೂ ನಿಶ್ಚಲಬ್ರಹ್ಮಾನುಸಂಧಾನದಲ್ಲಿರ್ಪಾತನೇ ಸುಷುಪ್ತನೆಂಬುದಭಿಪ್ರಾಯಂ "ಸಮಾಸಕ್ತಂಯದಾಚಿತ್ತಂ ಜಂತೋರ್ವಿಷಯಗೋಚರೇ। ಯದ್ಯೇವಂಬ್ರಹ್ಮಣಿಸ್ಯಾತ್ತತ್ಕೋನಮುಚ್ಯೇತಿಬಂಧನಾತ್" ಎಂಬ ಶೃತಿಪ್ರಮಾಣವುಂಟಾಗಿ.) ॥೩೬॥

ಸೂ॥ ಅನಂತರದಲ್ಲಿ ತುರ್ಯಾವಸ್ಥೆಯಂ ಪೇಳ್ದಪಂ:—

ಶ್ಲೋ॥ ಅನವೃತೋಽಪ್ಯವೃತಃ ಕ್ಷಯಮಾನಸೋ ವಿದಿತಶಾಂತತನು
ರ್ನಿರಹಂಕೃತಿಃ । ಗಳಿತಗಂಧಗುಣಸ್ಸತುತುರ್ಯಭಾಗ್ವಹತಿ
ಜೀವಿತಮುಕ್ತಿಸುಭಾವಿತಃ ॥೩೭॥

ಟೀ॥ ಯಃ-ಆವಾತನು, ಅನವೃತೋಽಪಿ-ಮರಣಾವಸ್ಥೆಯನೆಯ್ದಿದಂತೆ ನಿರ್ವ್ಯಾಪಾರಿಯಾದರೂ, ಅವೃತಃ-ಸತ್ತನಾಗಿಪ-ದಾತನು, ಕ್ಷಯಮಾನಸಃ-ಮನೋವ್ಯಾಪಾರವಂ ಕೆಡಿಸಿದಂಥ, ವಿದಿತಶಾಂತತನುಃ-ಸಿದ್ಧಿತುಷ್ಟಿ ಭಾವಪ್ರತ್ಯಯಾದಿ ಬುದ್ಧಿವ್ಯಾಪಾರವಿಲ್ಲವಾಗಿ ಪ್ರಸಿದ್ಧವಾದ ಶಾಂತಸ್ವರೂಪನಾದಂಥ, ನಿರಹಂಕೃತಿಃ-ಅಹಂಕಾರಮಮಕಾರವಿಲ್ಲದಿರ್ಪಂಥ, ಗಳಿತಗಂಧಗುಣಃ-ಸುಖದುಃಖಮೋಹರೂಪವಾದ ಗುಣತ್ರಯದ ವಾಸನೆಯಿಲ್ಲದಿರ್ಪಂಥಾತನುಂಟೋ, ಸತು-ಆತನು, ತುರ್ಯಭಾಕ್-ತುರ್ಯಾವಸ್ಥೆಯಂ ಭಜಿಸುವಂಥಾತನಾಗುತ್ತವೂ, ಜೀವಿತಮುಕ್ತಿಸುಭಾವಿತಃ-ಜೀವನ್ಮುಕ್ತಿಯುಳ್ಳಾತನೆಂದು ಭಾವಿಸಲ್ಪಟ್ಟಾತನಾಗಿ, ವಹತಿ-ಚರಿಸುತ್ತಿಹನು. (ತಾತ್ಪರ್ಯ-ಹೃದಯಸ್ಥಾನಮಂ ಮೀರಿನಿಂದಾತನೆಂಬುದಭಿಪ್ರಾಯಂ.) ॥೩೭॥

ಸೂ॥ ಅನಂತರದಲ್ಲಿ ತುರ್ಯಾವಸ್ಥೆಯಲ್ಲಿ ನಿಂದಾತನ ಇರವಂ ಪೇಳ್ದಪಂ:—

ಶ್ಲೋ॥ ಸಂಪೂರ್ಣಕುಂಭ ಇವವಾರಿನಿಧಾನಮಧ್ಯೇ ಸಂಶೂನ್ಯ
ಕುಂಭಇವವಿಷ್ಣುಪದಾಂತರಾಳೇ । ಅಂತರ್ಬಹಿಃಪ್ರಥಿತ
ಪೂರ್ಣಸುಶೂನ್ಯಭಾವಸ್ಸಚ್ಚಿತ್ರದೀಪಇವ ಭಾತಿ ತುರೀ
ಯಯುಕ್ತಃ ॥೩೮॥

ಟೀ॥ ವಾರಿನಿಧಾನಮಧ್ಯೇ-ಸಮುದ್ರಮಧ್ಯದಲ್ಲಿ, ಸಂಪೂರ್ಣಕುಂಭಇವ-ನಿಶ್ಚಲೋದಕದಿಂದೊಳಹೊರಗೆ ಪೂರ್ಣವಾಗಿ ಮುಳುಂಗಿದ ಕುಂಭದಂತೆ, ವಿಷ್ಣುಪದಾಂತರಾಳೇ-ಆಕಾಶಮಧ್ಯದಲ್ಲಿ, ಸಂಶೂನ್ಯಕುಂಭಇವ-ಒಳಹೊರಗೆ ಬಯಲೊಳಕೊಂಡ

ಘಟದಂತೆ, ಅಂತರ್ಬಹಿಃಪ್ರಥಿತಪೂರ್ಣಸುಶೂನ್ಯಭಾವಃ-ಅಂತರ್ಬಹಿಃ-ದಗ್ಧಪಟದಂತಿ ರ್ಪ ದೇಹದೊಳಹೊರಗೆ, ಪ್ರಥಿತ-ಪ್ರಸಿದ್ಧವಾದ, ಪೂರ್ಣಸುಶೂನ್ಯಭಾವಃ-ಪೂರ್ಣಭಾವವೂ ಲೇಸಾದಶೂನ್ಯಭಾವವೂ ಉಳ್ಳಂಥ (ದಿವ್ಯಪ್ರಕಾಶದೊಳ್ಮುಳುಂಗಿದುದೇ ಶೂನ್ಯ ಭಾವವೆಂದರ್ಥ) ತುರೀಯಯುಕ್ತಃ-ತುರ್ಯಾವಸ್ಥೆಯಿಂಕೂಡಿದಾತನು, ಸಚ್ಚಿತ್ರದೀಪ ಇವ-ಸತ್-ಲೇಸಾದ, ಚಿತ್ರದೀಪಇವ-ಚಿತ್ರದಲ್ಲಿ ಬರೆದ ದೀಪದಂತೆ, ಭಾತಿ-ಒಪ್ಪುತ್ತಿರ್ಪ್ಪನು. (ತಾತ್ಪರ್ಯ-ಅವ್ಯಯಂ ಪರಿಪೂರ್ಣತ್ವಾತ್ಸ್ವವಿಭಾವಾತ್ತದೀಶ್ವರಂ। ಶಿವತತ್ವಮಿದಂ ಪ್ರೋಕ್ತಂ ಸರ್ವಾಧ್ವೋಪರಿಸಂಸ್ಥಿತಂ ॥ ಓಂಕಾರಾತ್ಮತಯಾಭಾತಿ ಶಾಂತ್ಯತೀತಃ ಪರಶ್ಶಿವಃ । ಬೀಜಪಂಕಜಮಧ್ಯಸ್ಥಸ್ಸಮಸ್ತಾಧ್ವಮುಖಃಪ್ರಭುಃ" ಎಂಬ ದಿವ್ಯಾಗಮ ಪ್ರಮಾಣದಿಂದೀಪಿಂಡಬ್ರಹ್ಮಾಂಡವನೊಳಕೊಂಡಖಂಡಿತಾನಂದಸ್ವರೂಪದಲ್ಲಿ ಮುಳುಂಗಿದ ಯೋಗೀಶ್ವರಂ ತನ್ನ ವಿಮಲಶರೀರದೊಳ್ ಪ್ರಕಾಶ್ಯಪ್ರಕಾಶಕಭಾವವಿಲ್ಲದ ಚಿತ್ರದೀಪದಂತೆ ನಿಸ್ತರಂಗದಲ್ಲಿರಲದೇ ತುರ್ಯಾವಸ್ಥೆಯೆಂಬುದಭಿಪ್ರಾಯಂ. "ಅಂತಃ ಪೂರ್ಣೋಬಹಿಃಪೂರ್ಣಃ ಪೂರ್ಣಕುಂಭಇವಾಂಭಸಿ । ಅಂತಶ್ಶೂನ್ಯೋಬಹಿಶ್ಶೂನ್ಯ ಶ್ಶೂನ್ಯಕುಂಭಇವಾಂಬರೇ" ಎಂದುದಾಗಿ.) ॥೪೮॥

ಸೂ॥ ಅನಂತರದಲ್ಲಿ ತುರ್ಯಾತೀತಾವಸ್ಥೆಯಂ ಪೇಳ್ದಪಂ:—

ಶ್ಲೋ॥ ಕೈಶ್ಚಿದ್ಬ್ರಹ್ಮೇತಿಕೈಶ್ಚಿದ್ಧರಿರಿತಿ ಶಿವಇತ್ಯೇವಕೈಶ್ಚಿಜ್ಜನಾ
ನಾಭೇದೈಃಪ್ರೋಕ್ತಸ್ಸಶೂನ್ಯಃ ಪ್ರಕೃತಿಪುರುಷಕಾಲಾರ್ಥ
ರೂಪೇಣಕೈಶ್ಚಿತ್ ॥ ಲೋಕೈರನ್ಯೈರ್ವಿಕಲ್ಪೈರ್ಬಹು
ತರವಚನೈರ್ದೇಹಯುಕ್ತೋಪಿ ನಿತ್ಯಂ ಮುಕ್ತಸ್ಸ್ಯಾದ್ಯ
ಸ್ತುರೀಯಾಧಿಕವಿನುತಸಮಾಖ್ಯಾಮವಸ್ಥಾಂಸಮೇತ್ಯ ॥೪೯॥

ಟೀ॥ ಯಃ-ಆವನಾನೊರ್ವಯೋಗೀಶ್ವರನು, ತುರೀಯಾಧಿಕವಿನುತಸಮಾಖ್ಯಾಂ-ತುರ್ಯಾವಸ್ಥೆಯಿಂದುತ್ತರವೆಂದು ಪ್ರಸಿದ್ಧವಾದ ಪೆಸರುಳ್ಳಂಥ, ಅವಸ್ಥಾಂ-ತುರ್ಯಾತೀತಾವಸ್ಥೆಯನು, ಸಮೇತ್ಯ-ಚೆನ್ನಾಗೆಯ್ದಿ, ದೇಹಯುಕ್ತೋಪಿ-ದೇಹದೊಡನೆ ಕೂಡಿದಾತನಾದರೂ, ನಿತ್ಯಂ-ಅನವರತವೂ, ಮುಕ್ತಃ-ನಿರ್ಲೇಪಕನಾಗಿರ್ಪಾತನೋ, ಸಃ-ಆ ಜೀವನ್ಮುಕ್ತನಾದ ಪರಮಯೋಗೀಶ್ವರನು, ಕೈಶ್ಚಿತ್-ಪೌರಾಣಿಕರಾದ ಕೆಲಂಬರಿಂದೆ, ಬ್ರಹ್ಮೇತಿ-ಬ್ರಹ್ಮನೆಂದು, ಕೈಶ್ಚಿತ್-ಪಾಂಚರಾತ್ರರೆನಿಸುವ ಕೆಲಂಬರಿಂದೆ, ಹರಿರಿತಿ-ಪುರುಷೋತ್ತಮನೆಂದು, ಕೈಶ್ಚಿತ್-ಶಿವಾಗಮಜ್ಞರಾದ ಕೆಲಂಬರಿಂದೆ, ಶಿವಇತಿ-ಶಿವನೆಂದು, ನಾನಾಭೇದೈಃ-ನಾನಾಪ್ರಕಾರವಾಗಿರ್ಪಂಥ, ಕೈಶ್ಚಿತ್-ಬೌದ್ಧ ಸಾಂಖ್ಯ ವೇದಾಂತಿ ಕಾಲವಾದಿಗಳಿಂದೆ, ಶೂನ್ಯಪ್ರಕೃತಿಪುರುಷಕಾಲಾರ್ಥರೂಪೇಣ-ಕ್ರಮದಿಂ ಶೂನ್ಯರೂಪದಿಂ ಪ್ರಕೃತಿರೂಪದಿಂ ಪುರುಷರೂಪದಿಂ ಕಾಲರೂಪದಿಂದವೂ,

ಅನ್ಯೈಃ-ಮತ್ತೆ ಕೆಲಂಬರಾದಂಥ ನೈಯಾಯಿಕ ವೈಶೇಷಿಕ ಪಾತಂಜಲ ಪಾಶುಪತ ಮ ಹಾವ್ರತ ಕಾಪಾಲಾದಿವಾದಿಗಳಿಂದೆ, ವಿಕಲ್ಪೈಃ-ವಿಕಲ್ಪರೂಪಗಳಾಗಿರ್ಪಂಥ, ಬಹುತ ರವಚನೈಃ-ಕ್ರಮದಿಂ ಸಕಲಜಗತ್ಕರ್ತನೆಂಬ ಪ್ರಕೃತಿಸಾಕ್ಷಿಕನೆಂಬ ಪ್ರಮಾಹೇಶ್ವರರೂ ಪನೆಂಬ ಜ್ಞಾನಶಕ್ತಿಮಾತ್ರಸ್ವರೂಪನೆಂಬ ಅನಂತಪ್ರಕಾರವಾದ ನುಡಿಗಳಿಂದೆ, ಪ್ರೋ ಕ್ತಃ-ವಿಶೇಷದಿಂ ಹೇಳಲ್ಪಟ್ಟಂಥಾತನು, ಸ್ಯಾತ್-ಆಗುವನು. (ತಾತ್ಪರ್ಯ—" ಉಮಾಸ ಹಾಯಂಪರಮೇಶ್ವರಂ ಪ್ರಭುಂತ್ರಿಲೋಚನಂನೀಲಕಂಠಂ ಪ್ರಶಾಂತಂ ಧ್ಯಾತ್ವಾಮುನಿ ರ್ಗಚ್ಛತಿಭೂತಯೋನಿಂ ಸಮಸ್ತಸಾಕ್ಷಿಂತಮಸಃಪರಸ್ತಾತ್ ಸಬ್ರಹ್ಮಾಸಶಿವಸ್ಸೇಂದ್ರ ಸ್ಸೋಕ್ಷರಃಪರಮಸ್ಸ್ವರಾಟ್ ಸಏವವಿಷ್ಣುಸ್ಸಪ್ರಾಣಃ ಸಕಾಲೋಗ್ನಿಸ್ಸಚಂದ್ರ ಮಾಃ" ಇಲ್ಲಿ ಉಮಾಸಮೇತನಾದ ಪರಮೇಶ್ವರನಾದ ಪ್ರಭುವಾದ ತ್ರಿಲೋಚನನಾದ ನೀಲಕಂಠನಾದ ಮೂಲಕಾರಣನಾದ ಸಕಲಸಾಕ್ಷಿಕನಾದ ಶಿವತತ್ವವನಾ ಕೃಷ್ಣತಾರಾ ಮಂಡಲದಿಂ ಮೇಲೆ ಧ್ಯಾನವಂಮಾಡಿದಯೋಗೀಶ್ವರರು ಮುಕ್ತಾತ್ಮನಪ್ಪನಾತನೇ ಬ್ರಹ್ಮ ಶಿವ ಇಂದ್ರ ವಿಷ್ಣು ಕಾಲ ಅಗ್ನಿ ಚಂದ್ರದೇವತಾಸ್ವರೂಪನಪ್ಪನು ಎಂಬ ಶ್ರುತಿಪ್ರಮಾ ಣದಿಂದೆ ಪರಶಿವಸಾಮರಸ್ಯದಿಂ ತುರ್ಯಾತೀತನೆನಿಸಿದ ಯೋಗೀಶ್ವರನಾ ಸಮಸ್ತವಾದಿಗ ಳಿಂದವರದ ರಿಷ್ಟದೇವತಾಸ್ವರೂಪದಿಂ ಪೂಜ್ಯನಪ್ಪನೆಂಬುದಭಿಪ್ರಾಯಂ.) ॥೩೯॥

ಸೂ॥ ಈ ಪ್ರಕಾರದಿಂ ಪಂಚಮಾವಸ್ಥೆಯ ಸಾಮರ್ಥ್ಯ-ಮಂ ಪೇಳ್ದು ನಾನಾ ಪ್ರಕಾರದಿಂದಾಅವಸ್ಥೆಯನೇ ಸಾಧಿಪುದೆಂದು ಪೇಳ್ದಪಂ:—

ಶ್ಲೋ॥ ತಸ್ಮಾತ್ಸರ್ವಪ್ರಯತ್ನೇನ ಕ್ರಮಾದಭ್ಯಾಸಯೋಗತಃ ।
ತುರೀಯಾತೀತಕಾವಸ್ಥಾಂ ಸಮಾಸಾದ್ಯಸುಖೀಭವ ॥೪೦॥

ಟೀ॥ ತಸ್ಮಾತ್-ಆ ಸಕಲಲೋಕ ಪೂಜ್ಯನಪ್ಪ ಕಾರಣದಿಂದೆ, ಸರ್ವಪ್ರಯತ್ನೇನ-ಪೂರ್ವೋದಿತವಾದ ಬಹುಪ್ರಯತ್ನದಿಂದೆ, ಕ್ರಮಾತ್-ಪ್ರಾಕೃತ ವೈಕೃತ ಕೇವಲ ಕುಂಭಕ ಮುದ್ರಾಮುಸಂಧಾನ ಲಕ್ಷ್ಯಾವಲೋಕನಾದಿ ಸ್ವರೂಪದಿಂ ಕ್ರಮವಾದಂಥ ಅಭ್ಯಾಸಯೋಗತಃ-ನಿರಾಮಯಾಸವಾದ ಧ್ಯಾನಯೋಗರತ್ನದಿಂದೆ, ತುರೀಯಾತೀತಕಾವ ಸ್ಥಾಂ-ತುರ್ಯಾತೀತವೆಂಬವಸ್ಥೆಯನು, ಸಮಾಸಾದ್ಯ-ಚೆನ್ನಾಗಿಪಡೆದು, ಸುಖೀ-ದಿವ್ಯಾ ನಂದಪುಳ್ಳಾತನು, ಭವ-ಆಗು. (ತಾತ್ಪರ್ಯ—" ಮಧ್ಯೇವೈರಾಗ್ಯಂ ಕೇಸರೇ ಜಾಗ್ರದ ವಸ್ಥಾ ಕರ್ಣಿಕಾಯಾಂ ಸ್ವಪ್ನಂ ಲಿಂಗೇಸುಷುಪ್ತಿಃ ಪದ್ಮತ್ಯಾಗೇತುರೀಯಂ ಯದಾ ಹಂಸೇನಾದೇವಿಲೀನೋಭವತಿ ತತ್ತುರೀಯಾತೀತಂ ಅಥೊನಾದ ಮಾಧಾರಾದ್ಬ್ರಹ್ಮ ರಂಧ್ರಪರ್ಯಂತಂ ಶುದ್ಧಸ್ಫಟಿಕಸಂಕಾಶಸ್ಸವೈಬ್ರಹ್ಮಪರಮಾತ್ಮೇತ್ಯುಚ್ಯತೇ" ಎಂಬ ಶ್ರುತಿಪ್ರಮಾಣದಿಂ ತುರೀಯಾತೀತನೇ ಪರಮಾತ್ಮರೂಪನೆಂಬುದಭಿಪ್ರಾಯಂ.) ॥೪೦॥

ಸೂ॥ ಈ ಪಂಚಮಾವಸ್ಥೆಯಂ ಪಡೆದಾತನು ಪ್ರಾರಬ್ಧವಾಸನಾಬಲದಿಂ ಪೂ ರ್ವಾವಸ್ಥೆಗಳ ನೆಯ್ದುಲಾಯಾಅವಸ್ಥೆಗಳಲ್ಲಿ ಮುಳುಂಗಲಾಗದೆಂದು ಪೇಳ್ದಪಂ:—

ಶ್ಲೋ॥ ಸರ್ವಾವಸ್ಥಾಂಗತೋವಾಪಿ ಸರ್ವಾವಸ್ಥಾಂನಸಂಸ್ಮರ ।
ತ್ಯಜಸಂಗ ಮಶೇಷಂಚ ಮನೋಂತರ್ಬಹಿರನ್ವಿತಂ ॥೪೧॥

ಟೀ॥ ಸರ್ವಾವಸ್ಥಾಂ-ಜಾಗ್ರತ್ಸ್ವಪ್ನವೊದಲಾದ ಸಕಲಾವಸ್ಥೆಯನು, ಗತೋಪಿ ವಾ-ಎಯ್ದಲ್ಪಟ್ಟಾತನಾದರೂ, ಸರ್ವಾವಸ್ಥಾಂ-ಆ ಪೂರ್ವಾವಸ್ಥೆಯನು, ನಸಂಸ್ಮರ-ನೆನೆಯದಿರು, ಮನೋಂತರ್ಬಹಿರನ್ವಿತಂ ಮನಃ-ಮನಸ್ಸಿನ, ಅಂತಃ-ಒಳಗೆಸ್ವಪ್ನದಲ್ಲಿ ಬಹಿಃ-ಹೊರಗೆ ಜಾಗ್ರದಲ್ಲಿ, ಅನ್ವಿತಂ-ಕೂಡಿದಂಥ, ಅಶೇಷಂ-ಸಮಸ್ತವಾದಂಥ, ಸಂಗಂ-ಶುದ್ಧಾಶುದ್ಧವಿಷಯಸಂಗವನು, ತ್ಯಜ-ಬಿಡು. ॥೪೧॥

ಸೂ॥ ಅನಂತರದಲ್ಲಿ ಅಮನಸ್ಕಸಂಜ್ಞೆಯುಳ್ಳ ಆರನೆಯದಾದ ಸಹಜಾವಸ್ಥೆಯ ನೆಯ್ದಲ್ಪೂರ್ವಾಭ್ಯಾಸಕರ್ಮಂಗಳಂ ಬಿಡಬೇಕೆಂದು ಪೇಳ್ದಪಂ:—

ಶ್ಲೋ॥ ನಿವರ್ತಯಾನ್ಯಕರ್ಮಾಣಿ ಶಿವಯೋಗಂಪ್ರವರ್ತಯ ।
ಸಹಜಾಮಮನಸ್ಕಾಂತಾಂ ಮುದ್ರಾಂಸಂವಿನ್ಮಯೀಂಭಜ ॥

ಟೀ॥ ಅನ್ಯಕರ್ಮಾಣಿ-ತಾರಕಾಭ್ಯಾಸದಿಂ ದನ್ಯವಾದ ಕರ್ಮಂಗಳನು, ನಿವರ್ತಯ-ಬಿಡಿಸು. ಶಿವಯೋಗಂ-ಪೂರ್ವೋದಿತವಾದ ಶಿವಯೋಗವನೇ,ಪ್ರವರ್ತಯ-ನಡಸು. ಸಹಜಾಂ-ಸಹಜಾವಸ್ಥೆಯೆನಿಸುವಂಥ, ಸಂವಿನ್ಮಯೀಂ-ಕಾರಣವಿಲಕ್ಷಣವಾದ ಜ್ಞಾನಮಾತ್ರವೇ ಸ್ವರೂಪವಾದುದಾಥ, ತಾಂ-ಆ ಪೂರ್ವೋದಿತವಾದಂಥ, ಅಮನಸ್ಕಾಂ-ಅಮನಸ್ಕಸಂಜ್ಞೆಯುಳ್ಳಂಥ, ಮುದ್ರಾಂ-ಮುದ್ರೆಯನು, ಭಜ-ಭಜಿಸು. (ತಾತ್ಪರ್ಯ—"ದುರ್ಲಭೋವಿಷಯತ್ಯಾಗೋ ದುರ್ಲಭಂತತ್ವದರ್ಶನಂ । ದುರ್ಲಭಾಸಹಜಾವಸ್ಥಾ ಸದ್ಗುರೋಃಕರುಣಾಂವಿನಾ" ಎಂದುದಾಗಿ, ವಿಷಯವ್ಯಾಪಾರಂಗಳಂ ಬಿಟ್ಟ ತತ್ವಜ್ಞಾನಿಗಲ್ಲದೆ ಸಹಜಾವಸ್ಥೆಯಾಗದೆಂಬುದಭಿಪ್ರಾಯಂ.) ॥೪೨॥

ಸೂ॥ ಅನಂತರವೊಳಾ ಅಮನಸ್ಕಮುದ್ರಾಸ್ವರೂಪಮಂ ಪುನರಪಿ ಪ್ರಕಾರಾಂತರದಿಂ ಪೇಳ್ದಪಂ:—

ಶ್ಲೋ॥ ಆತ್ಮಾನಂಗಗನಂಕೃತ್ವಾ ಬಿಂದುಂಕೃತ್ವಾತಥೈವಚ ।
ದ್ವಯಂಸಮರಸಂಕುರ್ಯಾ ದಮನಸ್ಕಕಲಾಹಿಸಾ ॥೪೩॥

ಟೀ॥ ಆತ್ಮಾನಂ-ಧ್ಯಾತೃರೂಪನಾದ ತನ್ನನು, ಗಗನಂ-ನಿರಾಲಂಬವಾಗಿ, ಕೃತ್ವಾ-ಮಾಡಿ, ಬಿಂದುಂ-ಧ್ಯೇಯಾಕಾರವಾದ ಬಿಂದುವನು, ತಥೈವಚ-ಹಾಗೆಯೇ ನಿರಾಲಂಬವನ್ನಾಗಿ, ಕೃತ್ವಾ-ಮಾಡಿ, ದ್ವಯಂ-ಧ್ಯಾತೃಧ್ಯೇಯರೂಪವಾದೆರಡನು, ಸಮರಸಂ-ಸಾಮರಸ್ಯವನಾಗಿ, ಕುರ್ಯಾತ್-ಮಾಡುವುದು. ಸಾ-ಅದು, ಹಿ-ಪ್ರಸಿದ್ಧವಾಗಿ, ಅಮನಸ್ಕಾ-ಅಮನಸ್ಕಸಂಜ್ಞೆಯುಳ್ಳಂಥ, ಕಲಾ ಕಲೆಯು. (ತಾತ್ಪರ್ಯ—" ವ್ಯೋಮ

ಲೀನಮನಾಸ್ಸಮ್ಯಕ್ ವ್ಯೋಮಸ್ಥೋಪ್ಯೋಮತನ್ಮಯಃ। ಪರಂಮೋಕ್ಷಮವಾಪ್ನೋತಿ ಯತ್ರಶಬ್ದೋಲಯಂಗತಃ" ಎಂದುದಾಗಿ, ಧ್ಯಾತೃಧ್ಯೇಯವೆಂಬುಭಯೋಪಾಧಿಯ ತೊಲಗಿಕೆಯಿಂ ನಿರಾಲಂಬತ್ವವೆಂತೆಂದೊಡೆ-ಧ್ಯಾತೃಲೀನವೈಖರಿಗೆ ಮಂತ್ರಸ್ವರೂಪವಾಗಿ ಆತನ ಮಧ್ಯಮೆಗೆ ಅಜಪಾರೂಪವಾಗಿ, ಆತನ ಪಶ್ಯಂತಿಗೆ ಬಹುವಿನಲಕ್ಷ್ಯರೂಪವಾಗಿ, ಆತನ ಸೂಕ್ಷ್ಮೆಗೆ ಬಹುವಿಧನಾದರೂಪವಾಗಿ, ಆತನ ಆನಂದಕ್ಕೆ ನಾದಾಂತವೆನಿಸಿ, ಆತನ ಅಖಂಡಿತಜ್ಞಾನಕ್ಕೆ ಪರಪ್ರಕಾಶವಾದ ದಿವ್ಯಭಕ್ತಿಯೆನಿಸಿ, ಆತನ ಆತ್ಮಾರಾಮಕ್ಕೆ ಸ್ವಪ್ರಕಾಶವೆನಿಸಿ, ವಿಕ್ಷಿಪ್ತಗತಾಗತಸಂಶ್ಲಿಷ್ಟಸ್ವಲೀನವೆಂಬ ಪಂಚಮನದ ಅವಸ್ಥಾಭೇದದಿಂ ಸಕಲಕ್ಕೆ ನಿಷ್ಕಲವಾಗಿ, ನಿಷ್ಕಲಕ್ಕೆ ನಿಷ್ಕಲವಾಗಿ, ನಿರಾಲಂಬಕ್ಕೆ ನಿರಾಲಂಬವಾಗಿ, ಮನವಳಿದು ನಿಂದ ಸತುರಸಭಾವವೇ ಅಮನಸ್ಕಕಳೆಯೆನಿಪುದಾಗಿ, "ಸ್ವಯಮಮನಸ್ಕಮಶ್ರೋತ್ರ ಮಪಾಣಿಪಾದಂಜ್ಯೋತಿರ್ವಿಹಿತಂ" ಶ್ರೋತ್ರಪಾಣಿಪಾದಾದಿ ಕಲ್ಪನೆಯಿಲ್ಲದೆ ನಿರಾಲಂಬವಾದ ಸ್ವಯಂಜ್ಯೋತಿಯೇ ಅಮನಸ್ಕವೆಂದರಿಯಲ್ಪಟ್ಟಿತು, ಎಂಬ ಶೃತಿಪ್ರಮಾಣದಿಂದೆ ಸಹಜಾವಸ್ಥೆಯೆಂಬುದಭಿಪ್ರಾಯಂ.॥

ಸೂ॥ ಈ ಅಮನಸ್ಕಕಲಾಪ್ರಾಪ್ತಿಯನೆ ಶಿಷ್ಯನು ಮರಳಿ ಬೆಸಗೊಳ್ಳುತಿರ್ದಪಂ:-

ಶ್ಲೋ॥ ಸ್ವಪ್ನಜಾಗರಣಾತೀತಂ ಮೃತಿಜೀವನವರ್ಜಿತಂ । ಸ್ವಾಮಿಂಛಿವಾಮನಸ್ಕಾಖ್ಯಂ ಗಮಿಷ್ಯಾಮಃಕಥಂವಯಂ ॥೪೪॥

ಟೀ॥ ಶಿವ-ನಿರ್ಮಲರೂಪನಾಗಿರ್ಪಂಥ, ಸ್ವಾಮಿನ್-ಎಲೆಶ್ರೀಗುರುವೆ, ಸ್ವಪ್ನಜಾಗರಣಾತೀತಂ-ಮನೋವ್ಯಾಪಾರವಾದ ಸ್ವಪ್ನವನೂ ಬಾಹ್ಯೇಂದ್ರಿಯವ್ಯಾಪಾರವಾದ ಜಾಗರಣವನೂ ಮೀರಿದಂಥ, ಮೃತಿಜೀವನವರ್ಜಿತಂ-ಅಜ್ಞಾನವೆಂಬ ಮರಣದಿಂದವೂ ಜ್ಞಾನವೆಂಬ ಬಾಳುವೆಯಿಂದವೂ ತೊಲಗಿದಂಥ, ಅಮನಸ್ಕಾಖ್ಯಂ-ಅಮನಸ್ಕವೆಂಬ ಪೆಸರುಳ್ಳ ಅವಸ್ಥಾಸ್ವರೂಪವನು, ವಯಂ-ನಾವು, ಕಥಂ-ಹೇಂಗೆ, ಗಮಿಷ್ಯಾಮಃ-ಎಯ್ದುವೆವು ? ॥೪೪॥

ಸೂ॥ ಈ ಕೇಳ್ವಶಿಷ್ಯಂಗಾಚಾರ್ಯನುಪದೇಶಿಸುತಿರ್ದಪಂ:—

ಶ್ಲೋ॥ ಸಚರಾಚರಮಖಿಲಂಯತ್ಕಿಂಚಿದಿದಂತದ್ಭವೇನ್ಮನೋದೃಶ್ಯಂ। ಮನಸೋಽಪ್ಯುನ್ಮನತಾಂಯೋಯಾತಿಸತತ್ವಂಕಥಂನಭವೇತ್॥

ಟೀ॥ ಸಚರಾಚರಂ-ಚೇತನಾಚೇತನವೊಡನೆ ಕೂಡಿದಂಥ, ಅಖಿಲಂ-ಸಮಸ್ತವಾಗಿರ್ಪಂಥ, ಯತ್ಕಿಂಚಿತ್-ಆವುದಾನೊಂದುಂಟೋ, ತದಿದಂ-ಆ ಈಸಕಲಪ್ರಪಂಚವು, ಮನೋದೃಶ್ಯಂ-ಮನದಿಂದಕಾಣಲು ಯೋಗ್ಯವಾಗಿರ್ಪಂತಹುದು, ಭವೇತ್-ಆಗುವುದೋ, ಯಃ-ಆವಾತನು, ಮನಸೋಽಪಿ-ಮನಸ್ಸಿನದೆಸೆಯಿಂದವೂ, ಉನ್ಮನತಾಂ-ತೊಲಗಿರ್ಪಂಥ ಗತಿಯನು, ಯಾತಿ-ಎಯ್ದುತ್ತಿಹನೋ, ಸಃ ಆತನು, ತತ್ವಂ-

ಆ ಅಮನಸ್ಕಸ್ವರೂಪವು, ಕಥಂ-ಹೇಂಗೆ, ನಭವೇತ್-ಆಗನು ? (ತಾತ್ಪರ್ಯ-ಅಳಿವು ದಾಗಿ ಆ ಮನವುಂ ನಿರಾಲಂಬದೊಳಿರಿಸ ಲಾತಂಗೆ ತಾನೇ ಉನ್ಮನೀಸಿದ್ಧಿಯಪ್ಪುದೆಂ ಬುದಭಿಪ್ರಾಯ. "ಯಥಾನಿರಿಂಧನೋವಹ್ನಿಸ್ಸ್ವಯಮೇವಪ್ರಶಾಮ್ಯತಿ । ಗ್ರಾಹ್ಯಾ ಭಾವಾನ್ಮನಸ್ತದ್ವ ತ್ಸ್ವಯಮೇವವಿಲೀಯತೆ" ಎಂದುದಾಗಿ.) ॥೪೫॥

ಸೂ॥ ಪ್ರಕಾರಾಂತರದಿಂ ದುನ್ಮನೀಸ್ವರೂಪಸಿದ್ಧಿಯುಂ ಪೇಳ್ದಪಂ:—

ಶ್ಲೋ॥ ಅಥವಾಯತ್ರಮನಸ್ಸಂಯಾತಿಹಿತತ್ರೈವತನ್ಮನಸಾಸ್ಥಾಪ್ಯಂ ।
ತತ್ಕಾರಣಾಲ್ಲಯಸ್ಸ್ಯಾದ್ವೃದ್ಧಿಸ್ಸ್ಯಾದ್ವಾರ್ಯಮಾಣಂತು ॥೪೬॥

ಟೀ॥ ಅಥವಾ-ಮಂದಾಧಿಕಾರಿಗೆ ನಿರಾಲಂಬಾನುಸಂಧಾನದಿಂ ಮನೋಲಯ ವಾಗದ ಪಕ್ಷದಲ್ಲಿ, ಯತ್ರ-ಪೂರ್ವೋದಿತವಾದ ಲಕ್ಷ್ಯಂಗಳೊಳಗೆ ಆವಲಕ್ಷ್ಯದಲ್ಲಿ, ಮನಃ-ಮನಸ್ಸು, ಸಂಯಾತಿ-ಚೆನ್ನಾಗೆಯ್ದುತ್ತಿದ್ದೀತೋ, ತತ್ರೈವ-ಆ ಲಕ್ಷ್ಯದಲ್ಲಿ ಯೇ, ಹಿ-ಪ್ರಸಿದ್ಧವಾಗಿ, ಸ್ಥಾಪ್ಯಂ-ಇರಿಸಲುಯೋಗ್ಯವು, ತತ್ಕಾರಣಾತ್-ಆ ಬ್ರೈಂದ ವಭೋಗವು ತೀರ್ದು ಆ ಲಕ್ಷ್ಯವು ಕಾರಣರೂಪವಪ್ಪುದರಿಂದೆ, ಲಯಃ-ಆ ಮನದಲ ಯವು, ಸ್ಯಾತ್-ಅಹುದು, ವಾರ್ಯಮಾಣಂತು-ತಡೆಯಲ್ಪಟ್ಟಂತಹುದಾದರೆ, ವೃ ದ್ಧಿಃ-ಆ ಮನೋವ್ಯಾಪಾರದ ಹೆಚ್ಚಿಗೆಯು, ಸ್ಯಾತ್- ಅಹುದು. (ತಾತ್ಪರ್ಯ-ಬರಬರ ಲತಿಸೂಕ್ಷ್ಮರೂಪದಿಂ ಕೆಡುತಿರ್ಪ ಜಲಪ್ರವಾಹವಂ ತಡೆಯಲದೇ ಜಲರಾಶಿಯಪ್ಪಂತೆ ಉತ್ತರೋತ್ತರಲಕ್ಷ್ಯಾನುಸಂಧಾನದಿಂ ಕೆಡುತ್ತೆ ಬರ್ಪ ಮನವುಂ ತಡೆಯ ಲಾಮನಂ ಪೆ ರ್ಚುವುದಾಗಿ ಸವಿಕಲ್ಪಕ ಬ್ರೈಂದವಾನಂದಭೋಗವಾಸನೆಯುಳ್ಳಾತನು ಎಲ್ಲಿ ಮನವೆ ಯ್ದಿತಲ್ಲಿಯೇ ಮನೋಲಯಮಂ ಕಾಣಬೇಕೆಂಬುದಭಿಪ್ರಾಯಂ.) ॥೪೬॥

ಸೂ॥ ಊರ್ಧ್ವಾಧೋಗತಿಹೇತುಶ್ಚ ನಾದಶ್ಚಿತ್ತಸ್ಯಕೀರ್ತಿತಃ । ತಸ್ಮಾನ್ನಾದೇಮ ನಸ್ಸಮ್ಯಕ್ ಲೀನಂಕುರ್ಯಾದ್ವಿಚಕ್ಷಣಃ ॥ ಸೋನ್ಮನೀಕಥಿತಾಶಿವಸ್ಥಾ ಶಿವೇನಶಿವಶಾಸ ನೇ" ಎಂಬಾಗಮಪ್ರಮಾಣದಿಂ ನಾದದೊಳ್ಮುಳುಂಗಿ ನಿರಾಲಂಬಯೋಗದಿಂ ದುನ್ಮ ನ್ಯವಸ್ಥೆಯ ನೆಯ್ದಿದ ಮನ ವಾಬ್ರೈಂದವಭೋಗವಾಸನಾಬಲದಿಂದಂಕುರಿಸಿ ಅಧೋ ಮುಖವಾಗಿ ಪ್ರವರ್ತಿಸಿದೊಡಂ ಮರಳಿ ನಿರಾಲಂಬಸ್ಥಾನದಲ್ಲಿಯೇ ಲಯವನೆಯ್ದುವು ದೆಂಬುದಂ ದೃಷ್ಟಾಂತಪೂರ್ವಕವಾಗಿ ಪೇಳ್ದಪಂ:—

ಶ್ಲೋ॥ ಯಥೇಚ್ಛಯಾಮನೋಗಚ್ಛತ್ಸ್ವಯಮೇವನಿವರ್ತತೇ।
ನಿರಂಕುಶೇನ ವಿಧಿನಾ ಕರೀವ ಸಮುದೋತ್ಕಟಃ ॥೪೭॥

ಟೀ॥ ನಿರಂಕುಶೇನ-ಅಂಕುಶವಿಲ್ಲದಿರ್ಪಂಥ, ವಿಧಿನಾ-ವ್ಯಾಪಾರದಿಂದೆ, ಸಮು ದೋತ್ಕಟಃ-ಮದದಿಂದಕೂಡಿ ಉದ್ರೇಕಗೊಂಡಂಥ, ಕರೀವ-ಆನೆಯು ಹೇಂಗೋ ಹಾಂಗೆ, ಯಥೇಚ್ಛಯಾ-ಭೋಗವಾಸನೆಯ ಅನುಸಾರದಿಂದೆ, ಗಚ್ಛತ್-ವಿಷಯೋ

ನ್ಮುಖವಾಗಿ ಎಯ್ದುತ್ತಿರ್ದಂಥ, ಮನಃ-ಮನವು, ಸ್ವಯಮೇವ-ತಾನೇ, ನಿವರ್ತ್ತತೇ-ನಿರಾಲಂಬವೆಂಬ ಮಹಾಸ್ಥಾನಕ್ಕೆ ತಿರುಗುತ್ತಿಹುದು. (ತಾತ್ಪರ್ಯ—"ಯಥಾನಿರಂಕುಶೋಹಸ್ತೀಕಾಮಾನ್ಪ್ರಾಪ್ಯನಿವರ್ತ್ತತೇ । ಅವಾರಿತಂಮನಸ್ತದ್ವತ್ ಸ್ವಯಮೇವನಿವರ್ತ್ತತೇ" ಎಂದುದಾಗಿ, ಲೋಕವ್ಯವಹಾರದಲ್ಲಿ ಕುಕುಂಬೆಯನೇರಿ ಸಮುದ್ರದ ಮಧ್ಯವ ಸೆಯ್ದಿದ ವಾಯಸನಂತೆ ಮನವಂಕುರಿಸಿ ಎಲ್ಲಿ ಚಲಿಸಿದರೂ ಈ ನಿರಾಲಂಬಸ್ಥಾನದಲ್ಲಿಯೇ ಬಂದಿಳಿವುದಾಗಿ, ಅದೇ ಶಿವಜೀವರ ಸಾಮರಸ್ಯವೆಂಬುದಭಿಪ್ರಾಯಂ.) ॥೪೭॥

ಸೂ॥ ಯೋಗಸಾಧನವಾದ ಅವಸ್ಥೆಗಳೊಳಗುನ್ಮನ್ಯವಸ್ಥೆಯೇ ವಿಶೇಷವೆಂದು ಪೇಳ್ದಪಂ:—

ಶ್ಲೋ॥ ನಾದವಿವಲಯಶ್ರೇಷ್ಠೋಮುದ್ರಾಣಾಂಖೇಚರೀಪರಾ ।
ದೇವಶ್ರೇಷ್ಠೋನಿರಾಲಂಬೋಹ್ಯವಸ್ಥಾಸುಮನೋನ್ಮನೀ ॥

ಟೀ॥ ಯೋಗೀಶ್ವರರ್ಪೇಳ್ದ ಬಹುವಿಧವಾದ ಲಯಯೋಗದಲ್ಲಿ, ನಾದೇ-ನಾದಬ್ರಹ್ಮದಲ್ಲಿಯು, ಲಯಃಶಿವ-ಮನೋಲಯವೇ, ಶ್ರೇಷ್ಠಃ-ವಿಶಿಷ್ಟವು, ಮುದ್ರಾಣಾಂ-ನಾನಾಪ್ರಕಾರವಾದ ಮುದ್ರೆಗಳೊಳಗೆ, ಖೇಚರೀ-ಖೇಚರೀಮುದ್ರೆಯೇ, ಪರಾ-ಮಿಗಿಲಾಗಿರ್ಪಂತಹುದು. ನಿರಾಲಂಬಃ-ನಿರುಪಾಧಿಕವಸ್ತುವೇ, ದೇವಶ್ರೇಷ್ಠಃ-ಧ್ಯೇಯವಾದ ದೇವತಾಮೂರ್ತಿಗಳೊಳಗೆ ವಿಶಿಷ್ಟವು, ಅವಸ್ಥಾಸು-ಅವಸ್ಥೆಗಳೊಳಗೆ, ಮನೋನ್ಮನೀ-ಮನೋನ್ಮನಿಯೆಂಬವಸ್ಥೆಯೇ ವಿಶಿಷ್ಟವು.(ತಾತ್ಪರ್ಯ-"ಅಮನಸ್ಕಂನಿರಾಲಂಬಂತತ್ವಂನಯತಿಯಃಸದಾ । ಮನೋನ್ಮನ್ಯಸ್ಯದೇವಸ್ಯ ಪ್ರೋಕ್ತಾಶಕ್ತಿರ್ಮನೋನ್ಮನೀ" ಎಂದುದಾಗಿ,ಪರತತ್ವಪ್ರಾಪ್ತಿಗೆ ನಿಮಿತ್ತವಾದ ಕಾರಣದಿಂ ದೀಉನ್ಮನ್ಯವಸ್ಥೆಯನೇ ಅಭ್ಯಾಸಂಮಾಳ್ಪುದೆಂಬು ದಭಿಪ್ರಾಯಂ.) ॥೪೮॥

ಸೂ॥ ಈ ಮನೋನ್ಮನಿಯೆಂಬವಸ್ಥೆಯಂ ಪಡೆವ ಜೀವನ್ಮುಕ್ತನಾದ ಯೋಗೀಶ್ವರನ ವರ್ತ್ತನಮಂ ಪೇಳ್ದಪಂ:—

ಶ್ಲೋ॥ ರಾಜಯೋಗಸ್ಯಮುದ್ರಾಂತಾಮೇತ್ಯಯೋಗೀಮನೋನ್ಮ
ನೀಂ।ವಿಚರತ್ಯಖಿಲಾನ್‌ಲೋಕಾನ್‌ಬಾಲೋನ್ಮತ್ತಪಿಶಾಚವತ್

ಟೀ॥ ಯೋಗೀ-ರಾಜಯೋಗೀಶ್ವರನು, ರಾಜಯೋಗಸ್ಯ-ಅಮನಸ್ಕವೆನಿಸುವ ರಾಜಯೋಗದ, ಮುದ್ರಾಂ-ಮುದ್ರೆಯಾದಂಥ, ಮನೋನ್ಮನೀಂ-ಮನೋನ್ಮನಿಯೆಂಬ ಸಹಜಾವಸ್ಥೆಯನು, ಏತ್ಯ-ಪಡೆದು, ಅಖಿಲಾನ್ ಸಮಸ್ತವಾಗಿರ್ಪಂಥ, ಲೋಕಾನ್ ಲೋಕಂಗಳನು, ಬಾಲೋನ್ಮತ್ತಪಿಶಾಚವತ್-ವಿಕಲ್ಪರಹಿತವಾದ ಜ್ಞಾನದಿಂ ಬಾಲಕನಂತೆ ವಿಧಿನಿಷೇಧವ್ಯಾಪಾರಂಗಳಿಲ್ಲದಿರ್ಪುದರಿಂದುನ್ಮತ್ತನಂತೆ ಲೋಕರಂಜಿತವಾದ

ವೇಷವಿಲ್ಲದಿರ್ಪುದರಿಂ ಪಿಶಾಚನಂತೆ, ವಿಚರತಿ-ಚರಿಸುತ್ತಿಹನು. (ತಾತ್ಪರ್ಯ—"ನಾದಮಧ್ಯಗತಾಶಕ್ತಿ ರುನ್ಮನೀತಿಪ್ರಕೀರ್ತಿತಾ । ಸ್ಥೈವಾವಸ್ಥಾನಕಿಂಯಸ್ಮಾ ದಶೋರ್ನಿರ್ವೃತ್ತಿದಾಯಿನೀ॥ ಉನ್ಮನ್ಯವಸ್ಥಿತತ್ವ್ರೋಕ್ತಾ ಮೋಚಿಕಾಪರಮೇಶ್ವರೀ" ಎಂಬಾಗಮಪ್ರಮಾಣದಿಂ ನಾದಮಧ್ಯಗತವಾದ ಅನುಗ್ರಹರೂಪಿಣಿಯಾದ ಮೋಚಿಕೆಯೆಂಬ ಶಿವಶಕ್ತಿಯೇ ಮನೋನ್ಮನಿಯೆನಿಸಿಕೊಂಬುದಾಗಿ, ಆ ನಾದದೊಳ್ಮುಳುಂಗಲಾ ಶಿವಶಕ್ತಿಯೊಳಾತ್ಮ ಚೈತನ್ಯವಾಕಾಶಪ್ರಕಾಶಯೋಗದಂತೆ ಬೆರಸಲಾತನೇ ಜೀವನ್ಮುಕ್ತನೆನಿಸಿ, ಪ್ರಾರಬ್ಧವಾಸನೆಯ ನಾಶಪರ್ಯಂತವಾಗಿ ಚರಿಸುತಿರ್ಪನೆಂಬುದಭಿಪ್ರಾಯಂ. "ವಿಕಲ್ಪರಹಿತಂ ಜ್ಞಾನಮುದೃಷ್ಟರಹಿತಾಕ್ರಿಯಾ । ಅಲೋಕರಂಜಕಂರೂಪಂ ಜೀವನ್ಮುಕ್ತಸ್ಯಲಕ್ಷಣಂ" ಎಂದುದಾಗಿ. ॥೪೯॥

ಸೂ॥ ಅಮನಸ್ಕಯೋಗವೇ ಜೀವನ್ಮುಕ್ತಿಗೆ ಮುಖ್ಯಕಾರಣವೆಂಬುದು ಸಕಲಶಾಸ್ತ್ರಸಿದ್ಧವೆಂದು ಪೇಳ್ದಪಂ:—

ಶ್ಲೋ॥ ಜೀವನ್ಮುಕ್ತಿಪ್ರಕಾರಸ್ಯಯೋಗಏವನಚಾನ್ಯಥಾ ।
ಸಏವಸಿದ್ಧಿದಸ್ಸಮ್ಯಕ್‌ಸರ್ವದರ್ಶನಸಂಮತಃ ॥೫೦॥

ಟೀ॥ ಜೀವನ್ಮುಕ್ತಿಪ್ರಕಾರಸ್ಯ-ಶರೀರವಿಡಿದು ಮುಕ್ತನೆನಿಸುವಬಗೆಗೆ, ಯೋಗಏವ-ಅಮನಸ್ಕರಾಜಯೋಗವೇ, (ದಿವ್ಯಸಾಧನವೆಂಬುದು ವಾಕ್ಯಶೇಷವು) ಅನ್ಯಥಾಚ-ಈ ಅಮನಸ್ಕವಲ್ಲದೆ ಅನ್ಯಪ್ರಕಾರದಿಂದ, ನ-ಮೋಕ್ಷವಿಲ್ಲ. ಅದುಕಾರಣದಿಂ, ಸಏವ-ಆ ಅಮನಸ್ಕಯೋಗವೇ, ಸಿದ್ಧಿದಃ-ಮೋಕ್ಷಸಿದ್ಧಿಯಂ ಕೊಡುವುದೆಂದು, ಸಮ್ಯಕ್-ಚೆನ್ನಾಗಿ, ಸರ್ವದರ್ಶನಸಂಮತಃ-ಸಕಲಸಮಯಕ್ಕಂಗೀಕಾರವು.(ತಾತ್ಪರ್ಯ—"ಓಂಕಾರಸ್ಯವಿಧಿರ್ವಿಚಿತ್ರಕರಣೈಃ ಪ್ರಾಣಸ್ಯ ವಾಯೋರ್ಜಯಸ್ತೇಜಶ್ಚಿಂತನಮಾತ್ಮದಿವ್ಯಕಮಲೇ ಶೂನ್ಯಾಂಬರಾಲಂಬನೈಃ । ತ್ಯಕ್ತ್ವಾಸರ್ವಮಿದಂಕಳೇವರಗತಂಚಿತ್ರಂಮನೋವಿಭ್ರಮಂ ದೇಹಾತೀತಮಚಿಂತ್ಯಮೇಕಮಮನಸ್ಕತ್ವಾ ಪರಂ ಸೇವ್ಯತಾಂ" ಎಂಬಾಗಮಪ್ರಮಾಣದಿಂದಮನಸ್ಕವೇ ಕೈವಲ್ಯಸಾಧನವೆಂಬುದಭಿಪ್ರಾಯಂ.) ॥೫೦॥

ಸೂ॥ ಆಚಾರ್ಯನೀಪ್ರಕಾರಂಗಳಿಂ ಪೂರ್ವೋದಿತವಾದ ಮಂತ್ರ ಲಯ ಹಠ ರಾಜವೆಂಬ ಚತುರ್ವಿಧಯೋಗಂಗಳಿಗೆ ಸಕಲಯೋಗಶಾಸ್ತ್ರಂಗಳೊಳ್ ಪ್ರಸಿದ್ಧವಾದ ಆರಂಭಭೂಮಿಕೆ ಘಟಭೂಮಿಕೆ ಪ್ರಚಯಭೂಮಿಕೆ ನಿಷ್ಪತ್ತಿಭೂಮಿಕೆ ಎಂಬ ನಾಲ್ಕು ಭೂಮಿಕೆಗಳಲ್ಲಿ ಕ್ರಮದಿಂದೇಕತ್ವಮಂ ಸೂಚಿಸುತಿರ್ದಪಂ:—

ಶ್ಲೋ॥ ಮಂತ್ರಲಯಾವಾರಂಭಕಘಟಸಂಜ್ಞೌಹಠಃಪ್ರಚಯಸಂಸ್ಸ್ಯಾತ್। ಸನ್ನಿಷ್ಪತ್ತಿರಿತಿಸ್ಮೃತಏಷಮಹಾರಾಜಯೋಗಸ್ತು॥೫೧॥

ಟೀ॥ ಮಂತ್ರಲಯಾ-ಪೂರ್ವೋದಿತವಾದ ಮಂತ್ರಲಯಯೋಗಂಗಳು, ಆರಂಭ ಕಘಟಸಂಜ್ಞಾ-ಕ್ರಮದಿಂದಾರಂಭಭೂಮಿಕೆ ಘಟಭೂಮಿಕೆ ಎಂಬ ಪೆಸರುಳ್ಳುವಾಗುತ್ತಿಹವು. ಹಠಃ-ಹಠಯೋಗವೇ,ಪ್ರಚಯಃ-(ಪ್ರಚಯಃ) ಪ್ರಚಯವೆಂಬಭೂಮಿಕೆಯು, ಸ್ಯಾತ್-ಅಹುದು.ಏಷಃ-ಈ ಮುಕ್ತಿಸಾಧನವೆಂದು ಪೇಳಲ್ಪಟ್ಟಂಥ,ಮಹಾರಾಜಯೋಗಸ್ತು-ಅತಿವಿಶಿಷ್ಟವಾದ ರಾಜಯೋಗವಾದರೆ, ಸನ್ನಿಷ್ಪತ್ತಿರಿತಿ-ಲೇಸಾದನಿಷ್ಪತ್ತಿಭೂಮಿಕೆಯೆಂದು, ಸ್ಮೃತಃ-ನೆನೆಯಲ್ಪಟ್ಟಿತು. (ತಾತ್ಪರ್ಯ—"ಆಭ್ಯೋನಪರವೋಬಂಧ ಆಭ್ಯೋಮುಕ್ತಿಶ್ಚ ನಾಪರಃ" ಎಂಬ ಶಿವಾಗಮಪ್ರಮಾಣದಿಂ ಪರೆ ಪಶ್ಯಂತಿ ಮಧ್ಯಮೆ ವೈಖರಿಯೆಂಬ ಚತುರ್ವಿಧಶಬ್ದಂಗಳೇ ಅಧೋಮುಖಂಗಳಾಗಲವೇ ಆತ್ಮಂಗೆ ಪರಮ ಬಂಧಂಗಳು. ಊರ್ಧ್ವಮುಖಂಗಳಾಗಲವೇ ಮುಕ್ತಿಸಾಧನಂಗಳಾದಕಾರಣ,ಯೋಗೀಶ್ವರನು ಬಾಹ್ಯವ್ಯಾಪಾರಗಳನುಳಿದು ಇಷ್ಟಾಸನದಲ್ಲಿಕುಳಿತು ಮೊದಲಲ್ಲಿ ದಿನವೊಂದಕ್ಕೆ ಇಪ್ಪತ್ತೊಂದುಸಾವಿರದಾರುನೂರುವೇಳೆ ಜಪಿಸುವ ಪ್ರಾಕೃತಪ್ರಾಣಾಯಾಮರೂಪವಾದ ಹಂಸಮಂತ್ರಮಂ ವಿಪರೀತದಿಂ ಸೋಹಂಭಾವಮಂ ಮಾಡಿ ಸಕಾರದಿಂ ಪೂರಿಸಿ ಹಕಾರದೊಡನೆ ಕೂಡಿ ರೇಚಿಸುವ ವಾಯುವಂ ಭ್ರೂಮಧ್ಯದ ತ್ರಿಕೋಣಸ್ಥಾನದ ಶುದ್ಧಪ್ರಸಾದಬೀಜದಲ್ಲಿ ನಿಲಿಸಲದೇ ಆರಂಭಭೂಮಿಕೆಯೆನಿಸುವುದು. ಅದರ ಫಲವಾವುದೆಂದೊಡೆ—ಕಾಯಕ್ಕೆ ಕಾಂತಿಯೂ, ನಾಸಿಕಕ್ಕೆ ಸುಗಂಧವೂ, ಮುಖಕ್ಕೆ ಪ್ರಸನ್ನತೆಯೂ, ನೇತ್ರಂಗಳಿಗೆ ನಿರ್ಮಲತೆಯೂ,ಕರ್ಣಕ್ಕೆ ಮೃದಂಗ ಮೇಘ ಭೇರೀಧ್ವನಿಗಳ ಅಭಿವ್ಯಕ್ತಿಯೂ,ಮನಕ್ಕೆ ಆನಂದೋದ್ಬೋಧಕವೂ ಅಪ್ಪುದಾಗಿ,ಅದೇ ಮಂತ್ರಯೋಗವೆನಿಸುವುದು. ಅನಂತರದಲ್ಲೀ ಮನೋಮಾರುತಂಗಳೊಳ್ಕೂಡಿ ಗಗನಮಂಡಲದಲ್ಲಿ ಸ್ಥಿರವಾಗಿ ನಿಲಲದೇ ಘಟಭೂಮಿಕೆಯೆನಿಸುವುದು. ಅದರ ಫಲವಾವುದೆಂದೊಡೆ-ಕಹಳಾಶಂಖಘಂಟಾನಾದಂಗಳು ಸಾಕ್ಷಾತ್ಕಾರವಪ್ಪವಾಗಿ, ಅವೇಲಯಯೋಗವೆನಿಸಿದು. ತದನಂತರದಲ್ಲೀ ರೇಚಕಪೂರಕಂಗಳಲ್ಲದ ಕೇವಲಕುಂಭಕದಿಂ ದಿಂದ್ರಿಯ ಸಮಷ್ಟಿಯಿಂಕೂಡಿದ ಮನಂ ಗಂಭೀರವಾದ ದುಂದುಭಿಧ್ವಾನದಲ್ಲಿ ಮುಳುಂಗಲದೇ ಪ್ರಚರ (ಪ್ರಚಯ)ಭೂಮಿಕೆಯೆನಿಪುದು. ಅಣಿಮಾದಿಸಿದ್ಧಿಗಳೇ ಅದರ ಫಲಂಗಳಪ್ಪವಾಗಿ, ಅವೇ ಹಠಯೋಗವೆನಿಸುವುದು. ತದನಂತರದೊಳಾಗಂಭೀರನಾದವೇ ಪರನಾದವಲ್ಲದಂಗಿ ಧ್ಯಾನಧ್ಯೇಯ ಭಾವಾಭಾವಂಗಳಿಲ್ಲದೆ ಮಹಾಶೂನ್ಯದಲ್ಲಿ ಸಮರಸಭಾವಗೊಳಲದೇ ನಿಷ್ಪತ್ತಿಭೂಮಿಕೆಯೆನಿಸುವುದು.. ಅದಕೆ ಜೀವನ್ಮುಕ್ತಿಯೇ ಫಲವಪ್ಪುದವೇ ಅಮನಸ್ಕರಾಜಯೋಗವೆನಿಪುದಾಗಿ, ಸಕಲಯೋಗೋತ್ತರವಾದ ಈ ಅಮನಸ್ಕವನೇ ಅಭ್ಯಾಸಂಮಾಳ್ಪುದು. ಇದಕ್ಕೆ ಸಮ್ಮತಿ—"ಹಂಸೇತಿಜೀವಃಖಲುಷಟ್‌ಶತಾಧಿಕಂ ಸದಾಜಪತ್ಯೇಕಸಹಸ್ರವಿಂಶತಿಂ। ಜಪಸ್ಯಸರ್ವಸ್ಯಚವೈಪರೀತ್ಯಮಾರಂಭಭೂಮಿಂಪ್ರವದಂತಿಸಿದ್ಧಾಃ॥ ತತೋಮಿಳಿತ್ವೈವಮನೋಮರುಚ್ಚಗ್ರಂಥಿಂ ವಿಭಿದ್ಯತ್ರಯಮೇತಿ ಸುಸ್ಥಿರಃ। ಅಪೂರ್ವಕಾಯೋಗಗನಂಸುಪೂರ್ಣೋ ಘಟಾಖ್ಯಭೂಮಿಂಪ್ರವದಂತಿಸಿ

ದ್ಧಾಃ ॥ ಮನೋಮರುತ್ಪ್ರಯತ್ನೈನೈವಪೂರಾದ್ವಿನೈವ ಕುಂಭೇಸತಿ ಪೂರ್ಣಶೈಲೇ।ಮ ನೋಲಯಂ ಯಾತ್ಯನಿಶಂ ತಥಾಂತರೇವಪನಂತಿಸಿದ್ಧಾಃ ಪ್ರಚಯಾಖ್ಯಭೂಮಿಕಾಂ ॥ ನಿ ಷ್ಪತ್ತಿಭೂಮಾನಥಮಂದುಭಿಧ್ವನಿಸ್ಸಂಶ್ರೂಯತೇಸೋಪಿಲಯಂಪ್ರಯಾತಿ। ಸ್ವಪುಣ್ಯ ಪಾಪಂವಿಲಯಂಪ್ರಯಾತಿ ಕರೋತಿದೇಹಸ್ಯಲಯಂತಥಾತ್ಮನಃ'' ಎಂಬುದಾಗಿ, ಈ ನಾ ಲ್ಕುಪ್ರಕಾರದಿಂ ಸಾಧಿಸುವ ನಾದಬ್ರಹ್ಮವು ಘೋಷವೆಂದು ರಾವವೆಂದು ಸ್ವನವೆಂದು ಶಬ್ದವೆಂದು ಸ್ಫೋಟವೆಂದು ಧ್ವನಿಯೆಂದು ಝುಂಕಾರವೆಂದು ಧ್ವಂಕೃತಿಯೆಂದು ಕ್ರಮದಿಂದೆಂಟುಪ್ರಕಾರವಾಗಿರ್ಪುದಾಗಿ, ಶ್ರೋತ್ರಂಗಳ ನಂಗುಷ್ಠದಿಂನೊತ್ತಿ ಕೇ ಳ್ವನಾದವೇ ಘೋಷವೆನಿಸುವುದು. ಒಡೆಗಂಚಿನ ಸ್ವನಿಯಂತೆ ಕೇಳಲದೇ ರಾವವೆನಿ ಸುವುದು. ಉಪಾಂಗಸ್ವನಿಯಂತೆ ಕೇಳಲದೇ ಸ್ವನವೆನಿಸುವುದು. ನುಡಿವ ಅಕ್ಷರಂಗಳ ಲ್ಲಿ ಅನುಸ್ಯೂತವಾದುದೇ ಶಬ್ದವೆನಿಸುವುದು. ಮನದಲ್ಲಿ ಸಂಕಲ್ಪರೂಪದಿಂ ವರ್ತಿಸಲ ದೇ ಸ್ಫೋಟವೆನಿಸುವುದು. ಮೃದುವಾದ ವೀಣಾಧ್ವನಿಯಂತೆ ಘಂಟಾನಾದದ ಕಡೆ ಯಂತೆ ಕೇಳಲದೇ ಧ್ವನಿಯೆನಿಸುವುದು. ಕುಸುಮಾಮೋದಕ್ಕೆರಗಿದ ತುಂಬಿಯಧ್ವನಿ ಯಂತೆ ಕೇಳಲದೇ ಝುಂಕೃತವೆನಿಸುವುದು. ಶಂಖಕಹಳಾಧ್ವಾನದಂತೆ ಕೇಳಲದೇ ಧ್ವಂಕೃತವೆನಿಸುವುದು. ಆ ಧ್ವಂಕೃತವೇ ಸಕಲನಾದಲಯಸ್ಥಾನವಪ್ಪುದರಿಂದ ದೇ ಪ್ರಣವವೆನಿಸುವುದು. ಆ ಪ್ರಣವವೇ ಶಿವತತ್ವವೆನಿಸುವುದು. ಆ ಅಖಂಡಿತಾನಂ ದಸ್ವರೂಪವಾದ ಶಿವತತ್ವವೇ ಅಭಾಗವಾಗುಳ್ಳ ಪರಿಪೂರ್ಣವಾದ ಪರಮಕಾಷ್ಠೀ ಭಾವವೆನಿಸುವ ಶಿವಶಕ್ತಿಯಲ್ಲಿ ಜೀವನ್ಮುಕ್ತನ ಅನವಚ್ಛಿನ್ನ ಚೈತನ್ಯಂ ತದಾಕಾರದಿಂ ಕ್ಷೀರದೊಳ್‌ಕ್ಷೀರಂ ಘೃತದೊಳ್‌ಘೃತಂ ಬೆರೆದಂತೆ ಬೆರಸಿ, ಸರ್ವಸಾಕ್ಷಿಕತ್ವದಿಂ ನಿಸ್ತ ರಂಗದಲ್ಲಿ ನಿಂದ ನಿಲವೇ ಅಮನಸ್ಕರಾಜಯೋಗವೆಂಬುದಕೆ ಸಂಮತಿ—"ಮಮಾತ್ಮೀ ಯಮಿದಂಸೂಕ್ಷ್ಮಶರೀರಂನಾದಸಂಜ್ಞಕಂ । ಪಶುಪಾಶಾಪನೋದಾಯ ಪ್ರಕಾಶೀ ಕೃತಮದ್ಭುತಂ ॥ ಘೋಷೋರಾವಸ್ಸ್ವನಶ್ಶಬ್ದಃ ಸ್ಫೋಟಾಖ್ಯೋಧ್ವನಿರೇವಚ । ಝುಂಕಾರೋಧ್ವಂಕೃತಶ್ಚೈವ ಶಬ್ದವಿಷ್ಟಾಷ್ಟಧೀರವಃ ॥ ಶ್ರವಣಾಂಗುಷ್ಠಸಂಯೋ ಗಾದ್ಯಶ್ಶಬ್ದಸ್ಸಂಪ್ರಜಾಯತೇ । ದೀಪ್ತವಹ್ನಿಶಿಖಾತುಲ್ಯೋ ಘೋಷಇತ್ಯಭಿಧೀಯ ತೇ॥ ಭಿನ್ನಕಾಂಸಸ್ತುಯಥಾರೂಕ್ಷೋ ರಾವೇತಿಪರಿಕೀರ್ತಿತಃ । ತತೋವಂಶಧ್ವನಿಸ್ಸೂ ಕ್ಷ್ಮನಿವಾತ ವೃಷ್ಟಿಸನ್ನಿಭಃ॥ಸಸ್ವನಃಪರಸುಸೂಕ್ಷ್ಮೋ ಯತ್ತತ್ಪರಮನಾಮಯಂ । ಚತುರ್ಥಸ್ತುಮಹಾಶಬ್ದ ಸ್ಸರ್ವಶಬ್ದೈಕಚಾರಕಃ ॥ ಪಂಚಮಸ್ತುಮಹಾಶಬ್ದ ಸ್ಸರ್ವ ಯೋಗಿಹಿತಾವಹಃ । ಮನಸ್ಸದಾಕ್ರಮಧ್ಯಾನಾ ಸ್ಫೋಟಪನಷಡೀರಿತಃ ॥ ಶಾ ಸ್ವತೋಽನಾದಿರವ್ಯಕ್ತ ಸ್ಸಶಬ್ದಧ್ವನಿಲಕ್ಷಣಃ । ಮೃದುವೀಣಾಸ್ವನಶ್ಶಬ್ದ ಶ್ಶಾಂತಘಂ ಟಾನಿನಾದವತ್ ॥ ಕುಸುಮಾಮೋದಮತ್ತಾನಾಂ ಷಟ್ಪದಾನಾಮಿವಧ್ವನಿಃ । ಝುಂ ಕಾರಸ್ತುಸ್ಮೃತಶ್ಶಬ್ದ ಸ್ಸಮಸ್ತಪರಮೇಶ್ವರಿ ॥ ಶಂಖಕಹಳಸಂಘಾತ ವಜ್ರಪಾತಸು ಭೈರವಃ । ಧ್ವಂಕೃತೇಷುಸ್ಮೃತಶ್ಶಬ್ದ ಶ್ಶಬ್ದಾಂತಲಯಮಾಲಯಂ ॥ ಸಶಿವಂಶಿವತ

ತ್ವಂಸ್ಯಾದ್ಧ್ವಂಕೃತಃಪ್ರಣವಸ್ಸ್ಮೃತಃ। ಅಸ್ಯಸಂಶ್ರವಣಾದ್ದೇವಿ ನಾದಸ್ಯಾಯತಲೋಚನೇ ॥ ಪರಮಾಸ್ಯಾತ್ತುನಿರ್ವಾಣಂ ಛಿನ್ನಪಾಶನಿಬಂಧನಂ'' ಎಂಬ ಶಿವಾಗಮಪ್ರಮಾಣದಿಂ ದಿವ್ಯನಾದಾನುಸಂಧಾನದಿಂದಾದ ಅಮನಸ್ಕರಾಜಯೋಗದಿಂ ಪರಮಕೈವಲ್ಯಪ್ರಾಪ್ತಿ ಯುಪ್ಪುದೆಂಬುದಭಿಪ್ರಾಯಂ.) ॥೫೧॥

ಸೂ॥ ಈ ಅಮನಸ್ಕವೆಂಬ ನಿಷ್ಪತ್ತಿಯೋಗಮುಂ ಪಡೆದ ಮಹಾಪುರುಷಂಗೆ ದೇಹವಿಕಾರಗಳೊಂದೂ ತೋರವೆಂದು ಪೇಳ್ದಪಂ:—

ಶ್ಲೋ॥ ತಾಪತ್ರಯಂ ನವವಿಧವ್ಯವಹಾರಭಾವಾಷ್ಷಟ್ಕೌಶಿಕಾನಿ ಷ
ಡಮಿತ್ರಕಪಂಚಕೋಶಾಃ ॥ ಷಡ್ಭಾವನಾವಿಕೃತಯಶ್ಚ ಷ
ಡೂರ್ಮಯಶ್ಚ ನಿಷ್ಪತ್ತಿಯೋಗಮಹತಾಂ ಭುವಿನಸ್ಯುರೇವ ॥೫೨

ಟೀ॥ ತಾಪತ್ರಯಂ-ಹೊರಗೆ ವ್ಯಾಧಿರೂಪದಿಂದೊಳಗೆ ರಾಗದ್ವೇಷಾದಿಗಳಿಂ ಪುಟ್ಟುವ ಆಧ್ಯಾತ್ಮಿಕವೆನಿಪ ದುಃಖವೂ, ರಾಜಚೋರಗಜವ್ಯಾಘ್ರ ಸರ್ಪಭೂತಾದಿಗಳಿಂ ಪುಟ್ಟುವ ಆಧಿಭೌತಿಕವೆಂಬ ದುಃಖವೂ, ಶೀತಾತಪಾದಿಗಳಿಂ ಯಕ್ಷರಾಕ್ಷಸಾದಿಗಳಿಂ ಪುಟ್ಟುವ ಆಧಿದೈವಿಕವೆಂಬ ದುಃಖವೂ, ನವವಿಧವ್ಯವಹಾರಭಾವಾಃ-ನವವಿಧ-ಪಂಚೇಂದ್ರಿಯ ಅಂತಃಕರಣಚತುಷ್ಟಯವೆಂಬ ನವವಿಧವಾದುವುಗಳ, ವ್ಯವಹಾರ-ವ್ಯಾಪಾರಂಗಳ, ಭಾವಾಃ ಸ್ವರೂಪಂಗಳು, ಷಟ್ಕೌಶಿಕಾನಿ-ಮಜ್ಜೆ-ಅಸ್ಥಿ-ಶುಕ್ಲ-ಮೇದಸ್ಸು-ರಕ್ತ-ಮಾಂಸಗಳೆಂಬ ಷಟ್ಕೌಶಿಕಗಳು, ಪಂಚಕೋಶಾಃ-ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯವೆಂಬ ಪಂಚಕೋಶಂಗಳು, ಷಡ್ಭಾವನಾವಿಕೃತಯಶ್ಚ-ಅಸ್ತಿ-ಉಂಟೆಂಬ, ಜಾಯತೆ-ಹುಟ್ಟುತ್ತಿದ್ದೀತೆಂಬ, ವಿಪರಿಣಮತೆ-ಹೆಚ್ಚುಲುದ್ಯೋಗಿಸುತಿದ್ದೀತೆಂಬ, ಪರಿವರ್ತತೆ-ಹೆಚ್ಚುತ್ತಿದ್ದೀತೆಂಬ, ಅಪಕ್ಷೀಯತೆ ಕುಗ್ಗುತ್ತಿದ್ದೀತೆಂಬ, ವಿನಶ್ಯತೆ-ಕೆಡುತ್ತಿದ್ದೀತೆಂಬ ಷಡ್ಭಾವವಿಕಾರಗಳು, ಷಡೂರ್ಮಯಶ್ಚ-ಕ್ಷುತ್ತು ಪಿಪಾಸೆ ಶೋಕ ಮೋಹ ಜನನ ಮರಣಗಳೆಂಬ ಷಡೂರ್ಮಿಗಳು, ನಿಷ್ಪತ್ತಿಯೋಗಮಹತಾಂ-ನಿಷ್ಪತ್ತಿಯೋಗವುಳ್ಳ ಮಹಾಪುರುಷಗ್ಗೆ, ಭುವಿ-ಲೋಕದಲ್ಲಿ, ನಸ್ಯುರೇವ-ಆಗುತ್ತಿರವು.(ತಾತ್ಪರ್ಯ-ಈ ಸಮಸ್ತದೇಹಧರ್ಮಗಳೂ ದೇಹಿಗಳಿಗಲ್ಲದೆ ನಿರ್ದೇಹಿಯಾದ ಜೀವನ್ಮುಕ್ತಂಗಿಲ್ಲವೆಂಬುದಭಿಪ್ರಾಯಂ.) ॥೫೨॥

ಸೂ॥ ಅನಂತರದಲ್ಲಿ ಈ ಜ್ಞಾನಯೋಗದಿಂದಪ್ಪ ಅನಿಷ್ಟಪರಿಹಾರದ ನಿಷ್ಟಪ್ರಾಪ್ತಿಯಂ ಪೇಳ್ದಪಂ:—

ಶ್ಲೋ॥ ಮಹಾದೀಪ್ತವಹ್ನಿರ್ದಹೇಚ್ಛುಷ್ಕಮಾರ್ದ್ರಂ ಯಥಾಪುಣ್ಯ
ಪಾಪಾತ್ಮಕಂಸರ್ವಕರ್ಮ । ತಥಾನಿರ್ದಹೇತ್ತತ್ಕ್ಷಣಾದ್ಜ್ಞಾನ
ವಹ್ನಿಸ್ತತೋ ಮುಕ್ತಿಮಾಯಾತಿನಿಷ್ಪತ್ತಿಯೋಗೀ ॥೫೩॥

ಟೀ॥ ಮಹಾದೀಪ್ತವಹ್ನಿಃ-ಅತಿವಿಶೇಷವಾಗಿ ಉರಿಮಲ್ಪಟ್ಟಗ್ನಿಯು, ಶುಷ್ಕಂ-ಒಣಗಿದಮರವನು, ಆರ್ದ್ರಂ-ಹಸಿಯುಮರವನು, ಯಥಾ-ಹೇಂಗೆ, ದಹೇತ್-ಸುಡುವುದೋ, ತಥಾ-ಹಾಂಗೆ, ಪುಣ್ಯಪಾಪಾತ್ಮಕಂ-ಪುಣ್ಯಪಾಪರೂಪವಾಗಿರ್ಪಂಥ, ಸರ್ವಕರ್ಮ-ಸಂಚಿತಪ್ರಾರಬ್ಧರೂಪವಾದ ಕರ್ಮವನು, ಜ್ಞಾನವಹ್ನಿಃ-ಆತ್ಮನೆಂಬ ಪ್ರಣವವೆಂಬ ಕಾಷ್ಠದ್ವಯಂಗಳ ಮಥನದಿಂ ಜನಿತವಾದ ಮನೋನ್ಮನೀ ಜ್ಞಾನರೂಪವಾದಗ್ನಿಯು, ತತ್ಕ್ಷಣಾತ್-ತಾನು ಪ್ರವೇಶಿಸಿಹ ಕ್ಷಣವಲ್ಲಿಯೇ,ನಿರ್ದಹೇತ್-(“ಆತ್ಮಾನಮರಣಿಂಕೃತ್ವಾ ಪ್ರಣವಂಚೋತ್ತರಾರಣಿಂ । ಧ್ಯಾನನಿರ್ಮಥನಾಭ್ಯಾಸಾ ತ್ಸರ್ವಪಾಪಕ್ಷಯೋಭವೇತ್” ಎಂಬ ಶ್ರುತಿಪ್ರಮಾಣದಿಂ) ಚೆನ್ನಾಗಿ ಸುಡುವುದು. ತತಃ-ಆ ಜ್ಞಾನದದೆಸೆಯಿಂದ, ನಿಷ್ಪತ್ತಿಯೋಗೀ-ನಿಷ್ಪತ್ತಿಭೂಮಿಕಾಪಿಸ್ಥನಾದ ಯೋಗೀಶ್ವರನು, ಮುಕ್ತಿಂ-ಶಿವಸಮಾನತಾಸ್ವರೂಪವಾದ ಮೋಕ್ಷವನು, ಯಾತಿ-ಎಯ್ದುತ್ತಿಹನು. (ತಾತ್ಪರ್ಯ-ಯೋಗೀಶ್ವರ ನಾವಿಧಿನಿಷೇಧಕರ್ಮಾನುಷ್ಠಾನವಿಲ್ಲದಿರ್ಪುದರಿಂ ದಧೋಮಾಯೆಯಂ ನೂಂಕಿ ದಿವ್ಯದೀಕ್ಷೆಯಿಂದಾಣವಮಂ ನಿವಾರಿಸಿ, ನಾದಬಿಂದುಕಲಾನುಸಂಧಾನದಿಂದಾದ ದಿವ್ಯಾನಾದಮಂ ತಣಿಯುಲುಂಡು, ಪರಮವೈರಾಗ್ಯದಿಂದಾ ಬೈಂದವಬಂಧಮಂ ನಿರಾಕರಿಸಿ, ಸಕಲಸಾಕ್ಷಿಕನಾಗಿ ಅನಾಖ್ಯಮಾದ ನಿರಾಲಂಬವಾದ ಅಗ್ರಾಹ್ಯವಾದ ಪ್ರಮಾಣಾತೀತವಾದ ಸಕಲ ತತ್ವೋತ್ತೀರ್ಣವಾದ ಸ್ವಪರಪ್ರಕಾಶವಾದ ನಿಜವಸ್ತುವಿನಲ್ಲಿ ಸಾಮರಸ್ಯವಂ ಪಡೆದು ಪುನರಾವೃತ್ತಿಯಿಲ್ಲದಿರ್ಪನೆಂಬುದಭಿಪ್ರಾಯಂ. “ಅನಾಖ್ಯೇತುನಿರಾಲಂಬೇ ಅಗ್ರಾಹ್ಯೇಮಾನವರ್ಜಿತೇ । ನಿಸ್ತತ್ವೇಯೋಜಿತೋಮುಕ್ತ ಇತಿಶಾಸ್ತ್ರಸ್ಯನಿಶ್ಚಯಃ” ಎಂದುದಾಗಿ. ॥೫೩॥

ಸೂ॥ ಈ ಪೂರ್ವೋಕ್ತಸಾಧಕನೀ ಅಮನಸ್ಕಯೋಗದೊಳ್ಪಲಕಾಲವಿರ್ದು, ಪೂರ್ವಯೋಗಕ್ಕಿಳಿದರೂ ಈ ಯೋಗವೇ ಸಕಲಕರ್ಮಕ್ಷಯಮಂ ಮಾಳ್ಪುದೆಂದು ಪೇಳ್ದಪಂ:—

ಶ್ಲೋ॥ ಅತ್ಯಲ್ಪದೀಪಶ್ಸುಮಹತ್ತಮಸ್ತು ವಿನಾಶಯೇದ್ಯೋನಿಬಿಡಂಹಠಾದ್ಯಥಾ । ಅಲ್ಪೋಪ್ಯಹೋಯೋಗಸಮಾಧಿರೇಷಾ ವಿನಾಶಯೇತ್ಕರ್ಮಶುಭಾಶುಭಂತಥಾ ॥೫೪॥

ಟೀ॥ ಯಃ-ಆವುದಾನೊಂದು, ಅತ್ಯಲ್ಪದೀಪಃ-ಅತ್ಯಲ್ಪಪ್ರಕಾಶವಾದದೀಪವು, ನಿಬಿಡಂ-ದಟ್ಟೈಸಿದಂಥ, ಸುಮಹತ್ತಮಸ್ತು-ಅತ್ಯಂತವಿಶೇಷಮಾದ ಕತ್ತಲೆಯನಾದರೂ, ಹಠಾತ್-ಬಲಾತ್ಕಾರದಿಂದೆ, ಯಥಾ-ಹೇಂಗೆ, ವಿನಾಶಯೇತ್-ಕೆಡಿಪುದೋ, ತಥಾ-ಹಾಂಗೆ, ಏಷಾ-ಈ, ಯೋಗಸಮಾಧಿಃ-ಅಮನಸ್ಕಯೋಗಸಮಾಧಿಯು, ಅಲ್ಪೋಪಿ-ಅಲ್ಪವಾಯಿತ್ತಾದರೂ, ಶುಭಾಶುಭಂಕರ್ಮ-ಪುಣ್ಯಪಾಪರೂಪವಾದ ಕರ್ಮವನು, ವಿನಾಶಯೇತ್-ಕೆಡಿಪುದು. ಅಹೋ-ಆಶ್ಚರ್ಯವು. ॥೫೪॥

ಸೂ॥ ಈಗಲೀಯೋಗಾಭ್ಯಾಸವಮಂ ಮಾಡಲುದ್ಯೋಗಿಸಿದ ಮಾತ್ರಕ್ಕೇ ಬರ್ಪ ಫಲವುಮಂ ಪೇಳ್ದಪಂ:—

ಶ್ಲೋ॥ ಯದಿಯೋಯೋಗಕಮುದ್ಯತೋಽವನಿತಳೇಯಾತ್ಯಂತ
ರಾವಾಽಽಪದಂ ಶಿವಲೋಕಂಸಮವೇತ್ಯಶಾಶ್ವತಸುಖಂ ತ
ತ್ರಾನುಭೂಯಸ್ವಯಂ॥ ಅಭಿಜಾಯೇತಮನಸ್ವಿನಾಂ ಕೃ
ತಿಮತಾಂಯಸ್ಮಿನ್ಕುಲೇಯೋಗಿನಾಂ ಸತುಸಂಪ್ರಾಪ್ಯನಿವ
ರ್ತ್ತಯತ್ಯಭವಯೋಗಂ ತಂ ಶಿವಾಖ್ಯಂಪುನಃ ॥೫೫॥

ಟೀ॥ ಯಃ-ಆವಾತನು, ಅವನಿತಳೇ-ಭೂಲೋಕದಲ್ಲಿ, ಯೋಗಕಮುದ್ಯತಃ-ಶಿವಯೋಗಾಭ್ಯಾಸವಂ ಮಾಡಲುದ್ಯುಕ್ತನಾಗಿ, ಯದಿ-ಎತ್ತಲಾನೂ, ಅಂತರಾವಾ-ಮಧ್ಯದಲ್ಲಾದರೂ, ಆಪದಂ-ದೇಹತ್ಯಾಗರೂಪವಾದ ವಿಪತ್ತನು, ಯಾತಿ-ಎಯ್ದುತ್ತಿಹನೋ, ಸತು-ಆತನಾದೊಡೆ, ಶಿವಲೋಕಂ-ಶಿವಸಃಲೋಕ್ಯಪದವೆನಿಸುವ ಶಿವಲೋಕವನು, ಸಮವೇತ್ಯ-ಪಡೆದು, ತತ್ರ-ಆ ಕೈಲಾಸಾಧಿಷ್ಠಾನದಲ್ಲಿ, ಶಾಶ್ವತಸುಖಂ-ಹರಿಕಂಚಿಲ್ಲದಸುಖವನು, ಅನುಭೂಯ-ಅನುಭವಿಸಿ, ಸ್ವಯಂ-ತಾನು, ಮನಸ್ವಿನಾಂ-ವಿವೇಕಿಗಳಾದಂಥ, ಕೃತಿಮತಾಂ-ಶಾಸ್ತ್ರಸಂಪನ್ನರಾದಂಥ, ಯೋಗಿನಾಂ-ಯೋಗೀಶ್ವರರ, ಯಸ್ಮಿನ್-ಆವುದಾನೊಂದು, ಕುಲೇ-ಉತ್ತಮಕುಲದಲ್ಲಿ, ಅಭಿಜಾಯೇತ-ಹುಟ್ಟುವನೋ, ಪುನಃ-ಮರಳಿ, ತಂ-ಆ ಪೂರ್ವಜನ್ಮದಲ್ಲುದ್ಯೋಗಿಸಲ್ಪಟ್ಟಂಥ, ಶಿವಾಖ್ಯಂ-ಶಿವಸಂಜ್ಞೆಯುಳ್ಳಂಥ, ಅಭವಯೋಗಂ-ಜೀವನ್ಮುಕ್ತಿಯೋಗವೆನಿಸುವ ಅಮನಸ್ಕಯೋಗವನು, ಸಂಪ್ರಾಪ್ಯ-ಪಡೆದು, ನಿವರ್ತ್ತಯತಿ-ಸಂಸಾರವಿಚ್ಛಿತ್ತಿಯಂ ಮಾಡುತ್ತಿರ್ಪನು. ॥

ಸೂ॥ ಈ ಯೋಗೀಶ್ವರನ ಯೋಗಸಾಮರ್ಥ್ಯದಿಂದನೇಕರು ಕೃತಾರ್ಥರಪ್ಪರೆಂದು ಪೇಳ್ದಪಂ:—

ಶ್ಲೋ॥ ಬ್ರಹ್ಮಣಿಪರೇಹೃದಯಮಪಿಯಸ್ಯಲೀನಂ ತಸ್ಯಪಿತರಾವಿ
ಹಪರೇಽತಿಚರಿತಾರ್ಥೌ। ತಸ್ಯಕುಲಜಾಸ್ಸ್ಯುರನಘಾಜಗ
ತಿಸರ್ವೇತಸ್ಯಪದಸಂಘಟಿತಭೂರತಿಪವಿತ್ರಾ ॥೫೬॥

ಟೀ॥ ಯಸ್ಯ-ಆವಾತನ, ಹೃದಯಮಪಿ-ಮನವು, ಪರೇ-ಪರಮಾತ್ಮಸ್ವರೂಪವಾಗಿರ್ಪಂಥ, ಬ್ರಹ್ಮಣಿ-ನಾದಬ್ರಹ್ಮದಲ್ಲಿ, ಲೀನಂ-ಲಯಿಸಲ್ಪಟ್ಟಿತೋ, ತಸ್ಯ-ಆತನ ಪಿತರೌ-ತಾಯ್ತಂದೆಗಳು, ಇಹಪರೇ-ಇಹಲೋಕಪರಲೋಕವಲ್ಲಿ, ಅತಿಚರಿತಾರ್ಥೌ-ಅತ್ಯಂತಕೃತಾರ್ಥರುಗಳು, ತಸ್ಯ-ಆ ಯೋಗೀಶ್ವರನ, ಕುಲಜಾಃ-ಉಭಯಕುಲದಲ್ಲಿ ಜನಿತರಾದಂಥ, ಸರ್ವೇ-ಸಮಸ್ತರೂ, ಜಗತಿ-ಲೋಕದಲಿ, ಅನಘಾಃ-ಪಾಪರಹಿತರುಗಳು, ಸ್ಯುಃ-ಆಗುತ್ತಿಹರು, ತಸ್ಯ-ಆ ಯೋಗೀಶ್ವರನ, ಪದಸಂಘಟಿತಭೂಃ-ಪಾದಂಗ

ಳಿಂ ಮೆಟ್ಟಿದ ಭೂಮಿಯು, ಅತಿಪವಿತ್ರಾ-ಅತ್ಯಂತಪವಿತ್ರವಾದಂತಹುದು. (ತಾತ್ಪ ರ್ಯ—॥ ಏಕೋಹಿಯತ್ರಶಿವಯೋಗಸಮಾಹಿತಾತ್ಮಾ ಪದ್ಭ್ಯಾಂಪವಿತ್ರಯತಿಪಾವನ ಪಾದುಕಾಭ್ಯಾಂ'' ಎಂಬ ಪುರಾಣವಚನದಿಂದವೂ, ॥ ರೂಪೇರೂಪೇದಶಪೂರ್ವಾನ್ ಪು ನಾತಿದಶೋತ್ತರಾನಾಚಕ್ಷುಃಪಙ್ತ್ತಿಂಪುನಾತಿ'' ಎಂಬ ಶ್ರುತಿಪ್ರಮಾಣದಿಂದವೂ, ಈ ಶಿವ ಯೋಗೀಶ್ವರ ನೆಲ್ಲಿ ಜನಿಸುವ ನಲ್ಲಿ ತನ್ನಿಂಪೂರ್ವವಾದ ದಶಕುಲವನೂ ತನ್ನಿಂದುತ್ತರ ವಾದ ದಶಕುಲವನೂ ಕೃತಾರ್ಥರಂಮಾಡಿ, ತಾನಿರ್ದ ಭೂಮಿಯಂ ಪುಣ್ಯಕ್ಷೇತ್ರ ಮಂ ಮಾಳ್ಪನೆಂಬುದಭಿಪ್ರಾಯಂ.) ॥೫೭॥

ಸೂ॥ ಅನಂತರದಲ್ಲಿ ಈ ದಿವ್ಯಯೋಗವ ನಾವವಿಘ್ನಗಳೂ ತೊಡಗದಂತೆ ಉತ್ತ ಮಸ್ಥಲವಲ್ಲಿ ಅಭ್ಯಾಸಮಾಳ್ಪುದೆಂದು ಪೇಳ್ದಪಂ:—

ಶ್ಲೋ॥ ತಸ್ಮಾತ್ಸಂಸೇವ್ಯಏವಂವಿಧ ಇಹ ಯಮಿನಾಂ ಶ್ರೇಯಸೇ
ಯೋಗಮಾರ್ಗೋ ಹ್ಯಾಲಸ್ಯಂ ಧೂರ್ತಸಂಗಂಸ್ವಜನಕುಮ
ತಶಾಸ್ತ್ರಾಂಧಕಾರೋರುರೋಗಾನ್ । ಜಿತ್ವಾಽಮೂನ
ನ್ತರಾಯಾನ್ಪುನರಪಿಚ ಮಹಾಯೋಗಜೈಶ್ವರ್ಯಸಿದ್ಧಿಂ ತ್ಯ
ಕ್ತ್ವಾಽಸ್ಥಿತ್ವಾ ಸುದೇಶೇ ಸುಜನಪರಿವೃತೇ ಽಬಾಧಿತೇ ಧ
ರ್ಮರಾಜ್ಯೇ ॥೫೮॥

ಟೀ॥ ತಸ್ಮಾತ್-ಆ ಯೋಗೀಶ್ವರನಿಂ ಸಮಸ್ತರೂ ಕೃತಾರ್ಥರಪ್ಪರಾದಕಾರ ಣದಿಂದೆ, ಏವಂವಿಧಃ-ಈ ಪೂರ್ವೋಕ್ತಪ್ರಕಾರವಾದಂಥ, ಯೋಗಮಾರ್ಗಃ-ಅಮನಸ್ಕ ಯೋಗಮಾರ್ಗವು, ಹಿ-ಪ್ರಸಿದ್ಧವಾಗಿ, ಆಲಸ್ಯಂ-ಮಹಾಹಾರ ಯೋಗನಿಷಿದ್ಧಾಹಾರಂಗ ಳಿಂದಪ್ಪ ಆಲಸ್ಯವನು, ಧೂರ್ತಸಂಗಂ-ದುರ್ಜನಸಂಗವನು, ಸ್ವಜನಕುಮತಶಾಸ್ತ್ರಾಂ ಧಕಾರೋರುರೋಗಾನ್-ಸ್ವಜನ-ತನ್ನ ಬಂಧುಜನರೆಂಬ, ಕುಮತಶಾಸ್ತ್ರಾಂಧಕಾ ರ-ಭ್ರಾಂತವಾದ ದರ್ಶನಾಂತರಗಳ ಶಾಸ್ತ್ರಾಂಧಕಾರವೆಂಬ, ಉರುರೋಗಾನ್- ದೊಡ್ಡಿತಾದರೋಗಂಗಳೆಂಬಂಥ, ಅಮೂನ್-ಈ, ಅಂತರಾಯಾನ್-ವಿಘ್ನಂಗಳನು, ಜಿ ತ್ವಾ-ಜಯಿಸಿ, ಪುನರಪಿಚ-ಮರಳಿಯೂ, ಯೋಗಜೈಶ್ವರ್ಯಸಿದ್ಧಿಂ-ಯೋಗಾಭ್ಯಾಸದಿಂ ಜನಿತವಾದ ಅಣಿಮಾದ್ಯವಾಂತರಸಿದ್ಧಿಯನು, ತ್ಯಕ್ತ್ವಾ-ಬಿಟ್ಟು, ಸುಜನಪರಿವೃತೇ- ಕರಣತ್ರಯದೋಷವಿಲ್ಲದ ಸುಜನರಿಂ ಬಳಸಲ್ಪಟ್ಟಂಥ, ಅಬಾಧಿತೇ-ರಾಜಚೋರಾದಿ ಬಾಧೆಯಿ-ಲ್ಲದಿರ್ಪಂಥ, ಧರ್ಮರಾಜ್ಯೇ-ಪುಣ್ಯರಾಜ್ಯವೆನಿಸುವಂಥ, ಸುದೇಶೇ-ಉತ್ತಮ ದೇಶದಲ್ಲಿ, ಸ್ಥಿತ್ವಾ-ಇರ್ದು, ಯಮಿನಾಂ-ಯತೀಶ್ವರರ್ಗೆ, ಶ್ರೇಯಸೇ-ಮೋಕ್ಷಕ್ಕೋಸು ಗ, ಇಹ-ಈ ಲೋಕದಲ್ಲಿ, ಸಂಸೇವ್ಯಃ-ಚೆನ್ನಾಗಿ ಅಭ್ಯಾಸವಂ ಮಾಡಲುಯೋಗ್ಯವು.॥ ೨

ಸೂ॥ ಆಚಾರ್ಯನು ಮುಮುಕ್ಷುಜನಾನುಗ್ರಹಾರ್ಥವಾಗಿ ಈ ಪೇಳ್ದ ೯೦೩

ಸ್ತ್ರಕ್ಕೆ ಪ್ರಮಾಣಪೂರ್ವಕತ್ವಮಂ ಪೇಳುತ್ತೀ ಶಾಸ್ತ್ರಪರಿಸಮಾಪ್ತಿಯಂ ಮಾಡು ತಿರ್ದಪಂ:—

ಶ್ಲೋ॥ ಶಿವಾಗಮರಹಸ್ಯಾರ್ಥಾನ್ ಸಿದ್ಧಸಿದ್ಧಾಂತಪದ್ಧತಿಂ ।
ಸಂಕ್ಷೇಪತಃಕೃತಾಽಽಲೋಡ್ಯ ಶಿವಯೋಗಪ್ರದೀಪಿಕಾ॥೩೪॥

ಟೀ॥ ಶಿವಾಗಮರಹಸ್ಯಾರ್ಥಾನ್-ಕಾಮಿಕಾದಿವಾತುಲಾಂತವಾದ ಶಿವಾಗಮಂಗಳಲ್ಲಿ ಅತಿಗೋಪ್ಯವಾದರ್ಥಂಗಳನು, ಸಿದ್ಧಸಿದ್ಧಾಂತಪದ್ಧತಿಂ-ಭುಸುಂಡಮಾಮುದ್ರೀವಾದಿ ಯೋಗಸಿದ್ಧರ ಸಿದ್ಧಾಂತಮಾರ್ಗಂಗಳನು, ಆಲೋಡ್ಯ-ವಿಚಾರಿಸಿ, ಸಂಕ್ಷೇಪತಃ ಸಂಕೋಚವಹತನದಿಂದ, ಶಿವಯೋಗಪ್ರದೀಪಿಕಾ-ಶಿವಯೋಗಪ್ರದೀಪಿಕೆಯು,ಕೃತಾ-ಮಾಡಲ್ಪಟ್ಟಿತು. ॥೩೪॥

ಸೂ॥ ವೇದಾಗಮಂಗಳೊ ಳತಿರಹಸ್ಯಮಾದ ಶಿವಯೋಗಸ್ವರೂಪವನಭಿವ್ಯಕ್ತವಾಗಿ ಕೈದೋರಿಕೆಯನಿಸಿ ಪೇಳ್ದ ಶಿವಯೋಗಶಾಸ್ತ್ರವನಯೋಗ್ಯಂಗೆ ಕೊಡಲ್ಮಹಾದೋಷ ವಪ್ಪುದೆಂದು ಪೇಳ್ದಪಂ:—

ಶ್ಲೋ॥ ಅಭ್ಯಾಸಶೂರಾಯ ಜಿತೇಂದ್ರಿಯಾಯ ಗುರೌಶಿವೇಭಕ್ತಿ
ಸುನಿಶ್ಚಲಾಯ । ದೇಯಂರಹಸ್ಯಂಶಿವಯೋಗಶಾಸ್ತ್ರಂ
ಯೋಮೂಢದಾತಾಗುರುಪಾತಕೀಸ್ಯಾತ್ ॥೩೫॥

ಟೀ॥ ಅಭ್ಯಾಸಶೂರಾಯ-ಯೋಗಾಭ್ಯಾಸದಲ್ಲಿ ಸಮರ್ಥನಾದಂಥ, ಜಿತೇಂದ್ರಿಯಾಯ-ಇಂದ್ರಿಯವಿಕಾರಮಂ ಜಯಿಸಿದಂಥ, ಗುರೌ-ಉಪದೇಶಮಾಡಿದಾಚಾರ್ಯನಲ್ಲಿಯೂ, ಶಿವೇ-ವಿಚಿತ್ರರೂಪದಿಂಧ್ಯೇಯನಾಗಿ ತನಗೆ ಮುಕ್ತಿಸ್ಥಾನವೆನಿಸುವ ಪರಶಿವನಲ್ಲಿಯೂ,ಭಕ್ತಿಸುನಿಶ್ಚಲಾಯ-ನಿಶ್ಚಲಭಕ್ತಿಯುಳ್ಳಾತಂಗೋಸುಗ,ರಹಸ್ಯಂ-ಅತಿಗೋಪ್ಯವಾದಂಥ, ಶಿವಯೋಗಶಾಸ್ತ್ರಂ-ಈ ಶಿವಯೋಗಸ್ವರೂಪವನುಪದೇಶಂಮಾಳ್ಪ ಶಾಸ್ತ್ರವು, ದೇಯಂ-ಕೊಡಲುಯೋಗ್ಯವು, ಯಃ-ಆವಾತನು, ಮೂಢದಾತಾ-ಅಯೋಗ್ಯನಾದ ಮೂಢಂಗೆ ಕೊಡುತಿರ್ಪನೋ, ಆತನು, ಗುರುಪಾತಕೀ-ಗುರುದ್ರೋಹವಂ ಮಾಡಿದಾತನು, ಸ್ಯಾತ್-ಅಹನು. (ತಾತ್ಪರ್ಯ—ಲೌಕಿಕನಾದ ರಾಜನೊ ಳತಿರಹಸ್ಯಾರ್ಥಮಂ ಪ್ರಕಟಂಮಾಡಿದಾತನು ಸ್ವಾಮಿದ್ರೋಹಿಯಪ್ಪಂತೆ, ವೇದಾಗಮಂಗಳೊಳತಿರಹಸ್ಯಾರ್ಥಮಂ ಪೇಳ್ವೀಯೋಗಶಾಸ್ತ್ರವಮಂ ಖ್ಯಾತಿಪೂಜಾಲಾಭಾರ್ಥಮಾಗಿ ಅಯೋಗ್ಯಂಗೆ ಕೊಡಲಾತನೇ ಗುರುದ್ರೋಹಿಯಪ್ಪನು. ‹‹ ಭಯಾದಿಮೋಹತೋದೀಕ್ಷಾಂ ಯಃಕುರ್ಯಾತ್ತಸ್ಯದೇವತಾಃ । ಮಂತ್ರಸಿದ್ಧಿಂಹರಂತ್ಯಾಶು ನರಕೇಪಾತಯಂತಿಚ ›› ಎಂಬ ಆಗಮಪ್ರಮಾಣದಿಂದವೂ ‹‹ ನಾಪ್ರಶಾಂತಾಯದಾತವ್ಯಂ ನಾಪುತ್ರಾಯ [illegible]ಪುನಃ । ಯಸ್ಯದೇವೇಪರಾಭಕ್ತಿ ರ್ಯಥಾದೇವೇತಥಾಗುರೌ । ತಸ್ಯೈತೇಕಥಿತಾಹ್ಯರ್ಥಾಃ, [illegible]

ರ್ಥಾಃ ಪ್ರಕಾಶಂತೇಮಹಾತ್ಮನಃ" ಎಂಬ ಶ್ರುತಿಪ್ರಮಾಣದಿಂದವೂ ಯೋಗ್ಯನಾದಾತಂಗೆ ಕೊಡಲುಚಿತವೆಂಬುದಭಿಪ್ರಾಯಂ.) ||೫೯||

ಸೂ|| ಈ ಪ್ರಕಾರದಿಂದೆ ಸದಾಶಿವಯೋಗೀಶ್ವರ ನೀಚತುರ್ವಿಧಯೋಗಸ್ವರೂಪಮಂ ಪೇಳ್ವ ಶಿವಯೋಗಪ್ರದೀಪಿಕೆಯೆಂಬ ದಿವ್ಯಶಾಸ್ತ್ರವ ನುಪದೇಶಂಮಾಡಿ, ಬಳಿಕದರೊಳ್ಕಂಡ ಗ್ರಂಥಂಗಳ್ಪೋಗದಂತೆ ಪ್ರತಿಪಟಲಗ್ರಂಥಸಂಖ್ಯೆಗಳಂ ಪೇಳುತ್ತೆ, ಆಮೂಲಾಂತವಾದ ಗ್ರಂಥಸಂಖ್ಯೆಯುಂ ಪೇಳ್ದಪಂ:—

ಶ್ಲೋ|| ಪುರಬಾಣಾವಜಸಾಯಕಾ ವಥಸಮುದ್ರರ್ತೂಕರೇಷೂ
ತಥಾ ನಿಧಿಬಾಣಾವಿತಿಪಂಚಧಾ ಪಟಲಿಕಾಸ್ವೇವಂಶಿವಾಂ
ಕಂಮುಯಾ। ಪರಮೇತ್ಯಾದಿಕಶಬ್ದಜಾತವಿವಿಧಚ್ಛಂದೋ
ಭಿರೇತತ್ಕೃತಂ ಗಿರಿನಾಗಾಂಬಕಸಂಖ್ಯಯಾ ಸಕಲಪದ್ಯೈ
ಶ್ಚೈವಯೋಗಾರ್ಥಕೈಃ || * * *

ಟೀ|| ಪುರಬಾಣೌ-ಪುರವೆಂದೊಡೆ ಮೂರು, ಬಾಣವೆಂದೊಡೈದರ ಸಂಕೇತವಪ್ಪುದರಿಂದಾ ಮೂರರಹಿಂದೈದ ನಿಡಲ್ಪ್ರಥಮಪಟಲಕ್ಕೆ ಗ್ರಂಥ ೫೩. ಅಜಸಾಯಕೌ-ಅಜವೆಂದೊಡೆ ಬ್ರಹ್ಮರು ಒಂಭತ್ತು, ಸಾಯಕವೆಂದೊಡೆ ಬಾಣವೈದು, ಮೊದಲಂತೆ ಲೆಕ್ಕವಿಡಲ್ ದ್ವಿತೀಯಪಟಲಗ್ರಂಥಂಗಳು ೫೯. ಅಥ-ಅನಂತರದಲ್ಲಿ, ಸಮುದ್ರರ್ತೂ-ಸಮುದ್ರವೆಂದೊಡೆ ನಾಲ್ಕು, ಋತುವೆಂದರಾರು, ಅಂತೂ ತೃತೀಯಪಟಲಗ್ರಂಥಂಗಳು ೬೪. ಕರೇಷೂ-ಕರವೆನಲೆರಡು, ಇಷುವೆನಲೈದು, ಅಂತೂ ಚತುರ್ಥಪಟಲಗ್ರಂಥಂಗಳು ೫೨. ತಥಾ-ಹಾಂಗೆ, ನಿಧಿಬಾಣೌ-ನಿಧಿಯೆನಲೊಂಭತ್ತು, ಬಾಣವೆನಲೈದು, ಅಂತೂ ಪಂಚಮಪಟಲಗ್ರಂಥಂಗಳು ೫೯. ಇತಿ-ಈ ಪ್ರಕಾರದಿಂದೆ, ಪಂಚಧಾ-ಅಯ್ದು ಪ್ರಕಾರವಾದಂಥ, ಪಟಲಿಕಾಸು-ಪಟಲಂಗಳಲ್ಲಿ, ಏವಂ-ಈ ಪ್ರಕಾರವಾದ, ಶಿವಾಂಕಂ-ನಿರ್ಮಲವಾದ ಲೆಕ್ಕವುಳ್ಳುದಾಗಿ, ಮಯಾ-ಎನ್ನಿಂದೆ, ಪರಮೇತ್ಯಾದಿಕಶಬ್ದಜಾತವಿವಿಧಚ್ಛಂದೋಭಿಃ-ಪರಮೇತ್ಯಾದಿಕ-ಪರಮಯೋಗಿಯೆಂಬುದೇ ಆದಿಯಾಗುಳ್ಳ, ಶಬ್ದ-ಶಬ್ದಂಗಳ, ಜಾತ-ಸಮೂಹವುಳ್ಳ, ವಿವಿಧ-ನಾನಾಪ್ರಕಾರವಾದ, ಛಂದೋಭಿಃ-ಛಂದಸ್ಸುಗಳಿಳ್ಳಂಥ, ಯೋಗಾರ್ಥಕೈಃ-ಮಂತ್ರಾದಿಚತುರ್ವಿಧಯೋಗವೇ ಅರ್ಥವಾಗುಳ್ಳಂಥ, ಸಕಲಪದ್ಯೈಶ್ಚ-ಪಂಚಪಟಲದ ಸಮಸ್ತವೃತ್ತಂಗಳಿಂದೆ, ಗಿರಿನಾಗಾಂಬಕಸಂಖ್ಯಯೈವ-ಗಿರಿಯೆನಲೇಳು,ನಾಗವೆನಲೆಂಟು, ಅಂಬಕವೆನಲೆರಡು,ಅಂತೂ ೨೮೭ ಎಂಬ, ಸಂಖ್ಯಯೈವ-ಲೆಕ್ಕದಿಂದವೇ,ಏತತ್-ಈ ಶಿವಯೋಗಪ್ರದೀಪಿಕೆಯೆಂಬ ಶಾಸ್ತ್ರವು, ಕೃತಂ-ಮಾಡಲ್ಪಟ್ಟಿತು.



ಶ್ರವಣಂ ನಾದಶ್ರವಣಂ ದರ್ಶನಮವಲೋಕನಂಹಿತಾರಸ್ಯ ।
ಹೃದ್ಗತಿರಮನಸ್ಕಸ್ಯಾಸ್ಯ ದಸ್ಯಾಶ್ಶಿವಯೋಗದೀಪಿಕಾಟೀಕಾಯಾಃ ॥



ಇತಿ ಶ್ರೀಮದ್ವೇದವೇದಾಂತಾಗಮ ಪುರಾಣಸ್ಮೃತೀತಿಹಾಸ ಪ್ರತಿಪಾದಿತ ಶ್ರೀವೀರ ಶೈವಮಾರ್ಗ ಸ್ಥಾಪನಾಚಾರ್ಯ ಶ್ರೀಬಸವಾರಾಧ್ಯ ವಿರಚಿತಕರ್ನಾಟಕ ಟೀಕಾ ವಿರಾಜಿತಾಯಾಂ-ಶ್ರೀಚೆನ್ನಸದಾಶಿವಯೋಗೀಶ್ವರ ವಿರಚಿತಾಯಾಂ ಶಿವ ಯೋಗಪ್ರದೀಪಿಕಾಯಾಂ ಅಮನಸ್ಕಯೋಗವಿಧಾನಂ ನಾಮ

ಪಂಚಮಃಪಟಲಃ.

---

ಓಂ ತತ್ಸತ್.



